# ಕೃಷಿ ಜಾನಪದ ಮತ್ತು ಮಹಿಳೆ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ಅಧ್ಯಯನ
ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಸುಮಂಗಲಾ ಅತ್ತಿಗೇರಿ

ಮಾರ್ಗದರ್ಶಕರು
ಡಾ. ಮಂಜುನಾಥ ಬೇವಿನಕಟ್ಟಿ
ಪ್ರಾಧ್ಯಾಪಕರು



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೧೯೯೮

# ಕೃಷಿ ಜಾನಪದ ಮತ್ತು ಮಹಿಳೆ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ಸುಮಂಗಲಾ ಅತ್ತಿಗೇರಿ

ಮಾರ್ಗದರ್ಶಕರು

ಡಾ. ಮಂಜುನಾಥ ಬೇವಿನಕಟ್ಟಿ

ಪ್ರಾಧ್ಯಾಪಕರು





ಜಾನಪದ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೭

# ಪ್ರಮಾಣ ಪತ್ರ

'**ಕೃಷಿ ಜಾನಪದ ಮತ್ತು ಮಹಿಳೆ**' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಸಮಾಜವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೮.೦೭.೨೦೦೭


ಸುಮಂಗಲಾ ಅತ್ತಿಗೇರಿ
ಸಂಶೋಧನಾ ವಿದ್ಯಾರ್ಥಿನಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ದೃಢೀಕರಣ ಪತ್ರ

ಸುಮಂಗಲಾ ಅತ್ತಿಗೇರಿ ಅವರು 'ಕೃಷಿ ಜಾನಪದ ಮತ್ತು ಮಹಿಳೆ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಸಮಾಜವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೮.೦೭.೨೦೦೭

ಡಾ. ಮಂಜುನಾಥ ಬೇವಿನಕಟ್ಟಿ
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಕೃತಜ್ಞತೆ

ಎಂ.ಎ.,ಪಿಎಚ್.ಡಿ. ಸಂಯೋಜಿತ ಪದವಿ ಕೋರ್ಸ್‌ನ್ನು ಪ್ರಾರಂಭಿಸಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯಕ್ಕೆ ಮತ್ತು ಈ ಕೋರ್ಸ್ ಪ್ರಾರಂಭವಾಗುವುದಕ್ಕೆ ಕಾರಣಕರ್ತರಾದ ಡಾ.ಎಚ್.ಜೆ. ಲಕ್ಕಪ್ಪಗೌಡ ಅವರಿಗೆ ಮತ್ತು ಡಾ.ಕೆ.ವಿ. ನಾರಾಯಣ ಅವರಿಗೆ, ಡಾ. ಕರೀಗೌಡ ಬೀಚನಹಳ್ಳಿಯವರಿಗೆ ಕೃತಜ್ಞತೆಗಳು. ಅಲ್ಲದೆ ಈ ಹಿಂದೆ ಕುಲಪತಿಗಳಾಗಿದ್ದ ಡಾ.ಬಿ.ಎ. ವಿವೇಕ ರೈ ಅವರಿಗೆ, ಕುಲಸಚಿವರಾದ ವಿ. ಶಂಕರ್ ಅವರಿಗೆ, ಅಧ್ಯಯನಾಂಗದ ನಿರ್ದೇಶಕರಾದ ಡಾ.ಟಿ.ಆರ್. ಚಂದ್ರಶೇಖರ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ.

‘ಕೃಷಿ ಜಾನಪದ ಮತ್ತು ಮಹಿಳೆ’ ಎಂಬ ಸಂಶೋಧನಾ ಮಹಾಪ್ರಬಂಧದ ರಚನೆಗೆ ಮಾರ್ಗದರ್ಶನ ಮಾಡಿದ ಜಾನಪದ ವಿಭಾಗದ ಪ್ರಾಧ್ಯಾಪಕರಾದ ಡಾ.ಮಂಜುನಾಥ ಬೇವಿನಕಟ್ಟಿ ಅವರಿಗೆ ಅನಂತ ಕೃತಜ್ಞತೆಗಳು ಸಲ್ಲುತ್ತವೆ. ಅದೇ ರೀತಿ ಜಾನಪದ ವಿಭಾಗದ ಅಧ್ಯಾಪಕರೂ ನನ್ನ ಗುರುವೃಂದದವರೂ ಆದ ಡಾ.ಸ.ಚಿ. ರಮೇಶ, ಡಾ. ಮೊಗಳ್ಳಿ ಗಣೇಶ, ಡಾ.ಹೆಬ್ಬಾಲೆ ಕೆ. ನಾಗೇಶ, ಡಾ. ಹರಿಶ್ಚಂದ್ರ ದಿಗ್ಸಂಗಿಕರ್, ಡಾ.ಸಿ.ಟಿ. ಗುರುಪ್ರಸಾದ ಅವರುಗಳಿಗೆ ಮತ್ತು ವಿಭಾಗದ ಸಿಬ್ಬಂದಿ ವರ್ಗದವರಾದ ಶ್ರೀ ವಿರುಪಾಕ್ಷಪ್ಪ ಹಾಗೂ ನಬಿ ಇವರುಗಳಿಗೆ ಕೃತಜ್ಞತೆಗಳು ಸಲ್ಲುತ್ತವೆ.

ಅಧ್ಯಯನದ ಸಂದರ್ಭದಲ್ಲಿ ಸೂಕ್ತ ಸಲಹೆ-ಸೂಚನೆಗಳನ್ನು ನೀಡಿದ ಡಾ. ಬಸವರಾಜ ಮಲಶೆಟ್ಟಿರ, ಡಾ. ಬಂಜಗೆರೆ ಜಯಪ್ರಕಾಶ, ಡಾ. ಅಮರೇಶ ನುಗುಡೋಣಿ, ಡಾ. ರಹಮತ್ ತರೀಕೆರೆ, ಡಾ.ವಿ.ಬಿ. ತಾರಕೇಶ್ವರ, ಡಾ.ಸಿ. ಮಹದೇವ, ಡಾ.ಜೆ. ಕೃಷ್ಣ, ಶ್ರೀಶೈಲ ಹುದ್ದಾರ ಇವರುಗಳನ್ನು ಈ ಸಂದರ್ಭದಲ್ಲಿ ನೆನೆದುಕೊಳ್ಳುತ್ತೇನೆ.

ಈ ಸಂಶೋಧನಾ ಪ್ರಬಂಧ ರೂಪುಗೊಳ್ಳುವಿಕೆಯ ಸಮಯದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕಾರ ನೀಡಿದ ಸ್ನೇಹಿತರಾದ ಸುಧಾ, ತಾರಾ, ಕಲಾ, ಜೋತ್ಸ್ನಾ, ಉಷಾ, ಶೈಲಾ, ರಾಧ, ವಿಜ್ಜು, ರೇಖಾ, ಅಕ್ಕಮ್ಮ, ಸವಿತ, ಅನು, ಗೌರಿ, ವಿಮಲಾ, ಬೇಬಿ, ಉಮಾ, ಸುಕನ್ಯಾ, ಚಂದ್ರಭಾಗ ಬಿದರಿ, ನಿವೇದಿತಾ, ಮೇಘಾ, ಅನುಪಮ, ಸುಮತಿ, ದೀಪ, ಜ್ಯೋತಿ ಇವರುಗಳಿಗೆ ಮತ್ತು ಪ್ರಕಾಶಣ್ಣ, ಶಿವು, ಮೋಹನ್ ಎಸ್., ಅರುಣಕುಮಾರ, ಚಂದ್ರಪ್ಪ ಹಾಗೂ ವೇಣುಗೋಪಾಲ ಇವರುಗಳನ್ನು ಸಹ ನೆನೆಸಿಕೊಳ್ಳುತ್ತೇನೆ.

ನನ್ನ ಅಧ್ಯಯನಕ್ಕೆ ಎಲ್ಲ ರೀತಿಯಿಂದಲೂ ಸಹಾಯ-ಸಹಕಾರ ನೀಡುತ್ತಲೇ ಬಂದಿರುವ ಪ್ರೀತಿಯ ಅಮ್ಮ, ಅಜ್ಜ, ಅತ್ತೆ-ಮಾವಂದಿರಿಗೂ, ಮಾವಂದಿರ ಮಕ್ಕಳಿಗೂ, ಮತ್ತಿತರ ಆತ್ಮೀಯರಿಗೂ ಕೃತಜ್ಞತೆಗಳು ಸಲ್ಲುತ್ತವೆ.

ಈ ಸಂಶೋಧನಾ ಬರವಣಿಗೆಯನ್ನು ತಾಳ್ಮೆಯಿಂದ ಡಿ.ಟಿ.ಪಿ. ಮಾಡಿಕೊಟ್ಟ ಶ್ರೀಮತಿ ಎ. ನಾಗವೇಣಿ ಅವರಿಗೆ ನನ್ನ ಕೃತಜ್ಞತೆಗಳು.

ಸುಮಂಗಲಾ ಅತ್ತಿಗೇರಿ

# ಪರಿವಿಡಿ

## ಕೃಷಿ ಜಾನಪದ ಮತ್ತು ಮಹಿಳೆ

# ಹಾವೇರಿ ಜಿಲ್ಲಾ ನಕ್ಷೆ



## ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

೧.೧ ಪ್ರಸ್ತಾವನೆ

೧.೨ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

೧.೩ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೪ ಅಧ್ಯಯನದ ಪರಿಕಲ್ಪನೆಗಳು

೧.೫ ಅಧ್ಯಯನದ ಸ್ವರೂಪ

# ಅಧ್ಯಾಯ ೧

# ಅಧ್ಯಯನ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

## ೧.೧ ಪ್ರಸ್ತಾವನೆ

ಮನುಷ್ಯ ಜೀವಿಗಳು ತಮ್ಮ ಜೀವನ ನಿರ್ವಹಣೆಗಾಗಿ ಅನುಸರಿಸಿಕೊಂಡು ಬಂದ ಕೆಲಸಗಳು ಹಲವಾರಿವೆ. ಅವುಗಳಲ್ಲಿ ಅತಿ ಪ್ರಾಚೀನ ಕಾಲದಿಂದಲೂ ರೂಪಿಸಿಕೊಂಡು ಬಂದಿರುವ ಕಸುಬುಗಳಲ್ಲಿ ಕೃಷಿಯು ಪ್ರಮುಖವಾದುದು. ಕೃಷಿ, ಅಲೆಮಾರಿಯಾಗಿದ್ದ ಮನುಷ್ಯರು ಒಂದೆಡೆ ನೆಲೆ ನಿಲ್ಲುವಂತೆ ಮಾಡಿತು. ನಾಗರೀಕತೆಯ ಆರಂಭದಲ್ಲಿ ಗಂಡು ಬೇಟೆಯಾಡಲು ಹೊರಗೆ ಹೋದಾಗ ಮನೆಯ ಅಂಗಳದಲ್ಲಿ ಬೀಜ ನೆಟ್ಟು, ಸಸಿ ಬೆಳೆಸಿ ಕೃಷಿಯ ಆವಿಷ್ಕಾರಕ್ಕೆ ಕಾರಣಳಾದವಳು ಹೆಣ್ಣು. ಇದು ಕೃಷಿಗೆ ಮಹಿಳೆ ಕೊಟ್ಟ ಮಹತ್ವದ ಕೊಡುಗೆಯೇ ಆಗಿದೆ. ಆದರೆ ನಾಗರೀಕತೆ ಬೆಳೆದಂತೆ ಕೃಷಿಯ ಉತ್ಪಾದನಾ ವಿಧಾನಗಳ ನೈಪುಣ್ಯತೆ ಸಾಧಿಸತೊಡಗಿದಂತೆ, ಕೃಷಿಯಲ್ಲಿ ಪುರುಷ ಪ್ರವೇಶಿಸಿ ಅದರ ಸ್ವಾಮ್ಯತೆಯನ್ನು ತನ್ನ ತೆಕ್ಕೆಗೆ ತೆಗೆದುಕೊಂಡ. ಆಗ ಮಹಿಳೆಯು ಭೂಮಿಯ ಮೇಲಿನ ತನ್ನ ಅಧಿಕಾರಯುತ ಹಕ್ಕನ್ನು ಕಳೆದುಕೊಂಡಳು ಎಂಬುದಾಗಿ ಅನೇಕ ಮಾನವಶಾಸ್ತ್ರಜ್ಞರು ಅಭಿಪ್ರಾಯ ಪಡುತ್ತಾರೆ. ಹಾಗಿದ್ದಾಗಲೂ ಮಹಿಳೆ ಕೃಷಿಯಿಂದ ಸಂಪೂರ್ಣವಾಗಿ ದೂರ ಸರಿದಿದ್ದಾಳೆಂದಲ್ಲ. ಇಂದಿಗೂ ಕೂಡ ಹೊಲಗದ್ದೆಗಳಲ್ಲಿ ಹೆಣ್ಣು ಗಂಡಿನೊಂದಿಗೆ ದುಡಿಯುತ್ತಲೇ ಬಂದಿರುವುದನ್ನು ನೋಡಿದರೆ, ಕೃಷಿಯಲ್ಲಿ ಮಹಿಳೆ ನಿರಂತರವಾಗಿ ತೊಡಗಿಕೊಂಡಿರುವುದು ಸ್ಪಷ್ಟವಾಗುತ್ತದೆ. ಹೀಗೆ ಮಹಿಳೆ ಗಂಡಿನ ದುಡಿಮೆಗೆ ಹೆಗಲು ಕೊಟ್ಟರೂ ಕೃಷಿಯ ಸಾಮಾಜಿಕ ಮತ್ತು ಕೌಟುಂಬಿಕ ವಲಯದಲ್ಲಿ ಅವಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತಲೇ ಬಂದಿದ್ದಾಳೆ. ಅಲ್ಲದೆ ಈವರೆಗೆ ನಡೆದ ಬಹುಪಾಲು ಅಧ್ಯಯನಗಳು ಕೂಡಾ ಪುರುಷ ಕೇಂದ್ರಿತ ಸಮಾಜದ ಚಿಂತನೆಗಳಾಗಿದ್ದು, ಅವು ಗಂಡಿನ ಕಾರ್ಯ ಚಟುವಟಿಕೆಯನ್ನು ಮಾತ್ರ ದಾಖಲಿಸುತ್ತಾ ಬಂದಿವೆಯೇ ಹೊರತು ಹೆಣ್ಣಿನ ಕಾರ್ಯ ಚಟುವಟಿಕೆಯನ್ನು, ಮತ್ತವಳ ಅಸ್ಮಿತೆಯನ್ನಲ್ಲ.

ಹಾಗಿದ್ದರೆ, ಚರಿತ್ರೆಯುದ್ದಕ್ಕೂ ಮಹಿಳೆ ಏನಾಗಿದ್ದಳು? ಅವಳ ಕಾರ್ಯಚಟುವಟಿಕೆಗಳು ಏನಾಗಿದ್ದವು? ಸಂಸ್ಕೃತಿಯ ಕಟ್ಟುವಿಕೆಯಲ್ಲಿ ಅವಳು ತಟಸ್ಥವಾಗಿದ್ದಳೆ? ಎನ್ನುವ ಪ್ರಶ್ನೆಯನ್ನು ಇತ್ತೀಚಿಗೆ ಸ್ತ್ರೀವಾದಿ ಅಧ್ಯಯನಗಳು ಎತ್ತುತ್ತಿವೆ. ಈ ಹೊತ್ತಿನಲ್ಲಿ ಮಹಿಳಾ ಅನನ್ಯತೆಯನ್ನು ಕಟ್ಟಿಕೊಳ್ಳಬೇಕೆನ್ನುವ ಅರಿವು

ಮೂಡಿರುವುದರಿಂದ ಶತಮಾನಗಳಿಂದ ಚರಿತ್ರೆಯುದ್ದಕ್ಕೂ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಮಹಿಳೆಯನ್ನು ಕುರಿತು ವಿವಿಧ ನೆಲೆಯಲ್ಲಿ ಅಧ್ಯಯನಗಳು ನಡೆಯುತ್ತಿವೆ. ಇದು ಈ ಹೊತ್ತಿನ ಜರೂರು ಕೂಡಾ ಆಗಿದೆ. ಈ ಹಿನ್ನೆಲೆಯಲ್ಲಿಯೇ ಪ್ರಸ್ತುತ 'ಕೃಷಿ ಜಾನಪದ ಮತ್ತು ಮಹಿಳೆ' ಎನ್ನುವ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಸಮಾಜ ಮತ್ತು ಸಂಸ್ಕೃತಿಯಲ್ಲಿ ಸ್ತ್ರೀಯರನ್ನು ವ್ಯವಸ್ಥಿತವಾಗಿ ನಿಯಂತ್ರಿಸಿಕೊಂಡು ಬರಲಾಗಿದೆ. ಏಕೆಂದರೆ ಈಗಿರುವ ಸಮಾಜ ಪುರುಷ ಪ್ರಧಾನತೆಯಿಂದ ಕೂಡಿರುವುದು. ಆದರೆ ಎಲ್ಲಾ ಮಹಿಳೆಯರು ಒಂದೇ ಬಗೆಯ ನಿಯಂತ್ರಣಕ್ಕೆ ಒಳಪಟ್ಟಿದ್ದಾರೆಂದು ಹೇಳಲಿಕ್ಕಾಗದು. ಕಾರಣ ಎಲ್ಲಾ ಮಹಿಳೆಯರು ಒಂದೇ ಅಲ್ಲ. ಅದಕ್ಕಾಗಿಯೇ ಸಮಾಜದಲ್ಲಿ ಮಹಿಳೆಯ ಸ್ಥಾನಮಾನದ ಬಗೆಗಾಗಲಿ, ಅವಳ ಅನನ್ಯತೆಯ ಬಗೆಗಾಗಲಿ ಅರಿಯಬೇಕಾದರೆ ವಿವಿಧ ಕ್ಷೇತ್ರದಲ್ಲಿ ತೊಡಗಿಕೊಂಡ ಮಹಿಳೆಯರ ಬಗೆಗೆ ಅಥವಾ ವಿವಿಧ ಸಾಮಾಜಿಕ ಸ್ತರದಲ್ಲಿ ಜೀವಿಸುತ್ತಿರುವ ಮಹಿಳೆಯರ ಬಗೆಗೆ ಪ್ರತ್ಯೇಕವಾಗಿಯೇ ಅಧ್ಯಯನಗಳು ನಡೆಯಬೇಕಿದೆ. ಈ ಹಿನ್ನೆಲೆಯಲ್ಲಿಯಲ್ಲಿ ಪ್ರಸ್ತುತ "ಕೃಷಿ ಜಾನಪದ ಮತ್ತು ಮಹಿಳೆ" ಎನ್ನುವ ಈ ಅಧ್ಯಯನವು ಕೃಷಿಕ್ಷೇತ್ರದಲ್ಲಿ ತೊಡಗಿಕೊಂಡ ಮಹಿಳೆಯನ್ನು ಹೇಗೆ ಕಾಣಲಾಗಿದೆ? ಕೃಷಿಯಲ್ಲಿ ಅವಳ ಪಾಲುದಾರಿಕೆ ಯಾವ ಬಗೆಯದು? ಆಕೆಗಿದ್ದ ಸ್ಥಾನಮಾನಗಳೇನು? ಎಂಬುವುದನ್ನು ಕೃಷಿ ಜಾನಪದದ ನೆಲೆಯಲ್ಲಿ ನೋಡಲಾಗುತ್ತದೆ.

ಈಗಾಗಲೆ ಪುರುಷೋತ್ತಮ ಬಿಳಿಮಲೆಯವರು (೧೯೯೭) ಮಹಿಳಾ ಜಾನಪದವನ್ನು ಅರ್ಥಮಾಡಿಕೊಳ್ಳಲು ನಾವು ಯಾವ್ಯಾವ ಮೂಲಗಳಿಗೆ ತೆರಳಬೇಕು ಎನ್ನುವುದರ ಕುರಿತು ಈ ರೀತಿಯ ವಿಚಾರಗಳನ್ನು ವ್ಯಕ್ತಪಡಿಸುತ್ತಾರೆ. 'ಮೊದಲನೆಯದಾಗಿ ಜಾನಪದದ ಮೌಖಿಕ ಸಾಹಿತ್ಯ ಪ್ರಕಾರಗಳನ್ನು ಗಮನಿಸಬೇಕು. ಆ ಸಾಹಿತ್ಯ ರೂಪಗಳು ಹೆಣ್ಣನ್ನು ಹೇಗೆ ಕಂಡರಿಸಲಾಗಿದೆ ಎಂಬುದನ್ನು ಸೂಕ್ಷ್ಮವಾಗಿ ಅಭ್ಯಾಸ ಮಾಡಬೇಕಾಗಿದೆ. ಎರಡನೆಯದಾಗಿ ಜಾನಪದ ಭೌತಿಕ ರೂಪಗಳಲ್ಲಿ ಮಹಿಳೆಯ ಸ್ಥಾನಮಾನಗಳೇನೆಂಬುದನ್ನು ಗಮನಿಸಬೇಕಾಗಿದೆ. ಉದಾಹರಣೆಗೆ ಮನೆಯನ್ನು ಒಂದು ಸಂಕೀರ್ಣ ಘಟಕವೆಂದು ಭಾವಿಸುವುದಾದರೆ, ಅವರಲ್ಲಿ ಮಹಿಳೆಯ ತೊಡಗಿಸಿಕೊಳ್ಳುವಿಕೆ ಯಾವ ಬಗೆಯದು? ಮನೆಯ ಯಾವ ಯಾವ ಭಾಗಗಳಲ್ಲಿ ಆಕೆ ಓಡಾಡಬಹುದು ಮತ್ತು ಎಲ್ಲಿ ಆಕೆಯ ಪ್ರವೇಶವನ್ನು ನಿಷೇಧಿಸಲಾಗಿದೆ? ಎಂಬಿತ್ಯಾದಿ ಕುತೂಹಲ ವಿಷಯಗಳತ್ತ ನಾವು ಗಮನಹರಿಸಬೇಕಾಗಿದೆ. ಮೂರನೆಯದಾಗಿ ಸಾಮಾಜಿಕ ಸಂಪ್ರದಾಯಗಳಲ್ಲಿ ಮಹಿಳೆಯ ಸ್ಥಾನ ನಿರ್ದೇಶನ ಹೇಗಿದೆ ಎಂಬುದನ್ನು ಪರಿಶೀಲಿಸಬೇಕಾಗಿದೆ. ನಾಲ್ಕನೆಯದಾಗಿ ಕಲೆಗಳಲ್ಲಿ ಕಂಡುಬರುವ ಸ್ತ್ರೀಯರ ಅಸ್ತಿತ್ವದ ರೀತಿ-ನೀತಿಗಳನ್ನು ನಾವು ಪರಿಚಯಿಸಿಕೊಳ್ಳಬೇಕಾಗಿದೆ' (೨೨೨-೨೪) ಎಂಬ ಅಭಿಪ್ರಾಯಪಟ್ಟಿರುವರು.

ಕೃಷಿ ಮಹಿಳೆಯನ್ನು ಕುರಿತು ನಡೆಸಿದ ಪ್ರಸ್ತುತ ಅಧ್ಯಯನವನ್ನು ಪುರುಷೋತ್ತಮ ಬಿಳಿಮಲೆಯವರು ಹೇಳಿರುವ ಮಾದರಿಯಲ್ಲಿಯೇ ಕೈಗೊಳ್ಳಲಾಗಿದ್ದು ಈ ಅಧ್ಯಯನದಲ್ಲಿ ಅವರು ಹೇಳಿರುವ ಮೇಲಿನ ಮೂರು ಅಂಶಗಳನ್ನು ಮಾತ್ರ ಅಳವಡಿಸಿಕೊಳ್ಳಲಾಗಿದೆ. ಅಂದರೆ ಇಲ್ಲಿ ಕೃಷಿ ಜಾನಪದದ ಮೌಖಿಕ

ಸಾಹಿತ್ಯ ಪ್ರಕಾರಗಳನ್ನು, ಭೌತಿಕ ರೂಪಗಳನ್ನು, ಸಾಮಾಜಿಕ ಸಂಪ್ರದಾಯಗಳ ಹಿನ್ನೆಲೆಯಲ್ಲಿಯೇ ಪ್ರಧಾನವಾಗಿ ವಿಷಯವನ್ನು ವಿಸ್ತರಿಸಿಕೊಳ್ಳಲಾಗಿದೆ. ಆದರೆ ಈ ಅಂಶಗಳನ್ನು ಅಧ್ಯಯನದಲ್ಲಿ ವೈಭವೀಕರಣದ ನೆಲೆಯಲ್ಲಿ ನೋಡದೆ ಅವುಗಳನ್ನು ಕುಲಂಕುಶವಾಗಿ ಪರಿಶೀಲಿಸಿ ಅವುಗಳ ವಾಸ್ತವಿಕತೆಗೆ ಹೆಚ್ಚು ಗಮನ ಕೊಡಲಾಗಿದೆ.

ಅಲ್ಲದೆ ಈ ಹೊತ್ತಿನಲ್ಲಿ ಜಾನಪದವನ್ನು ನಾವು ಕೇವಲ ಹಿಂದಿನದು, ಹಳೆಯದು, ಪ್ರಾಚೀನವಾದುದು ಎಂದಷ್ಟೆ ಭಾವಿಸುತ್ತಿಲ್ಲ. ಏಕೆಂದರೆ ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಂತೆ ಜಾನಪದ ಎಂಬುದು ನಿರಂತರವಾದುದು. ಇದಕ್ಕೆ ಸಾವಿಲ್ಲ, ಜಾನಪದಕ್ಕೆ ಚಲನಶೀಲ ಗುಣವಿದೆ, ಎಂದೆಲ್ಲ ಭಾವಿಸುವುದಾದರೆ ಜಾನಪದ ಅಧ್ಯಯನದಲ್ಲಿ ಈ ಹೊತ್ತಿನ ವಾಸ್ತವಗಳನ್ನು ಗಮನಿಸಬೇಕಾಗುತ್ತದೆ. ಕಾರಣ ಕೃಷಿ ವಲಯದ ಮಹಿಳೆಯ ಬಗೆಗೆ ಜಾನಪದದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವಲ್ಲಿ ಕೃಷಿ ವಲಯದ ಈ ಹೊತ್ತಿನ ಬದುಕು-ಬವಣೆಗಳನ್ನು ಅಲ್ಲಗಳೆಯುವಂತಿಲ್ಲ. ಅದಕ್ಕಾಗಿಯೇ ಕೃಷಿ ಮಹಿಳೆಯನ್ನು ಕುರಿತ ಈ ಅಧ್ಯಯನದಲ್ಲಿ ಕೃಷಿ ಮಹಿಳೆಯ ವಾಸ್ತವದ ಬದುಕಿನ ಬಗೆಗೂ ಗಮನಹರಿಸಲಾಗಿದೆ. ಹಾಗೊಂದು ವೇಳೆ ವಾಸ್ತವ ಬದುಕನ್ನು ಅನುಲಕ್ಷಿಸದೇ ಹೋದರೆ ಆ ಅಧ್ಯಯನ ಕೇವಲ ಗತದ ವಿಚಾರಗಳನ್ನು ಮಾತ್ರ ಹೇಳಿ, ಕೇವಲ ಗತದ ಇತಿಹಾಸವಾಗಿ ಗತಕಾಲದಲ್ಲಿಯೇ ನಿಂತು ಬಿಡುವ ಅಪಾಯಗಳಿವೆ. ಜೊತೆಗೆ ಇವತ್ತಿನ ಆಧುನಿಕ ಯುಗದಲ್ಲಿ ಕೃಷಿ ಬದುಕಿನ ಆತಂಕ ತಲ್ಲಣ ಮತ್ತು ಸಮಸ್ಯೆಗಳನ್ನು ಅರಿಯದೇ ಹೋದರೆ ಕೇವಲ ಗತದ ಅಧ್ಯಯನವಾಗಿ ಉಳಿದು ಬಿಡುತ್ತವೆ. ಹಾಗಾಗಿ ಕೃಷಿ ಮಹಿಳೆಯ ಸಮಕಾಲೀನ ಬದುಕಿನ ವಿವರಗಳನ್ನು ಸಹ ಈ ಅಧ್ಯಯನವು ಒಳಗೊಂಡಿದೆ.

### ೧.೨ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಜಾನಪದ ಕ್ಷೇತ್ರದಲ್ಲಿ ಕೃಷಿ ಜಾನಪದವನ್ನು ಕುರಿತಂತೆ ವಿಸ್ತೃತ ನೆಲೆಯಲ್ಲಿ ಅಧ್ಯಯನಗಳು ನಡೆದದ್ದು ಕಡಿಮೆ. ಆದರೆ ಎಂ.ಜಿ. ಈಶ್ವರಪ್ಪನವರು ಮೊದಲ ಬಾರಿಗೆ ಈ ಬಗೆಯ ಪ್ರಯತ್ನ ಮಾಡಿದರು. ೧೯೭೩ರಲ್ಲಿ ಮೈಸೂರು ವಿಶ್ವವಿದ್ಯಾಲಯದ ವತಿಯಿಂದ ಬಿ.ಆರ್. ಪ್ರಾಜೆಕ್ಟ್‌ನಲ್ಲಿ ನಡೆದ ಜಾನಪದ ವಿಚಾರಸಂಕಿರಣದಲ್ಲಿ ಮೊಟ್ಟಮೊದಲ ಬಾರಿಗೆ 'ಕೃಷಿ ಜಾನಪದ' ಎಂಬ ಲೇಖನವನ್ನು ಮಂಡಿಸಿದರು. ಮುಂದೆ ಇವರು 'ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ' ಎಂಬ ವಿಷಯವನ್ನು ಕುರಿತು ಸಂಶೋಧನಾ ಪ್ರಬಂಧ ಮಂಡಿಸಿ ಮೈಸೂರು ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪದವಿ ಪಡೆದರು. ಮುಂದೆ ಇದು ೧೯೯೫ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಗೊಂಡಿದೆ. ಜಾನಪದ ಅಧ್ಯಯನ ಕ್ಷೇತ್ರಕ್ಕೆ ಇವರ ಈ ಅಧ್ಯಯನ ಹೊಸ ಮೈಲುಗಲ್ಲನ್ನು ಸೃಷ್ಟಿಸಿತು.

ಈ ಅಧ್ಯಯನದ ಆರಂಭದಲ್ಲಿ ಸಾಂಪ್ರದಾಯಿಕವೆಂಬಂತೆ ಜಾನಪದ ಪರಿಕಲ್ಪನೆಯನ್ನು ಕುರಿತು ಚರ್ಚಿಸುತ್ತಾ, ಅಲ್ಲಲ್ಲಿ ವಿದ್ವಾಂಸರ ವ್ಯಾಖ್ಯಾನವನ್ನು ಉಲ್ಲೇಖಿಸಿದ್ದಾರೆ. ನಂತರ ಜನಪದ ಸಂಸ್ಕೃತಿ ಮತ್ತು ವ್ಯವಸಾಯ ಇವುಗಳಿಗೆ ಸಂಬಂಧ ಕಲ್ಪಿಸಿ ತಮ್ಮ ವಿಷಯ ವಿಸ್ತಾರಕ್ಕೆ ತಳಹದಿಯನ್ನು

ರೂಪಿಸಿಕೊಂಡಿದ್ದಾರೆ. ವ್ಯವಸಾಯ ಎಂಬ ಪದ ಹೇಗೆ ಬಳಕೆಗೆ ಬಂತು? ವ್ಯವಸಾಯ ಎಂಬುದಕ್ಕೆ ಬಳಕೆಯಾಗುತ್ತಿರುವ ಪರ್ಯಾಯ ಪದಗಳು ಮತ್ತು ಅವುಗಳ ನಿಷ್ಪತ್ತಿಯನ್ನು ಕುರಿತು ಹಾಗೂ ವ್ಯವಸಾಯದ ಮೂಲ, ಉಗಮ ಮತ್ತು ಬೆಳವಣಿಗೆಯನ್ನು ಕುರಿತು ಹೇಳಿದ್ದಾರೆ. ಅಲ್ಲದೆ ಈ ಅಧ್ಯಯನದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕಂಡುಬರುವ ವ್ಯವಸಾಯ ಸಂಬಂಧಿಯಾದ ಅಂಶಗಳನ್ನು ಕುರಿತು ವಿಚಾರಿಸಿದ್ದಾರೆ. ಪ್ರಧಾನವಾಗಿ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ವ್ಯವಸಾಯದ ಬಗೆಗಿರುವ ಉಲ್ಲೇಖವನ್ನು ಕುರಿತು ಪ್ರಸ್ತಾಪಿಸಿದ್ದಾರೆ.

ಅಧ್ಯಯನದ ಪ್ರಧಾನ ಮತ್ತು ಕೇಂದ್ರ ವಿಷಯವಾದ ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ ಎಂಬ ಅಧ್ಯಾಯದಲ್ಲಿ ಜಿಲ್ಲೆಯ ಭೌಗೋಳಿಕತೆಯನ್ನು, ಜಿಲ್ಲೆಯಲ್ಲಿರುವ ಕೃಷಿ ಯೋಗ್ಯ ನೆಲೆಗಳನ್ನು, ಅವುಗಳ ವೈಶಿಷ್ಟ್ಯತೆಯನ್ನು ಕುರಿತು ವಿವರವಾಗಿ ಹೇಳಿರುವರು. ಅಲ್ಲದೆ ಜಿಲ್ಲೆಯಲ್ಲಿ ರೂಢಿಯಲ್ಲಿರುವ ಬೇರೆ ಬೇರೆ ವ್ಯವಸಾಯ ಪದ್ಧತಿಗಳು ಮತ್ತು ಆ ಪದ್ಧತಿಗಳಲ್ಲಿ ಕೃಷಿಕನು ಬೆಳೆ ಬೆಳೆಯಲು ಮಾಡುವ ಆರಂಭದ ಕೆಲಸಗಳಿಂದ ಒಕ್ಕಲು ಮಾಡುವವರೆಗಿನ ವಿವಿಧ ಹಂತಗಳನ್ನು ಕುರಿತು ಚರ್ಚಿಸಿರುವರು. ಚಿತ್ರದುರ್ಗ ಜಿಲ್ಲೆಯ ಮಳೆಯ ಜಾನಪದದ ಬಗೆಗೆ ಒಂದು ಪ್ರತ್ಯೇಕವಾದ ಅಧ್ಯಾಯದಲ್ಲಿಯೇ ವಿವರಿಸಿರುವರು. ಅಲ್ಲಿ ಮಳೆಯ ಬಗೆಗಿದ್ದ ನಂಬಿಕೆಯನ್ನು ಮತ್ತು ಆ ಜಿಲ್ಲೆಯಲ್ಲಿ ಆಚರಿಸಲಾಗುವ ಮಳೆಗೆ ಸಂಬಂಧಿಸಿದ ಗಿಚಕ್ಕೂ ಹೆಚ್ಚಿನ ಆಚರಣೆಗಳ ಬಗೆಗೆ ಮಾಹಿತಿ ನೀಡಿರುವರು. ಜಿಲ್ಲೆಯಲ್ಲಿ ಕಂಡುಬರುವ  ಖುಷ್ಕಿ ವ್ಯವಸಾಯ ಪದ್ಧತಿ ಹಾಗೂ ತರಿ ಮತ್ತು ಬೇಗಾಯ್ತು ಬೆಳೆಗಳ ಬಗೆಗೆ ವಿಶೇಷ ಗಮನಹರಿಸಲಾಗಿದೆ. 'ವ್ಯವಸಾಯದ ಸಾಮಾನ್ಯ ವಿಷಯಗಳು' ಎಂಬಲ್ಲಿ ವ್ಯವಸಾಯದಲ್ಲಿ ಬಳಸಲಾಗುವ ಉಪಕರಣಗಳು ಮತ್ತು ಅವುಗಳ ಉಪಯುಕ್ತತೆಯನ್ನು ಕುರಿತು ಹಾಗೂ ಆ ಉಪಕರಣಗಳ ಬಗೆಗಿದ್ದ ನಂಬಿಕೆ ನಿಷೇಧಗಳನ್ನು ಕುರಿತು ವಿವರಿದ್ದಾರೆ. ಅಲ್ಲದೆ, ಬೆಳೆಗೆ ಬರುವ ರೋಗಗಳು ಮತ್ತು ಅವುಗಳ ನಿವಾರಣೆಯನ್ನು, ಧಾನ್ಯ ದಾಸ್ತಾನು ಕ್ರಮವನ್ನು, ಪಶುವೈದ್ಯವನ್ನು ಹೀಗೆ ಮುಂತಾದ ವ್ಯವಸಾಯ ಸಂಬಂಧಿ ಪಾರಂಪರಿಕ ಜ್ಞಾನವನ್ನು ಇಲ್ಲಿ ಪರಿಚಯಿಸಿದ್ದಾರೆ. ಈ ಅಧ್ಯಯನದ ಕೊನೆಯಲ್ಲಿ ಕೃಷಿಯ ಮತ್ತು ಕೃಷಿಕರ ಪ್ರಾಮುಖ್ಯತೆಯನ್ನು ವಿವರಿಸುತ್ತಾ, ಆಧುನಿಕ ಕೃಷಿ ಪದ್ಧತಿಯಿಂದಾಗುತ್ತಿರುವ ಬದಲಾವಣೆ ಮತ್ತು ಅದರ ಪರಿಣಾಮಗಳನ್ನು ಕುರಿತು ಸಂಕ್ಷಿಪ್ತವಾಗಿ ಚರ್ಚಿಸಿದ್ದಾರೆ.

ಒಟ್ಟಾರೆ ಈ ಅಧ್ಯಯನವು ಕ್ಷೇತ್ರಾಧಾರಿತ ಮಾಹಿತಿ ಮೇಲೆ ರೂಪುಗೊಂಡಿದೆ. ಅಧ್ಯಯನಕ್ಕೆ ಚಿತ್ರದುರ್ಗ ಜಿಲ್ಲೆಯನ್ನು ಸೀಮಿತಗೊಳಿಸಿಕೊಂಡಿದ್ದರೂ ವ್ಯವಸಾಯದ ಉಗಮ-ಬೆಳವಣಿಗೆ, ವ್ಯವಸಾಯದ ಸಾಮಾನ್ಯ ವಿಷಯಗಳು ಮತ್ತು ಕರ್ನಾಟಕದಲ್ಲಿ ವ್ಯವಸಾಯ ಸಂಬಂಧಿ ಉಲ್ಲೇಖಗಳು ಮತ್ತು ಗ್ರಂಥಗಳು ಎಂಬ ಅಧ್ಯಾಯಗಳಲ್ಲಿ ವ್ಯವಸಾಯಕ್ಕೆ ಸಂಬಂಧಿಸಿದ ವಿಷಯಗಳು ಸಾರ್ವತ್ರಿಕ ನೆಲೆಯಿಂದಲೇ ಚರ್ಚೆಗೆ ಒಳಗಾಗಿವೆ. ಒಟ್ಟಿನಲ್ಲಿ ಇದು ಕೃಷಿ ಜ್ಞಾನ ಪರಂಪರೆಯನ್ನು ದಾಖಲು ಮಾಡಲು ಪ್ರಯತ್ನಿಸಿದ ಮಹತ್ವದ ಅಧ್ಯಯನವಾಗಿದೆ.

ಈ ಕೃತಿಯನ್ನು ಬಿಟ್ಟರೆ ಈ ವಿಷಯಕ್ಕೆ ಸಂಬಂಧಿಸಿದಂತೆ ೧೯೯೮ರಲ್ಲಿ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯಿಂದ ಡಾ. ಮೃತ್ಯುಂಜಯ ಹೊರಕೇರಿಯವರ ಸಂಪಾದಕೀಯದಲ್ಲಿ 'ರೈತ ಜಾನಪದ' ಎಂಬ ಕೃತಿಯು ಹೊರಬಂದಿದೆ. ಈ ಕೃತಿಯು ನಮ್ಮ ಆಹಾರದ ಅಗತ್ಯತೆಯನ್ನು ಪೂರೈಸುವ ರೈತನನ್ನು ಕೇಂದ್ರವಾಗಿರಿಸಿಕೊಂಡು ರಚಿತವಾದ ಕೃತಿಯಾಗಿದೆ. ಕೃತಿಯಲ್ಲಿ ಪ್ರಧಾನವಾಗಿ ರೈತ ಮತ್ತು ಭೂಮಿ, ರೈತ ಮತ್ತು ಮಳೆ, ರೈತರ ಸಾಧನ ಸಾಮಗ್ರಿಗಳು, ರೈತನ ಸುಗ್ಗಿ ಸಂಪ್ರದಾಯ, ರೈತನ ದನ-ಕರುಗಳು ಎಂಬ ಲೇಖನಗಳು ವಿವಿಧ ಜಾನಪದ ವಿದ್ವಾಂಸರಿಂದ ರೂಪುಗೊಂಡಿವೆ.

ಶಾಂತಿನಾಥ ದಿಬ್ಬದ ಅವರು 'ರೈತ ಮತ್ತು ಭೂಮಿ' ಎಂಬ ಶೀರ್ಷಿಕೆಯ ತಮ್ಮ ಲೇಖನದಲ್ಲಿ ರೈತನಿಗೂ ಮತ್ತು ಭೂಮಿಗೂ ಇರುವ ಸಂಬಂಧದ ಅವಿನಾಭವತೆಯನ್ನು ತಿಳಿಸುತ್ತಾ, ರೈತ ಆರಂಭದಲ್ಲಿ ಭೂಮಿಯೊಂದಿಗೆ ನಡೆಸಿದ ಪ್ರಾಥಮಿಕ ಚಟುವಟಿಕೆಯನ್ನು ಪ್ರಸ್ತಾಪಿಸಿದ್ದಾರೆ. ಅಲ್ಲದೆ ಜನಪದರಲ್ಲಿ ಭೂಮಿಯ ಸೃಷ್ಟಿಯ ಬಗೆಗಿದ್ದ ಪೌರಾಣಿಕ ಕಥೆಗಳನ್ನು ಕುರಿತು ಕುಲಂಕುಷವಾಗಿ ವಿವರಿಸಿರುವರು. ರೈತ ಸಮುದಾಯಗಳಲ್ಲಿರುವ ಸಾಹಿತ್ಯವನ್ನು ಉಲ್ಲೇಖಿಸಿದ್ದಾರೆ. ಜೊತೆಗೆ ಭೂಸಂಬಂಧಿಯಾಗಿ ಜಾರಿಯಲ್ಲಿರುವ ಹಲವಾರು ಹಬ್ಬ-ಹರಿದಿನಗಳು, ಆಚರಣೆಗಳು, ನಂಬಿಕೆಗಳು ಮತ್ತು ವಿಧಿ-ನಿಷೇಧಗಳ ಬಗೆಗೂ ದೃಷ್ಟಿ ಹರಿಸಿರುವರು. ರೈತ ಭೂಮಿಯ ಬಗ್ಗೆ ಹೊಂದಿರುವ ಕೆಲವು ನಂಬಿಕೆ ಆಚರಣೆ ಸಂಪ್ರದಾಯ ಒಟ್ಟಾರೆ ಅವನ ಜಾನಪದ ತಿಳುವಳಿಕೆ ಬದಲಾಗುತ್ತಿದೆ. ಅದನ್ನು ಗುರುತಿಸಿ ದಾಖಲಿಸಬೇಕೆಂಬುದು ಲೇಖಕರ ಹಂಬಲವಾಗಿದೆ. ಲೇಖನದ ಕೊನೆಯಲ್ಲಿ ಲೇಖಕರು ಈ ರೀತಿಯ ಅಭಿಪ್ರಾಯ ಪಡುವರು. ಇತ್ತೀಚಿಗೆ ಮನುಷ್ಯನ ವಿಚಾರಧಾರೆಗಳು ಬದಲಾಗಿವೆ. ಕೃಷಿಯಲ್ಲಿಯೂ ವೈಜ್ಞಾನಿಕತೆ ಪ್ರವೇಶಿಸಿದೆ. ಕಾರಣ ಕೃಷಿಯಲ್ಲಿ ಇಂದು ಅನೇಕ ಬದಲಾವಣೆಗಳು, ವ್ಯತ್ಯಾಸಗಳು ಕಂಡು ಬರುತ್ತಿವೆ ಎಂದು ತಿಳಿಸುತ್ತಾರೆ. ಅಲ್ಲದೆ ಏನೇ ಆದರೂ ಭೂಮಿ ರೈತನ ತಾಯಿಯೇ ಅವಳ ಮಡಿಲನ್ನು ಬಿಟ್ಟು, ರೈತನಿಗೆ ಅನ್ಯ ಆಶ್ರಯವಿಲ್ಲ ಎಂಬ ಅಭಿಪ್ರಾಯಪಟ್ಟಿದ್ದಾರೆ.

ಎಸ್.ಪಿ. ಪದ್ಮಪ್ರಸಾದ್ ಅವರು "ರೈತ ಮತ್ತು ಮಳೆ" ಲೇಖನದಲ್ಲಿ ಮಳೆಯನ್ನು ಕುರಿತ ನಂಬಿಕೆ ಆಚರಣೆಗಳ ಬಗೆಗೆ ವಿವರಿಸುವರು. ಲೇಖಕರ ಅಭಿಪ್ರಾಯದಂತೆ ಮಳೆಯನ್ನು ಕುರಿತ ನಂಬಿಕೆ ಆಚರಣೆಗಳಿಗೂ ಕೃಷಿಗೂ ನೇರ ಸಂಬಂಧವಿದೆ. ಅಲೆಮಾರಿಯಾಗಿದ್ದ ಮನುಷ್ಯ ಒಂದೆಡೆ ನೆಲೆನಿಂತು ಕೃಷಿಗೆ ಮೊರೆ ಹೋದಾಗ ಅವನಿಗೆ ಮಳೆಯ ಅಗತ್ಯವೆನಿಸಿತು. ಹಾಗಾಗಿ ಅದರ ಬಗೆಗೆ ಹತ್ತಾರು ನಂಬಿಕೆಗಳು ಆಚರಣೆಗಳು ಹುಟ್ಟಿ ಬೆಳೆದಿವೆ ಎಂದಿರುವರು. ಲೇಖಕರು ಮಳೆಯ ಆಚರಣೆಗಳನ್ನು ಮುಖ್ಯವಾಗಿ ಎರಡು ವಿಭಾಗಗಳಾಗಿ ಮಾಡಿಕೊಂಡಿರುವರು.

೧. ಮಳೆ ಕರೆಯುವ ಆಚರಣೆಗಳು.

೨. ಮಳೆ ತಡೆಯುವ ಆಚರಣೆಗಳು.

ಮತ್ತೆ ಇದರಲ್ಲಿ ಉಪ ವಿಭಾಗಗಳನ್ನು ಮಾಡಿಕೊಂಡು ಮಳೆಯ ಆಚರಣೆಯ ಬಗ್ಗೆ ವಿವರಿಸಿರುವುದನ್ನು ನಾವು ಕಾಣುತ್ತೇವೆ. ಮಳೆಯ ಬಗೆಗೆ ರೈತರಲ್ಲಿರುವ ನಂಬಿಕೆಗಳ ಬಗೆಗೂ ಸ್ಥೂಲವಾದ ಮಾಹಿತಿ ನೀಡಿದ್ದಾರೆ. ಆಧುನಿಕತೆಯ ವಿಜ್ಞಾನದ ಪ್ರಭಾವದಿಂದ ಮಳೆಯ ಬಗೆಗಿನ ನಂಬಿಕೆ ಆಚರಣೆಗಳಲ್ಲಿ ಎಷ್ಟೋ ನಶಿಸುತ್ತಿವೆಯಾದರೂ, ಗ್ರಾಮೀಣ ಪರಿಸರದಲ್ಲಿನ ಜನಜೀವನದಲ್ಲಿ ಇವು ಮಿಳಿತಗೊಂಡಿವೆ. ಇವುಗಳ ಬಗ್ಗೆ ಸಂಪೂರ್ಣ ನಂಬಿಕೆ ಇರದಿದ್ದರೂ ತಮ್ಮ ಸುರಕ್ಷಿತೆಗೆಂದು ಈ ಬಗೆಯ ಆಚರಣೆಗಳನ್ನು ನಡೆಸುತ್ತಲೇ ಇರುತ್ತಾರೆಂದು ಲೇಖಕರು ಅಭಿಪ್ರಾಯಪಟ್ಟಿರುವರು.

ಎಂ.ಜಿ. ಈಶ್ವರಪ್ಪನವರು ರೈತನ ವ್ಯವಸಾಯದ ಬದುಕಿನಲ್ಲಿ ತುಂಬಾ ಮಹತ್ವದ ಪಾತ್ರವಹಿಸುವ ಆತನ ಬಳಕೆಯ ಸಾಧನ ಸಾಮಗ್ರಿಗಳನ್ನೆ ಕೇಂದ್ರವಾಗಿರಿಸಿಕೊಂಡು ಸಿದ್ಧಪಡಿಸಿದ "ರೈತನ ಸಾಧನ ಸಾಮಗ್ರಿಗಳು" ಎಂಬ ಲೇಖನದಲ್ಲಿ ರೈತ ಬಳಕೆಯ ಸಾಧನ ಸಾಮಗ್ರಿಗಳ ಹುಟ್ಟು ಮತ್ತು ವಿಕಾಸವನ್ನು ಮಾನವನ ಶಿಲಾಯುಗದ ಬದುಕಿನಿಂದ ಹಿಡಿದು ಆಧುನಿಕ ಯುಗದ ಉಪಕರಣಗಳವರೆಗೂ ಪ್ರಸ್ತಾಪಿಸಿದ್ದಾರೆ. ಕನ್ನಡ ಕಾವ್ಯಗಳಲ್ಲಿ ವ್ಯವಸಾಯದ ಉಪಕರಣಗಳ ಬಗೆಗೆ ಬಂದಿರುವ ಉಲ್ಲೇಖಗಳ ಬಗೆಗೂ ಲೇಖಕರು ಗಮನಹರಿಸಿರುವರು. ನಂತರ ರೈತನ ಕೆಲವು ಪ್ರಮುಖ ಸಾಧನ ಸಾಮಗ್ರಿಗಳಾದ ನೇಗಿಲು ಕುಂಟೆ, ಎಡೆಕುಂಟೆ, ಕೂರಿಗೆ, ಹಗೇವು, ವಡೇವು, ಕಣಜ, ಕೊರಡು, ನೊಗ, ಬಂಡಿ, ಇತ್ಯಾದಿ. ಇವುಗಳ ಬಗೆಗೆ ಸಂಕ್ಷಿಪ್ತವಾಗಿ ಮತ್ತು ಪ್ರತ್ಯೇಕವಾಗಿ ವಿವರಿಸಿದ್ದಾರೆ. ಈ ಲೇಖಕರು ಲೇಖನದ ಕೊನೆಯಲ್ಲಿ ಹೇಳಿದ ವಿಚಾರಗಳು ತುಂಬಾ ಮಹತ್ವದ್ದಾಗಿವೆ. ಅವು ರೈತನ ವಾಸ್ತವ ಬದುಕಿನ ದಾರುಣ ಸ್ಥಿತಿಯನ್ನು ಕನ್ನಡಿಸುವಂತಿವೆ. ಅವರು ಅಭಿಪ್ರಾಯ ಪಡುವಂತೆ 'ರೈತ ಸಮುದಾಯ ಈಗ ನಗರ ಮುಖಿಯಾಗುತ್ತಿದೆ. ರೈತ ತನಗೆ ಬೇಕಾದ ಬೀಜ, ಗೊಬ್ಬರ, ಔಷಧಗಳಿಗಾಗಿ ಬೇರೆಯವರನ್ನು ಅವಲಂಬಿಸಿದ್ದಾನೆ. ಅವುಗಳ ಗುಣಮಟ್ಟ ಆತನಿಗೆ ಅರಿವಾಗುತ್ತಿಲ್ಲ. ಒಟ್ಟಿನಲ್ಲಿ ಅವನ ಇಡೀ ಬದುಕು ಬೇರೆಯವರ ನಿಯಂತ್ರಣದಲ್ಲಿದೆ. ಅವನು ಏನು ಬೆಳೆಯಬೇಕೆಂಬುದನ್ನು ಕೃಷಿ ಇಲಾಖೆ ನಿರ್ಧರಿಸುತ್ತದೆ. ಬೆಳೆದ ಬೆಳೆಯ ಬೆಲೆಯನ್ನು ಕೃಷಿ ಮಾರುಕಟ್ಟೆಯ ದಲಾಲರು ನಿಯಂತ್ರಿಸುತ್ತಾರೆ. ಜೊತೆಗೆ ನಿಸರ್ಗದ ಮುನಿಸು ರೈತನನ್ನು ಕಾಡುತ್ತದೆ ಎಂದಿರುವರು ಅಲ್ಲದೆ ಬಹುರಾಷ್ಟ್ರೀಯ ಕಂಪನಿಗಳ ಪ್ರವೇಶದಿಂದ ರೈತರ ಸ್ಥಿತಿ ಹೀನಾಗುತ್ತದೆ ಎನ್ನುವುದರ ಬಗೆಗೆ ಆತಂಕವನ್ನು ವ್ಯಕ್ತಪಡಿಸಿದ್ದಾರೆ.

ವೀರಣ್ಣದಂಡೆಯವರು ರೈತನ ಸುಗ್ಗಿ ಸಂಪ್ರದಾಯದ ಬಗೆಗೆ ಪ್ರಬಂಧ ರಚಿಸಿದ್ದಾರೆ. ಈ ಪ್ರಬಂಧದಲ್ಲಿ ರೈತನು ತನ್ನ ಬೇಸಾಯ ಕ್ರಮದಲ್ಲಿ ಸುಗ್ಗಿಯ ಸಂದರ್ಭದಲ್ಲಿ ಆಚರಿಸಿಕೊಂಡು ಬಂದಿರುವ ಪದ್ಧತಿಗಳನ್ನು ರೈತನ ಸುಗ್ಗಿ ಸಂಪ್ರದಾಯ ಎಂದು ಕರೆದಿದ್ದಾರೆ. ಯಾವ ಸಂದರ್ಭದಲ್ಲಿ ಯಾವ ಆಚರಣೆ ಮಾಡುವರು ಎಂಬ ಬಗ್ಗೆ ಮಾಹಿತಿ ದೊರೆಯುತ್ತಿದೆ. ಅಲ್ಲದೆ ಪ್ರಧಾನವಾಗಿ ಇಲ್ಲಿ ಹಂತಿಯ ಹಾಡಿನ ಮೂಲಕ ರೈತನ ಸುಗ್ಗಿ ಸಂಪ್ರದಾಯವನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ

ಕೆ.ಆರ್. ದುರ್ಗಾದಾಸ್ ಅವರ 'ರೈತನ ದನಕರುಗಳು' ಎಂಬ ಲೇಖನ ಕೃತಿಯ ಕೊನೆಯ ಲೇಖನವಾಗಿದ್ದು, ಇದರಲ್ಲಿ ಮಾನವ ಮತ್ತು ಪ್ರಾಣಿಗಳ ಸಂಬಂಧ ಬೆಳೆದುಕೊಂಡು ಬಂದ ಬಗೆಯನ್ನು ವಿವರಣಾತ್ಮಕವಾಗಿ ಕೊಡಲಾಗಿದೆ. ಮುಖ್ಯವಾಗಿ ಈ ಲೇಖನ ದನಕರುಗಳ ಸಾಗಾಣಿಕೆಯನ್ನು ಕುರಿತು, ದನಗಳ ವ್ಯಾಪಾರ ವಹಿವಾಟನ್ನು ಕುರಿತು, ದನಕರುಗಳ ಸಲಕರಣೆಗಳ ಕುರಿತು, ಅವುಗಳ ಸಾಂಸ್ಕೃತಿಕ ಮಹತ್ವವನ್ನು ಕುರಿತು, ಎಮ್ಮೆ ಆಕಳುಗಳಿಗಿರುವ ತಾರತಮ್ಯದ ಕುರಿತು, ದನಗಳಿಂದಾಗುವ ಬಹುಪಯೋಗಗಳಲ್ಲಿ ಒಂದಾದ ಚರ್ಮವಾದ್ಯಗಳ ಕುರಿತು, ಮಾಂಸಾಹಾರವಾಗಿ ಉಪಯೋಗವಾಗುತ್ತಿರುವ ದನಗಳ ಬಗೆಗಿದ್ದ ಜನರ ನಂಬಿಕೆ, ಗಾದೆ, ಬೈಯ್ಯುಗಳನ್ನು ಕುರಿತು ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ.

ಒಟ್ಟಾರೆ ಕ್ಷೇತ್ರಾಧಾರಿತ ಮಾಹಿತಿಗಳಿಂದ ರಚನೆಗೊಂಡ ಈ ಕೃತಿಯು ಆಕಾರದಲ್ಲಿ ಚಿಕ್ಕದಾಗಿದ್ದರೂ ರೈತ ಮತ್ತು ವ್ಯವಸಾಯಕ್ಕೆ ಸಂಬಂಧಿಸಿದಂತೆ ಅನೇಕ ಮಹತ್ವದ ಮಾಹಿತಿಗಳನ್ನು ಒದಗಿಸುವ ಕೃತಿಯಾಗಿದೆ. ಈ ಮಾಹಿತಿಗಳು ಸ್ವಾರಸ್ಯಕರವಾಗಿದ್ದರೂ ಸಂಕ್ಷಿಪ್ತವಾಗಿವೆ. ಏನೇ ಆದರೂ ಈ ಕೃತಿಯೂ ಜಾನಪದ ಅಧ್ಯಯನ ಪರಂಪರೆಗೊಂದು ಹೊಸ ಆಲೋಚನಾ ಎಳೆಯನ್ನು ಸೇರಿಸಿದೆ. ಜಾನಪದದ ಹಿನ್ನೆಲೆಯಲ್ಲಿ ಕೃಷಿಗೆ ಸಂಬಂಧಿಸಿದಂತೆ ಅಧ್ಯಯನ ಕೈಗೊಳ್ಳುವವರಿಗೆ ಈ ಕೃತಿಯು ಕೆಲವು ಹೊಳವುಗಳನ್ನು ಮೂಡಿಸುತ್ತದೆ.

ಇದಕ್ಕೂ ಮೊದಲು ಅಂದರೆ ೧೯೯೭ರಲ್ಲಿ ಪ.ನಂ. ಶಿವರಾಮ ಅವರು ಸಂಪಾದಿಸಿದ 'ಹಗೇವು ತುಂಬ್ಯಾವೆ ಹದಿನಾರು' ಎನ್ನುವ ಕೃತಿಯಲ್ಲಿ ವೈ.ಸ. ಸರ್ವಮಂಗಳ ಅವರ 'ವ್ಯವಸಾಯ ಜಾನಪದ' ಎಂಬ ಲೇಖನ ಬಂದಿದೆ. ಇದರಲ್ಲಿ ಆರಂಭದಲ್ಲಿ ಮಂಡ್ಯ ಜಿಲ್ಲೆಯ ಬಗೆಗೆ ಪರಿಚಯಿಸುತ್ತ, ಹಿಂದೆ ವ್ಯವಸಾಯದ ಬಗೆಗೆ ಗೌರವಯುತ ಭಾವನೆ ಇತ್ತು. ಆದರೆ ಇಂದು ವ್ಯವಸಾಯ ಶ್ರಮದಾಯಕ ಮತ್ತು ನಷ್ಟದಾಯಕ  ವೃತ್ತಿಯಾಗಿದೆ ಎಂದು ಲೇಖಕಿ ಹೇಳಿದ್ದಾರೆ. ನಂತರ ರೈತನ ಹುಟ್ಟಿನ ಕುರಿತ ಒಂದು ಸೃಷ್ಟಿ ಪುರಾಣವನ್ನು ಕೊಟ್ಟಿದ್ದಾರೆ. ಅಲ್ಲದೆ ವ್ಯವಸಾಯ ಪದಕ್ಕೆ ಇದ್ದ ಬೇರೆ ಬೇರೆ ಹೆಸರುಗಳನ್ನು ಮತ್ತು ಆ ಪದಗಳ ಮೂಲ ಹಾಗೂ ಅರ್ಥಗಳನ್ನು ವಿವರಿಸಿದ್ದಾರೆ. ವ್ಯವಸಾಯಕ್ಕೆ ಸಂಬಂಧಿಸಿದ ಆಚರಣೆಗಳಾದ ಹೊನ್ನೇರು, ಹೆಬ್ಬು ಮಾಡುವುದು, ಮೆದೆ ಪೂಜೆ, ಮೀಸಲು, ಸಂಕ್ರಾಂತಿ, ದೀಪಾವಳಿ ಇವುಗಳ ಬಗೆಗೆ ವಿವರಗಳಿವೆ. ಅಲ್ಲದೆ ಮಂಡ್ಯ ಜಿಲ್ಲೆಯ ಪ್ರಮುಖ ಬೆಳೆಗಳಾದ ರಾಗಿ, ಭತ್ತದ ಬೆಳೆಗಳನ್ನು ಬೆಳೆಯುವ ಕುರಿತು  ಹೇಳಲಾಗಿದೆ.

೧೯೯೭ರಲ್ಲಿಯೇ ಎಂ.ಎ. ನಾರಾಯಣರೆಡ್ಡಿ  ಮತ್ತು ಪಿ. ನಾರಾಯಣಸ್ವಾಮಿ ಅವರಿಂದ 'ಕೃಷಿ ಗಾದೆಗಳು' ಎಂಬ ಕೃತಿ ಬಂದಿದೆ. ಇದರಲ್ಲಿ ಸುಮಾರು ೫೦೦ ಕೃಷಿ ಗಾದೆಗಳ ಸಂಗ್ರಹವಿರುವುದು ಕಂಡು ಬರುತ್ತದೆ.  ಮುಂದೆ ೧೯೯೯ರಲ್ಲಿ ಬಂದ 'ಜಾನಪದ ಇಬ್ಬನಿಗಳು' ಎಂಬ ಎಂ.ಜಿ. ಈಶ್ವರಪ್ಪನವರ ಕೃತಿಯಲ್ಲಿ ಕೃಷಿ ಜಾನಪದಕ್ಕೆ ಸಂಬಂಧಿಸಿದ ಕೆಲವು ಲೇಖನಗಳಿವೆ. ಅಲ್ಲದೆ ಇತ್ತೀಚಿಗೆ ೨೦೦೭ರಲ್ಲಿ ಸಿ.ಕೆ. ನಾವಲಗಿ ಅವರಿಂದ ರಚಿತವಾದ 'ಉತ್ತರ ಕರ್ನಾಟಕದ ಕೃಷಿ ಜನಪದ ಸಾಹಿತ್ಯ' ಎಂಬ ಕೃತಿ ಹೊರಬಂದಿದೆ. ಹೀಗೆ 'ಕೃಷಿ ಜಾನಪದ' ಎಂಬ ಹೆಸರಿನಲ್ಲಿ ಬಂದ ಈ ಬೆರಳೆಣಿಕೆಯ ಅಧ್ಯಯನಗಳು ಹೆಚ್ಚಾಗಿ ಮಾಹಿತಿ

ಪ್ರಧಾನ ಅಧ್ಯಯನಗಳಾಗಿವೆ. ಇವುಗಳಲ್ಲದೆ ಜಾನಪದ ಕ್ಷೇತ್ರದಲ್ಲಿ 'ಕೃಷಿ ಜಾನಪದ' ಎಂಬ ಹೆಸರಿನಲ್ಲಿ ಅಲ್ಲದಿದ್ದರೂ ಕೃಷಿ ಸಂಬಂಧಿಸಿದ ಸಾಹಿತ್ಯ ಮತ್ತು ಆಚರಣೆಗೆ ಸಂಬಂಧಿಸಿದಂತೆ ಸಾಕಷ್ಟು ಮಾಹಿತಿ ಸಂಗ್ರಹಣೆಯ ಕೆಲಸವಾಗಿದೆ. ಹಾಗೆ ನಡೆದ ಅಧ್ಯಯನಗಳ ಸಾಲಿನಲ್ಲಿ ಈ ಕೆಳಗಿನ ಕೆಲವು ಅಧ್ಯಯನಗಳನ್ನು ಹೆಸರಿಸಬಹುದು. ಈ ಕೃತಿಗಳಲ್ಲಿ ಕೆಲವು ಮಾಹಿತಿಯ ಜೊತೆಗೆ ವಿಶ್ಲೇಷಣೆಯನ್ನು ಒಳಗೊಂಡಿವೆ.

ಎಲ್.ಆರ್. ಹೆಗಡೆ ಅವರ 'ಗಾದೆಗಳು' (೧೯೮೩) ಎಂಬ ಕೃತಿಯಲ್ಲಿ ಉತ್ತರ ಕನ್ನಡದ ಗಾದೆಗಳನ್ನು ಸಂಗ್ರಹಿಸಲಾಗಿದೆ. ಬಿ. ಕೃಷ್ಣಪ್ಪ ರೆಡ್ಡಿ ಅವರ 'ಗ್ರಾಮೀಣ ಗಾದೆಗಳು' (೧೯೮೩) ಎಂಬ ಕೃತಿಯು ೧೨೨೪ ಗ್ರಾಮೀಣ ಗಾದೆಗಳನ್ನು ಒಳಗೊಂಡಿದೆ. ಬೆ.ಗೊ. ರಮೇಶ ಅವರ 'ಜನಪ್ರಿಯ ೨೦೦ ಗಾದೆಗಳು' (೧೯೮೯) ಎಂಬ ಕೃತಿಯಲ್ಲಿ ೨೦೦ ಗಾದೆಗಳ ಸಂಗ್ರಹವಿದ್ದು ಅವುಗಳಲ್ಲಿ ಕೃಷಿಗೆ ಸಂಬಂಧಿಸಿದ ಗಾದೆಗಳ ಸಂಗ್ರಹವೂ ಇದೆ. ಅದೇ ರೀತಿ ಕನ್ನಡಕ್ಕೆ ಅನುವಾದಗೊಂಡ ಪೆರಿಯಾರ ಅವರ 'ಆಯುಧ ಪೂಜೆ ಅರಿವಿಗೆ ಒಪ್ಪುವ ಪೂಜೆಯೇ' (೧೯೭೮) ಎನ್ನುವ ಕೃತಿಯಲ್ಲಿ ಸಂಕ್ರಾಂತಿ ಮತ್ತು ಆಯುಧಪೂಜೆ ಹಬ್ಬಗಳ ಆಚರಣೆಯ ಬಗೆಗೆ ಪರಿಚಯಾತ್ಮಕ ವಿವರಗಳನ್ನು ಒಳಗೊಂಡಿದೆ. ವಾಗೀಶ್ವರ ಶಾಸ್ತ್ರೀ ಅವರ 'ಕರ್ನಾಟಕದ ಹಬ್ಬಗಳು' (೧೯೮೩) ಎನ್ನುವ ಕೃತಿಯು ಕರ್ನಾಟಕದ ಹಬ್ಬಗಳ ಸ್ಥೂಲ ಪರಿಚಯವನ್ನು ಒಳಗೊಂಡಿದೆ. ಎಸ್.ಆರ್. ಗೌಡರ ಅವರ 'ಹಂತಿಯ ಪದಗಳ ಸೊಗಸು' (೧೯೮೫) ಎಂಬ ಕೃತಿಯಲ್ಲಿ ಹಂತಿ ಪದಗಳಲ್ಲಿ ಕಂಡುಬರುವ ಬಸವಣ್ಣನ ಬಗೆಗೆ, ಮಳೆರಾಯನ ಸ್ವಾಗತದ ಬಗೆಗೆ, ಒಕ್ಕಲಿಗನ ಬಗೆಗೆ ಮತ್ತು ಹಂತಿಯ ಮುಕ್ತಾಯದ ಸನ್ನಿವೇಶಗಳ ಬಗೆಗೆ ವಿವರಗಳಿವೆ. ಶಿವಾನಂದ ಚಿರುತಮಠ ಅವರ 'ಜಾನಪದ ನಾಲ್ವಳ' (೧೯೮೪) ಈ ಕೃತಿಯಲ್ಲಿ ಬೇಸಾಯದ ಹಾಡುಗಳ ಕುರಿತ ಮಾಹಿತಿಗಳಿವೆ. ಜೀ.ಶಂ. ಪರಮಶಿವಯ್ಯ ಅವರ ಸಂಪಾದಕೀಯ ಕೃತಿ ಜಾನಪದ ಸಮಾವೇಶ (೧೯೭೯) ಇದರಲ್ಲಿ ಹಂತಿ ಮತ್ತು ಗೀಗಿ ಹಾಡಿನ ಸಂಪ್ರದಾಯಗಳ ಬಗೆಗೆ ಮಾಹಿತಿಗಳಿವೆ.

ಗುರುಮೂರ್ತಿ ಪೆಂಡಕೂರು ಅವರ ಸಂಪಾದಿತ ಕೃತಿ 'ಮುತ್ತು ಹವಳ' (೧೯೯೨) ಇವರಲ್ಲಿ ಹಂತಿಯ ಹಾಡುಗಳ ಬಗೆಗೆ, ಜೋಕುಮಾರನ ಬಗೆಗೆ ಮತ್ತು ನಂಬಿಕೆ, ಗಾದೆಗಳ ಬಗೆಗೆ ವಿವರಗಳಿವೆ. ಡಿ. ಲಿಂಗಯ್ಯ ಅವರ 'ಜನಪದ ಸಾಹಿತ್ಯ ಸಂವಾದ' (೧೯೮೨) ಕೃತಿಯಲ್ಲಿ ಜನಪದ ಸಾಹಿತ್ಯ ಮತ್ತು ಮಹಿಳೆಯನ್ನು ಕುರಿತಂತೆ ಮತ್ತು ಹಳ್ಳಿಯ ಹಬ್ಬಗಳು ಹಾಗೂ ನಾಟಿಯ ಪದಗಳ ಬಗೆಗೆ ಚರ್ಚಿಸಲಾಗಿದೆ. ಶಾಂತಿನಾಯಕ ಅವರ 'ಜಾನಪದ ಸುಧಾ ಸಂಚಯ' (೧೯೮೩) ಕೃತಿಯಲ್ಲಿ 'ಜನಪದ ಸಾಹಿತ್ಯದಲ್ಲಿ ಮಳೆ-ಬೆಳೆ' ಎನ್ನುವ ಲೇಖನವಿದೆ. ಪಿ.ಕೆ. ರಾಜಶೇಖರ್ ಅವರ ಜಾನಪದ ಸಂಭ್ರಮ (೨೦೦೩) ಮತ್ತು ಬಸವರಾಜ ನೆಲ್ಲಿಸರ ಅವರ 'ಜಾನಪದ ಜಿಜ್ಞಾಸೆ' (೧೯೭೯) ಎಂಬ ಕೃತಿಗಳಲ್ಲಿ ಸಂಕ್ರಾಂತಿ ಹಬ್ಬವನ್ನು ಕುರಿತಂತೆ ವಿವರಗಳಿವೆ. ವಿರೇಶ ಬಡಿಗೇರ ಅವರ 'ಗುಳ್ಳವ್ವ ಆಚರಣೆ ವಿಶ್ಲೇಷಣೆ' ಎನ್ನುವ ಕೃತಿಯಲ್ಲಿ ಭೂದೇವಿಗೆ ಸಂಬಂಧಿಸಿದ ಗುಳ್ಳವ್ವ ಆಚರಣೆಯನ್ನು ಕುರಿತು ವಿಶ್ಲೇಷಿಸಲು ಪ್ರಯತ್ನಿಸಿದ್ದಾರೆ. ಕ್ಯಾತನಹಳ್ಳಿ ರಾಮಣ್ಣ ಅವರ 'ಕೊಂತಿ ಪೂಜೆ ಒಂದು ಅಧ್ಯಯನ' ಎಂಬ ಕೃತಿಯಲ್ಲಿ ವ್ಯವಸಾಯ ಸಂಬಂಧವಾದ

ಕೊಂತಿ ಪೂಜೆಯ ಆಚರಣೆಯ ಹಿನ್ನೆಲೆಯ ಕಥೆ ಮತ್ತು ಸಾಹಿತ್ಯವನ್ನು ಒಳಗೊಂಡಿದೆ. ಎಸ್.ಎಂ. ವೃಷಭೇಂದ್ರಸ್ವಾಮಿ ಅವರ ಪ್ರಧಾನ ಸಂಪಾದಕೀಯದಲ್ಲಿ ಹೊರಬಂದ 'ಜಾನಪದ ಸಾಹಿತ್ಯ ದರ್ಶನ - ಭಾ-೧೦' (೧೯೮೭) ಈ ಕೃತಿಯಲ್ಲಿ ಜನಪದ ಹಬ್ಬಗಳನ್ನು ಕುರಿತ ವಿವರಣೆ ಇದೆ. ಬಸವರಾಜ ನೆಲ್ಲಿಸರ ಅವರ ಸಂಪಾದಿತ ಕೃತಿ 'ಜಾನಪದ ೧೯೯೬' ಕೃತಿಯಲ್ಲಿ ಹಂತಿ ಸಂಪ್ರದಾಯ ಸಾಹಿತ್ಯ ಮತ್ತು ಅಂತರ್‌ಸಂಬಂಧವನ್ನು ಕುರಿತ ವೀರಣ್ಣದಂಡೆ ಅವರ ಲೇಖನವಿದೆ. ಎ.ವಿ. ನಾವಡ ಅವರ 'ಜಾನಪದ ಸಮಾಲೋಚನ' (೧೯೯೩) ಕೃತಿಯಲ್ಲಿ ಹಂತಿ ಮತ್ತು ಗೀಗೀ ಹಾಡಿನ ಸಂಪ್ರದಾಯಗಳನ್ನು ಕುರಿತು ಚರ್ಚಿಸಿದ್ದಾರೆ. ಎಂ.ಎಲ್. ನರಸಿಂಹಮೂರ್ತಿ ಅವರ 'ಜಾನಪದ ಪರಾಗ' ಎಂಬ ಕೃತಿಯಲ್ಲಿ ಉಗಾದಿ ಮತ್ತು ದೀಪಾವಳಿ ಹಬ್ಬದ ಕುರಿತು ಪ್ರಸ್ತಾಪವಿದೆ. ಜಯಶ್ರೀ ಗುತ್ತಲ ಅವರ ಸಂಪಾದಿತ ಕೃತಿ 'ಜನಪದ ಮಂಗಳ ಗೀತೆಗಳು' ಇದರಲ್ಲಿ ಶೀಗಿ ಹಾಡುಗಳು ಮತ್ತು ಒಕ್ಕಲುತನದ ಪದಗಳಿವೆ. ಎಸ್.ಎಸ್. ಅಂಗಡಿ ಅವರ 'ಹಂತಿ-ಪಂತಿ-ಪದಗಳು' ಎಂಬ ಕೃತಿಯಲ್ಲಿ ಭೂಮಿತಾಯಿಯ ಪದ, ಆಯುಗಾರ ಪದ, ರಾಶಿಪದ, ಬಣಾವಿ ಪದಗಳ ಬಗೆಗೆ ಮಾಹಿತಿ ಸಿಗುತ್ತದೆ. ಬಸವರಾಜ ನೆಲ್ಲಿಸರ ಅವರ 'ಜಾನಪದ ಸಂಕಲನ' (೧೯೭೮) ಕೃತಿಯಲ್ಲಿ ಆಯುಗಾರರ ಬಗೆಗೆ ಪ್ರಸ್ತಾಪಿಸಲಾಗಿದೆ. ಜಿ.ಎಸ್. ಭಟ್ ಸಂಪಾದನೆಯ 'ಜಾನಪದ-೧೯೯೧' ಎಂಬ ಕೃತಿಯಲ್ಲಿ ಮಲ್ಲಿಕಾರ್ಜುನ ಕುಂಬಾರ ಅವರ 'ಒಕ್ಕಲುತನದಲ್ಲಿ ಜನಪದ ನಂಬಿಕೆಗಳು' ಎಂಬ ಲೇಖನವಿದೆ. ಅಲ್ಲದೆ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದಿಂದ ಹೊರತರುವ ಅಭಿವೃದ್ಧಿ ಅಧ್ಯಯನ ವಿಭಾಗ ಪತ್ರಿಕೆ (ಸಂಪುಟ ೪, ಸಂಚಿಕೆ ೧)ಯಲ್ಲಿ 'ಕೃಷಿ ಆಧುನಿಕ ಯಂತ್ರೋಪಕರಣಗಳು' ಎಂಬ ಮಂಜುನಾಥ ಬೇವಿನಕಟ್ಟಿಯವರ ಲೇಖನ ಬಂದಿದೆ. ಇದರಲ್ಲಿ ಕೃಷಿ ಮತ್ತು ಕೃಷಿ ಉಪಕರಣಗಳ ಕುರಿತು, ಕೃಷಿ-ಕೃಷಿಕ ಮತ್ತು ಭೂಮಿ ಸಂಬಂಧ ಹಾಗೂ ಕೃಷಿ ಆಧುನಿಕ ಉಪಕರಣಗಳ ಕುರಿತು ಚರ್ಚಿಸಿದ್ದಾರೆ. ಈ ರೀತಿಯ ಇನ್ನೂ ಕೆಲವು ಅಧ್ಯಯನಗಳು ಜಾನಪದದಲ್ಲಿ ನಡೆದಿರುವುದನ್ನು ನಾವು ನೋಡುತ್ತೇವೆ.

ಇವುಗಳಲ್ಲದೆ ಕೃಷಿಗೆ ಸಂಬಂಧಿಸಿದಂತೆ ಇನ್ನೂ ಕೆಲವು ಮಹತ್ವದ ಅಧ್ಯಯನಗಳು ನಡೆದಿದ್ದು ಅವುಗಳಲ್ಲಿ ಕೆಲವನ್ನು ಈ ಕೆಳಗೆ ಪ್ರಸ್ತಾಪಿಸಲಾಗಿದೆ. ಶ್ರೀ ಘನಮಠದ ಶಿವಯೋಗಿಗಳ 'ಕೃಷಿ ಜ್ಞಾನ ಪ್ರದೀಪಿಕೆ' ಎಂಬ ಕೃತಿಯಲ್ಲಿ ಒಟ್ಟು ೨೩ ಪ್ರಕರಣಗಳಿವೆ. ೧ ರಿಂದ ೮ನೇ ಪ್ರಕರಣಗಳಲ್ಲಿ ಒಣ ಬೇಸಾಯದ ಬಗೆಗೆ, ೯ ರಿಂದ ೧೮ನೆಯ ಪ್ರಕರಣಗಳಲ್ಲಿ ನೀರಾವರಿ ಬೇಸಾಯಗಳ ಬಗೆಗೆ ವಿವರಗಳಿವೆ. ಅಲ್ಲದೆ ೧೯ ರಿಂದ ೨೩ನೆಯ ಪ್ರಕರಣಗಳಲ್ಲಿ ಪಾರಮಾರ್ಥಿಕ ಕೃಷಿಯ ಅಂದರೆ ಆಧ್ಯಾತ್ಮಿಕ ವಿವರಗಳಿವೆ. ಒಟ್ಟು ಕೃತಿಯಲ್ಲಿ ಮಣ್ಣು ಮೊದಲು ಮಾಡಿ ಧಾನ್ಯದ ಉತ್ಪಾದನೆವರೆಗಿನ ಎಲ್ಲ ಮಜಲುಗಳನ್ನು ಜೊತೆಗೆ ಉತ್ಪಾದಿತ ಧಾನ್ಯದ ಜೀವನೋಪಯೋಗದ ರೀತಿಯನ್ನು ಈ ಗ್ರಂಥದಲ್ಲಿ ಪ್ರತಿಪಾದಿಸಲಾಗಿದೆ.

ಎಂ.ಎಂ. ಹೊಸಮನಿ ಮತ್ತು ಎನ್.ಸಿ. ಚಂದ್ರಯ್ಯ ಅವರ 'ಕೃಷಿ ಉಪಕರಣಗಳು' (೧೯೯೩) ಕೃತಿಯಲ್ಲಿ ಕೃಷಿ ಪ್ರಕ್ರಿಯೆಯಲ್ಲಿ ಬಳಕೆಯಾಗುವ ವಿವಿಧ ನಮೂನೆಯ ಉಪಕರಣಗಳ ಬಗೆಗೆ ಪರಿಚಯವಿದೆ.

ಒಂದೊಂದು ಉಪಕರಣದ ಬಗೆಗೂ ಅವುಗಳನ್ನು ಹೇಗೆ ತಯಾರಿಸಲಾಗಿದೆ ಮತ್ತು ಅವುಗಳಿಂದ ಯಾವ ಕೆಲಸ ಮಾಡಲಾಗುತ್ತದೆ ಎಂಬುದನ್ನು ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಕೆ.ವಿ. ನಾರಾಯಣ, ಅಶೋಕಕುಮಾರ ರಂಜೇರೆ, ಸುಜ್ಞಾನಮೂರ್ತಿ, ಡಿ. ಪಾಂಡುರಂಗ ಬಾಬು, ಎಸ್.ಎಸ್. ಅಂಗಡಿ ಮತ್ತು ಸಾಂಬಮೂರ್ತಿ ಇವರುಗಳ ಸಂಯೋಜನೆಯಲ್ಲಿ ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟಗೊಂಡ 'ಕೃಷಿ ಪದಕೋಶ' ಎಂಬ ಕೃತಿಯಲ್ಲಿ ಕೃಷಿ ಉಪಕರಣಗಳು, ಭೂಮಿ, ನೀರಾವರಿ, ಗೊಬ್ಬರ, ಬೆಳೆಗಳು, ಮಳೆ ಮತ್ತು ಹವಾಮಾನ, ಕಳೆಗಳು, ಕೃಷಿ ಬೆಳೆಗಳ ರೋಗಗಳು, ನಂಬಿಕೆ, ದೈವ, ಆಚರಣೆಗಳು, ಮಾರುಕಟ್ಟೆ, ಅಳತೆ ಮತ್ತು ಮಾಪನಕ್ಕೆ ಸಂಬಂಧಿಸಿದಂತೆ ಬಳಕೆಯಾಗುವ ಪದಗಳು ಮತ್ತು ಅವುಗಳ ಅರ್ಥವಿವರಣೆಗಳನ್ನು ಕೊಡಲಾಗಿದೆ. ಕೃಷಿಯ ವಲಯದಲ್ಲಿ ಬಳಕೆಯಾಗುವ ಬಹುತೇಕ ಪದಗಳನ್ನು ಈ ಕೃತಿ ಒಳಗೊಂಡಿರುವುದರಿಂದ ಒಂದರ್ಥದಲ್ಲಿ ಇದು ಮೌಖಿಕ ಪದಗಳ ದಾಖಲೆಯೂ ಆಗಿದೆ.

ಎಂ.ಡಿ. ಕಾಚಾಪೂರ ಅವರ ಸಂಪಾದಕೀಯದಲ್ಲಿ 'ಆಧುನಿಕ ಕೃಷಿ' ಎಂಬ ಕೃತಿ ಹೊರಬಂದಿದ್ದು ಈ ಕೃತಿಯಲ್ಲಿ ಪಾರಂಪರಿಕ ಕೃಷಿ ಪದ್ಧತಿಯ ವಿಧಾನಗಳಿಗೆ ಹೆಚ್ಚು ಒತ್ತು ಕೊಟ್ಟಿರುವರು. ಆಧುನಿಕ ಕೃಷಿ ವಿಧಾನಗಳಿಗಿಂತ ಪಾರಂಪರಿಕ ಸಾವಯವ ಕೃಷಿ ಹೆಚ್ಚು ಅನುಕೂಲಕರವಾಗಿರುವಂತಹದ್ದು ಎಂಬ ಧೋರಣೆಯನ್ನು ಕೃತಿಯು ಒಳಗೊಂಡಿದೆ. ಅದೇ ರೀತಿ ಶಿವನಂಜಯ್ಯ ಬಾಳೆಕಾಯಿ ಅವರಿಂದ ರಚಿತವಾದ 'ಪುಕುವ್ರೋಕನ ಹಾದಿಯಲ್ಲಿ' (೨೦೦೨) ಎನ್ನುವ ಕೃತಿಯಲ್ಲಿ ರೈತ ಮತ್ತು ಭಾರತದ ಇಂದಿನ ಕೃಷಿ ನೀತಿಯನ್ನು ಕುರಿತು ಚರ್ಚಿಸಲಾಗಿದೆ.

ಹೀಗೆ ಕೃಷಿಗೆ ಸಂಬಂಧಿಸಿದಂತೆ ಇನ್ನೂ ಅನೇಕ ಕೃತಿಗಳು ಬಂದಿವೆ. ಆದರೆ ಕೃಷಿ ಜಾನಪದಕ್ಕೆ ಅಥವಾ ಅದಕ್ಕೆ ಪೂರಕವಾಗಿ ವಿಶ್ಲೇಷಣಾತ್ಮಕ ಮತ್ತು ವೈಚಾರಿಕ ನೆಲೆಯಲ್ಲಿ ಬಂದ ಅಧ್ಯಯನಗಳು ಕಡಿಮೆ. ಆದರೆ ಕೆಲವು ಅಧ್ಯಯನಗಳು ಈ ಅಪವಾದಗಳಿಂದ ಹೊರಗುಳಿಯುತ್ತವೆ. ಅಂತವುಗಳಲ್ಲಿ ಎಸ್.ಎಸ್. ಹಿರೇಮಠ ಅವರ ಅಧ್ಯಯನ ಉಲ್ಲೇಖನೀಯವಾಗಿದೆ. ಏಕೆಂದರೆ ಇವರು ಕರ್ನಾಟಕ ಸಂಸ್ಕೃತಿಗೆ ಸಂಬಂಧಿಸಿದಂತೆ ಹೊರತಂದ ಕೃತಿಗಳಾದ 'ಕರ್ನಾಟಕ ಸಂಸ್ಕೃತಿ ಪರಂಪರೆ, ಭಾಗ-೧ ಮತ್ತು ಭಾಗ-೨' ಈ ಎರಡೂ ಕೃತಿಗಳಲ್ಲಿ ಸಂಸ್ಕೃತಿಯನ್ನು ಅರ್ಥೈಸುವ ಕ್ರಮ ಭಿನ್ನವಾಗಿದ್ದು, ಓದುಗರನ್ನು ವೈಚಾರಿಕತೆಗೆ ಹಚ್ಚುವ ಕೆಲಸವನ್ನು ಮಾಡುತ್ತವೆ. ಇವರು ವಿಷಯವನ್ನು ಈ ಹೊತ್ತಿನ ಸಂದರ್ಭದಲ್ಲಿಟ್ಟು ನೋಡದೆ ಅದರ ಗತಕಾಲಕ್ಕೂ ಹೋಗಿ ನೋಡುವ ಸಾಹಸ ಮಾಡಿದ್ದಾರೆ. ತಮ್ಮ ವಿಚಾರಗಳನ್ನು ತರ್ಕಬದ್ಧವಾಗಿ ಮಂಡಿಸಿದ್ದಾರೆ. ಒಟ್ಟಿನಲ್ಲಿ ಇವರ ಈ ಕೃತಿಗಳು ಈವರೆಗೂ ಜಾನಪದದಲ್ಲಿ ನಡೆದ ಅಧ್ಯಯನಗಳಿಗಿಂತ ವಿಶಿಷ್ಟ ಕೃತಿಗಳಾಗಿವೆ. ಈ ರೀತಿಯ ಕೆಲವು ಅಧ್ಯಯನಗಳನ್ನು ಹೊರತುಪಡಿಸಿದರೆ ಬಹುಪಾಲು ಕೃಷಿಗೆ ಸಂಬಂಧಿಸಿದಂತೆ ಬಂದ ಕೃತಿಗಳು ಅಥವಾ ಲೇಖನಗಳು ಮಾಹಿತಿ ಪ್ರಧಾನವಾದವುಗಳಾಗಿವೆ.

## ೧.೩ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಇತ್ತೀಚಿಗೆ ಮೌಖಿಕ ಆಕರಗಳ ಮೂಲಕ ಸಮುದಾಯದ ಸಂಸ್ಕೃತಿಯನ್ನು ಅರ್ಥೈಸುವ ಪ್ರಯತ್ನಗಳು ನಡೆಯುತ್ತಿವೆ. ಈ ರೀತಿಯ ಅಧ್ಯಯನಗಳಿಂದ ಚರಿತ್ರೆಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಜನಸಾಮಾನ್ಯರ ಬದುಕನ್ನು ಅನಾವರಣಗೊಳಿಸಲಾಗುತ್ತಿದೆ. ಅದೇ ರೀ ಪ್ರಸ್ತುತ ಅಧ್ಯಯನವು ಕೃಷಿ ವಲಯದಲ್ಲಿ ನಿರಂತರವಾಗಿ ತೊಡಗಿಕೊಂಡು ಬಂದ ಮಹಿಳೆಯ ಬದುಕನ್ನು ಕುರಿತದ್ದಾಗಿದ್ದು, ಅಧ್ಯಯನವು ಈ ಕೆಳಕಂಡ ಉದ್ದೇಶಗಳನ್ನು ಹೊಂದಿರುವುದು.

### ಅಧ್ಯಯನದ ಉದ್ದೇಶಗಳು

* ಆದಿಮ ಸಮಾಜದಲ್ಲಿ ಅಥವಾ ಕೃಷಿಯ ಆರಂಭಿಕ ಹಂತದಲ್ಲಿ ಮಹಿಳೆಯ ಸ್ಥಾನಮಾನಗಳು ಏನಾಗಿದ್ದವು ಎನ್ನುವುದನ್ನು ತಿಳಿಯುವುದು.
* ಕೃಷಿಯಲ್ಲಿ ಪುರುಷನ ಪ್ರವೇಶದ ನಂತರದಲ್ಲಾದ ಬದಲಾವಣೆ ಅಥವಾ ಕೃಷಿ ಬೆಳವಣಿಗೆಯಿಂದ ಕೃಷಿ ಮಹಿಳೆಯ ಸ್ಥಾನಮಾನಗಳಲ್ಲಿ ಯಾವ ಬಗೆಯ ಸ್ಥಿತ್ಯಂತರಗಳುಂಟಾದವು ಎಂಬುದನ್ನು ಗಮನಿಸುವುದು.
* ಭೂಮಿ ಮತ್ತು ಹೆಣ್ಣಿನ ಬಗೆಗೆ ರೂಢಿಯಲ್ಲಿದ್ದ ಗ್ರಹಿಕೆಗಳೇನು? ಎನ್ನುವುದನ್ನು ಗಮನಿಸುತ್ತ ಅವರ ಆ ಗ್ರಹಿಕೆಯಲ್ಲಿ ಮಹಿಳೆಗೆ ಯಾವ ಬಗೆಯ ಸ್ಥಾನಮಾನ ಇದೆ ಎಂಬುದನ್ನು ತಿಳಿಯುವುದು.
* ಕೃಷಿಕರ ಬದುಕಿನ ಭಾಗವೇ ಆಗಿದ್ದ ಕೃಷಿ ಸಂಬಂಧಿ ನಂಬಿಕೆ-ಆಚರಣೆಗಳನ್ನು ಸೂಕ್ಷ್ಮವಾಗಿ ಗಮನಿಸಿ ಮಹಿಳೆಯ ಬಗೆಗೆ ಕೃಷಿಕರ ಅಥವಾ ಕೃಷಿ ಸಮುದಾಯದ ಮನೋಭಾವ ಯಾವ ರೀತಿಯದು ಎಂಬುದನ್ನು ಅರಿಯುವುದು.
* ಕೃಷಿ ಮಹಿಳೆಯ ಬದುಕಿನ ಬಗೆಗೆ, ಕೃಷಿಯಲ್ಲಿನ ಅವಳ ಪಾಲುದಾರಿಕೆಯ ಬಗೆಗೆ ಮೌಖಿಕ ಸಾಹಿತ್ಯದಲ್ಲಿ ಏನು ಹೇಳಲಾಗಿದೆ ಎಂಬುದನ್ನು ಗಮನಿಸಿ ಅವುಗಳ ಮೂಲಕ ಕೃಷಿ ಸಮುದಾಯದಲ್ಲಿ ಆಕೆಯ ಸ್ಥಾನಮಾನ ಯಾವ ರೀತಿಯಾಗಿದೆ ಎಂಬುದನ್ನು ತಿಳಿದುಕೊಳ್ಳುವುದು.
* ವರ್ತಮಾನದ ಕೃಷಿಯಲ್ಲಿ ಮಹಿಳೆಯ ಪಾಲುದಾರಿಕೆ ಯಾವ ರೀತಿಯದು ಮತ್ತು ಕೃಷಿ ವಲಯದಲ್ಲಿ ಅವಳಿಗಿರುವ ಸ್ಥಾನಮಾನಗಳು ಯಾವ ರೀತಿಯವು ಎಂಬುದನ್ನು ತಿಳಿಯುವ ಮೂಲಕ ಕೃಷಿ ಮಹಿಳೆಯ ಬದುಕಿನ ಸಾಮಾಜಿಕ ವಾಸ್ತವಿಕತೆಯನ್ನು ಅರ್ಥ ಮಾಡಿಕೊಳ್ಳುವುದು.
* ಕೃಷಿ ಮಹಿಳೆಯ ದುಡಿಮೆಯನ್ನು ಯಾವ ರೀತಿ ಪರಿಗಣಿಸಲಾಗಿದೆ? ಅವರ ದುಡಿಮೆಗೆ ತಕ್ಕ ಪ್ರತಿಫಲ ದೊರೆಯುತ್ತಿದೆಯೇ? ಎಂಬುದನ್ನು ಗಮನಿಸುವುದು.
* ಕೃಷಿ ಕ್ಷೇತ್ರದಲ್ಲಾಗುತ್ತಿರುವ ಇತ್ತೀಚಿನ ಬೆಳವಣಿಗೆಗಳು ಕೃಷಿ ಮಹಿಳೆಯ ಮೇಲೆ ಯಾವ ಬಗೆಯ ಪರಿಣಾಮ ಬೀರುತ್ತವೆ ಎಂಬುದನ್ನು ಗಮನಿಸುವುದು.

* ದಾಖಲಿಸಲ್ಪಟ್ಟ ಕೃಷಿ ಸಂಬಂಧಿ ಮೌಖಿಕ ಪಠ್ಯಗಳ ವಿವರಗಳಿಗೂ ಮತ್ತು ಈ ಹೊತ್ತಿನ ಸಾಮಾಜಿಕ ವಾಸ್ತವದ ನಡುವೆ ಸಾಮ್ಯತೆಗಳಿವೆಯೇ? ಅಥವಾ ವೈರುಧ್ಯಗಳಿವೆಯೇ? ಎಂಬುದನ್ನು ಪರಿಶೀಲಿಸುವುದು.

* ಪುರುಷ ಪ್ರಧಾನ ಸಮಾಜದಲ್ಲಿ ಕೃಷಿ ಮಹಿಳೆ ಮನೆಯ ಒಳಗೆ ಮತ್ತು ಮನೆಯ ಹೊರಗೆ ಅನುಭವಿಸುತ್ತಿದ್ದ ಹಾಗೂ ಎದುರಿಸುತ್ತಿದ್ದ ಅಸಮಾನತೆಗಳನ್ನು ಗುರುತಿಸುವುದು ಮತ್ತು ಅವುಗಳನ್ನು ಪ್ರಶ್ನಿಸುವುದು ಅಧ್ಯಯನದ ಉದ್ದೇಶವಾಗಿದೆ. ಜೊತೆಗೆ ಆ ಬಗೆಯ ಅಸಮಾನತೆಗೆ ಏನು ಕಾರಣ ಎನ್ನುವುದನ್ನು ಕಂಡುಕೊಳ್ಳುವುದು.

* ಕೃಷಿಯ ಸಾಮಾಜಿಕ, ಸಾಂಸ್ಕೃತಿಕ ವಲಯದಲ್ಲಿ ಪ್ರಾಚೀನ ಕಾಲದಿಂದ ಹಿಡಿದು ವರ್ತಮಾನದ ವರೆಗಿನ ಮಹಿಳೆಯ ಪಾಲುದಾರಿಕೆಯಲ್ಲಿ ಮತ್ತು ಆಕೆಯ ಸಾಮಾಜಿಕ ಸ್ಥಾನಮಾನಗಳಲ್ಲಿ ಏನಾದರು ವ್ಯತ್ಯಾಸವಾಗಿದೆಯೇ? ಎಂಬುದನ್ನು ಸ್ಥೂಲವಾಗಿ ಗುರುತಿಸಲು ಪ್ರಯತ್ನಿಸುವುದು.

ಒಟ್ಟಾರೆ ಕೃಷಿ ಜಾನಪದದ ಮೂಲಕ ಕೃಷಿ ಮಹಿಳೆಯ ಬದುಕನ್ನು ವಿವಿಧ ಆಯಾಮದಲ್ಲಿ ಅರ್ಥೈಸುವುದು, ಆ ಮೂಲಕ ಆಕೆಯ ಅಸ್ಮಿತೆಗಳೇನು? ಎನ್ನುವುದನ್ನು ತಿಳಿಯುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ ಮತ್ತು ವಿಧಾನ

ಪ್ರಸ್ತುತ ಅಧ್ಯಯನವು ಕೃಷಿ ಮಹಿಳೆಯನ್ನು ಕೇಂದ್ರವಾಗಿರಿಸಿಕೊಂಡಿದೆ. ಅಧ್ಯಯನದ ಸ್ಪಷ್ಟತೆಗಾಗಿ ಅಧ್ಯಯನದ ವ್ಯಾಪ್ತಿಯನ್ನು ಕರ್ನಾಟಕ ರಾಜ್ಯದ ಹಾವೇರಿ ಜಿಲ್ಲೆಗೆ ಸೀಮಿತಗೊಳಿಸಿಕೊಳ್ಳಲಾಗಿದೆ. ಅಧ್ಯಯನಕ್ಕೆ ರೂಪಿಸಿಕೊಂಡ ಕ್ಷೇತ್ರಾಧ್ಯಯನವು ಹಾವೇರಿ ಜಿಲ್ಲೆಯ ಒಟ್ಟು ಆರು ತಾಲ್ಲೂಕುಗಳನ್ನು ಒಳಗೊಂಡಿದ್ದು, ಪ್ರತಿ ತಾಲ್ಲೂಕಿನಲ್ಲೂ ಎರಡೆರಡು ಹಳ್ಳಿಗಳನ್ನು ಪ್ರಾತಿನಿಧಿಕವಾಗಿ ಆಯ್ದುಕೊಳ್ಳಲಾಗಿದೆ. ಹಾಗಿದ್ದಾಗಲೂ ಕೆಲವೊಮ್ಮೆ ಸಾರ್ವತ್ರಿಕ ನೆಲೆಯಲ್ಲಿ ವಿಚಾರಗಳನ್ನು ವಿಸ್ತರಿಸುವ ಉದ್ದೇಶವಿರುವುದರಿಂದ ಇತರ ಸ್ಥಳದ ಕೃಷಿಗೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನವು ಕ್ಷೇತ್ರಾಧಾರಿತ ಮಾಹಿತಿಗಳನ್ನು ಆಧರಿಸಿದೆ. ಅಲ್ಲದೆ ಈಗಾಗಲೇ ಸಂಗ್ರಹಿತವಾದ ಕೃಷಿ ಸಂಬಂಧಿಸಿದ ಜನಪದ ಸಾಹಿತ್ಯವನ್ನು, ಕೆಲವು ಆಚರಣೆಗೆ ಸಂಬಂಧಿಸಿದ ಮಾಹಿತಿಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಜೊತೆಗೆ ಈ ವಿಷಯಕ್ಕೆ ಸಂಬಂಧಿಸಿದಂತೆ ನಡೆದ ಅಧ್ಯಯನಗಳನ್ನು, ಲೇಖನಗಳನ್ನು, ಪತ್ರಿಕೆಗಳನ್ನು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಾರ್ಯಾಲಯದಿಂದ ಪಡೆದ ಮತ್ತು ಸರ್ಕಾರದ ವರದಿಗಳನ್ನು ಪಡೆದ ಅಂಕಿ-ಅಂಶಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಹೀಗೆ ಒಟ್ಟು ಅಧ್ಯಯನದಲ್ಲಿ ಲಿಖಿತ-ಅಲಿಖಿತ, ಪ್ರಕಟಿತ-ಅಪ್ರಕಟಿತ, ಪ್ರಾಥಮಿಕ ಮತ್ತು ಆನುಷಂಗಿಕ ಮಾಹಿತಿಗಳನ್ನು ಬಳಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಪ್ರಕರಣ ಅಧ್ಯಯನಗಳನ್ನು ಕೂಡ ಬಳಸಿಕೊಳ್ಳಲಾಗಿದೆ.

ಸ್ತ್ರೀನಿಷ್ಠ ನೆಲೆಯಿಂದ ಅಧ್ಯಯನ ಕೈಗೊಂಡಿರುವುದು ಈ ಅಧ್ಯಯನದ ವೈಶಿಷ್ಟ್ಯತೆಯಾಗಿದ್ದು, ಅಧ್ಯಯನದ ಆಕರಗಳಿಗಾಗಿ ಮೌಖಿಕ ಆಕರಗಳನ್ನು ಆಧರಿಸಲಾಗಿದೆ. ಹಾಗಾಗಿ ಅಧ್ಯಯನವು ಕ್ಷೇತ್ರಾಧಾರಿತ ಮಾಹಿತಿಯನ್ನು ಅವಲಂಬಿಸಿದೆ. ಕ್ಷೇತ್ರಕಾರ್ಯದಲ್ಲಿ ಸಂದರ್ಶನ, ಅವಲೋಕನ ಮತ್ತು ಅರಚಿತ ಪ್ರಶ್ನಾವಳಿ ವಿಧಾನಗಳನ್ನು ಹೆಚ್ಚಾಗಿ ಬಳಸಿಕೊಳ್ಳಲಾಗಿದೆ. ಅಲ್ಲದೆ ಜಾನಪದದಲ್ಲಿ ಈಗಾಗಲೇ ಸಾಕಷ್ಟು ಸಂಗ್ರಹಣೆಯ ಕೆಲಸ ಆಗಿದ್ದರಿಂದ ಈ ರೀತಿ ಸಂಗ್ರಹಿತ ಮಾಹಿತಿಗಳಲ್ಲಿ ಕೃಷಿಗೆ ಸಂಬಂಧಿಸಿದ ಮಾಹಿತಿಗಳನ್ನು ಪ್ರತ್ಯೇಕಿಸಿಕೊಂಡು ಅವುಗಳನ್ನು ವಿಶ್ಲೇಷಣೆಗೆ ಒಳಪಡಿಸುವ ಕೆಲಸವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

### ೧.೪ ಅಧ್ಯಯನದ ಪರಿಕಲ್ಪನೆಗಳು

ಜಾನಪದ ಅಧ್ಯಯನ ಕ್ಷೇತ್ರ ಬೆಳೆದಂತೆ ಜಾನಪದವನ್ನು ಬಿಡಿ ಬಿಡಿಯಾಗಿ ವಿಭಾಗಿಸಿ ಅಧ್ಯಯನ ಮಾಡುವ ಕ್ರಮ ಬೆಳೆದು ಬರುತ್ತಿದೆ. ಉದಾ : ಪ್ರಾಣಿ ಜಾನಪದ, ಸಸ್ಯ ಜಾನಪದ, ಆಕಾಶ ಜಾನಪದ, ಮುಸ್ಲಿಂ ಜಾನಪದ, ಕ್ರೈಸ್ತ ಜಾನಪದ, ನಗರ ಜಾನಪದ ಎಂಬ ಮುಂತಾದ ಪ್ರಕಾರಗಳಲ್ಲಿ ಅಧ್ಯಯನ ನಡೆಯುತ್ತಿದೆ. ಅಂತೆಯೇ ಕೃಷಿ ಜಾನಪದ ಅಥವಾ ವ್ಯವಸಾಯ ಜಾನಪದ ಎಂಬ ಪರಿಕಲ್ಪನೆಯು ಜಾನಪದ ಅಧ್ಯಯನ ಚೌಕಟ್ಟಿನಲ್ಲಿ ರೂಪತಳೆದ ಒಂದು ಪ್ರಕಾರವಾಗಿದೆ.

ಸಮಷ್ಟಿ ಪ್ರಜ್ಞೆಯನ್ನು, ಸಮಷ್ಟಿ ಸ್ವರೂಪವನ್ನು ಹೊಂದಿರುವುದು ಜಾನಪದದ ಸ್ವಭಾವ. ಅಂತೆಯೇ ವ್ಯವಸಾಯ ಅಥವಾ ಕೃಷಿ ಎನ್ನುವ ಔದ್ಯೋಗಿಕ ವಲಯ ಒಬ್ಬ ವ್ಯಕ್ತಿಗೆ ಸಂಬಂಧಿಸಿದ್ದಾಗಲಿ, ಒಂದು ವರ್ಗಕ್ಕೆ ಸಂಬಂಧಿಸಿದ್ದಾಗಲಿ ಅಲ್ಲ. ಹಲವು ವ್ಯಕ್ತಿಗಳು, ಹಲವು ಸಮೂಹಗಳು ಕೃಷಿಯಲ್ಲಿ ತೊಡಗಿಕೊಂಡಿದ್ದರಿಂದ ಇದು ಸಮಷ್ಟಿ ಸ್ವಭಾವವನ್ನು ಹೊಂದಿರುವಂತಹುದು. ಹಾಗಾಗಿ ವ್ಯವಸಾಯ ಅಥವಾ ಕೃಷಿ ಆವರಣದಿಂದ ಹೊರ ಹೊಮ್ಮಿದ ಸಾಹಿತ್ಯಿಕ ಅಭಿವ್ಯಕ್ತಿಯಾಗಿರಬಹುದು, ಸಾಂಸ್ಕೃತಿಕ ಅಭಿವ್ಯಕ್ತಿಯಾಗಿರಬಹುದು ಅಥವಾ ಕೃಷಿಕರ ಬದುಕಿನ ವಿವರಗಳಾಗಿರಬಹುದು. ಅವು ಜಾನಪದದ ಭಾಗವೇ ಆಗಿವೆ. ಜಾನಪದ ಎಂಬುದಕ್ಕೆ ಹಲವಾರು ಬಗೆಯ ವ್ಯಾಖ್ಯಾನಗಳು ಇದ್ದಾಗಲೂ ಅಂತಿಮವಾಗಿ ಈ ಹೊತ್ತಿನಲ್ಲಿ ಅನೇಕರು 'ಜನರ ಜೀವನ ವಿಧಾನವನ್ನು ಜಾನಪದ' ಎಂದು ಒಪ್ಪಿಕೊಂಡಿದ್ದಾರೆ. ಅಂತೆಯೇ 'ಕೃಷಿ ಜಾನಪದ' ಎಂಬುದನ್ನು ಈ ಹಿನ್ನೆಲೆಯಲ್ಲಿಯೇ ಗ್ರಹಿಸಬಹುದು. 'ಕೃಷಿಯನ್ನು ಅವಲಂಬಿಸಿ ಬದುಕುತ್ತಿದ್ದ ಜನರ ಜೀವನ ವಿಧಾನವನ್ನು ಅಥವಾ ಕೃಷಿಕರ ಜೀವನ ವಿಧಾನವನ್ನು ಕೃಷಿ ಜಾನಪದ' ಎಂದು ಕರೆದುಕೊಳ್ಳಬಹುದು. ಪ್ರಸ್ತುತ ಅಧ್ಯಯನದಲ್ಲಿ 'ಕೃಷಿ ಜಾನಪದ' ಎಂಬುದನ್ನು ಈ ಹಿನ್ನೆಲೆಯಲ್ಲಿಯೇ ಗ್ರಹಿಸಲಾಗಿದೆ.

'ಜನ ಮೊಟ್ಟಮೊದಲು ವಸ್ತುಗಳನ್ನು ಉತ್ಪಾದಿಸುತ್ತಾರೆ. ಈ ಉತ್ಪಾದನಾ ಪ್ರಕ್ರಿಯೆಯಲ್ಲಿಯೇ ವಸ್ತುಗಳ ಬಗೆಗಿನ ಮನೋಭಾವವೂ ಪ್ರಕಟಗೊಳ್ಳುವುದು. ಹಾಗಾಗಿ ಶ್ರಮ ಪ್ರಕ್ರಿಯೆಯಿಂದ ಪ್ರತ್ಯೇಕಿಸಿ, ಸಂಸ್ಕೃತಿಯನ್ನು ಗ್ರಹಿಸುವುದು ಕಷ್ಟವಾಗುತ್ತದೆ' (ಎಸ್.ಎಸ್. ಹಿರೇಮಠ, ೧೯೯೫, ಪು. ೬೯). ಜಾನಪದವೂ

ಸಂಸ್ಕೃತಿಯ ಭಾಗವೇ ಆಗಿದ್ದರಿಂದ ಆ ಜಾನಪದ ಕೂಡ ಶ್ರಮ ಪ್ರಕ್ರಿಯೆಯಿಂದ ಹೊರತುಪಡಿಸಿರುವಂತಹದ್ದೇನಲ್ಲ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ 'ಕೃಷಿ ಜಾನಪದ' ಎನ್ನುವುದನ್ನು ಕೇವಲ ಕೃಷಿ ಸಂಬಂಧಿ ನಂಬಿಕೆ, ಆಚರಣೆಗಳು, ಕೃಷಿ ಜನಪದ ಸಾಹಿತ್ಯ ಇವುಗಳಿಗಷ್ಟೇ ಸೀಮಿತ ಮಾಡಿಕೊಳ್ಳದೆ ಅವರ ದುಡಿಮೆಯ ವಲಯವನ್ನು ಕೃಷಿ ಜಾನಪದದ ಭಾಗವಾಗಿಸಿಕೊಂಡೇ ಅಧ್ಯಯನಕ್ಕೆ ತೊಡಗಲಾಗಿದೆ.

ಅಧ್ಯಯನದಲ್ಲಿ 'ಕೃಷಿ ಸಮುದಾಯ' ಎಂಬ ಪದ ಬಳಕೆ ಮಾಡಲಾಗಿದೆ. ಇಲ್ಲಿ 'ಸಮುದಾಯ' ಎಂಬ ಪದವನ್ನು ಜಾತಿಯ ಅಥವಾ ಜನಾಂಗದ ಹಿನ್ನೆಲೆಯಲ್ಲಿ ಬಳಸದೆ ವೃತ್ತಿಯ ಹಿನ್ನೆಲೆಯಲ್ಲಿ ಬಳಸಲಾಗಿದೆ. ಕೃಷಿಯನ್ನೇ ವೃತ್ತಿಯನ್ನಾಗಿ ಅವಲಂಬಿಸಿದ ಮತ್ತು ಕೃಷಿಯಲ್ಲಿ ಪರೋಕ್ಷವಾಗಿ ತೊಡಗಿಕೊಂಡ ಅಂದರೆ ನೇರವಾಗಿ ಕೃಷಿ ದುಡಿಮೆಯಲ್ಲಿ ತೊಡಗಿಕೊಳ್ಳದೆ ಬೇರೆಯವರಿಂದ ಸಾಗುವಳಿ ಮಾಡಿಸಿ, ಕೃಷಿಯ ಆದಾಯದಲ್ಲಿಯೇ ಬದುಕುತ್ತಿದ್ದವರನ್ನು ಕೃಷಿ ಸಮುದಾಯದವರು ಎನ್ನುವ ಪರಿಧಿಯೊಳಗೆ ಪರಿಗಣಿಸಲಾಗಿದೆ.

ಅಂತೆಯೇ ಅಧ್ಯಯನದಲ್ಲಿ 'ತಾತ್ವಿಕತೆ' ಎಂಬ ಪದ ಬಳಕೆ ಮಾಡಲಾಗಿದೆ. 'ತಾತ್ವಿಕತೆ' ಎಂಬುದನ್ನು 'ಉದ್ದೇಶ', 'ಹಿನ್ನೆಲೆ', 'ಆಶಯ' ಎನ್ನುವ ಅರ್ಥದಲ್ಲಿ ಬಳಸಿಕೊಳ್ಳಲಾಗಿದೆ. ಅದೇ ರೀತಿ ಅಧ್ಯಯನದಲ್ಲಿ 'ಆಧುನಿಕತೆ' ಎಂಬ ಪರಿಕಲ್ಪನೆಯೂ ಬಳಕೆಯಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಯುರೋಪಿನಲ್ಲಾದ ಕೈಗಾರಿಕಾ ಕ್ರಾಂತಿಯ ನಂತರದ ದಿನಗಳಲ್ಲಾದ ಬದಲಾವಣೆಗಳನ್ನು 'ಆಧುನಿಕತೆ' ಎಂಬ ಅರ್ಥದಲ್ಲಿ ಬಳಸಲಾಗಿದೆ.

### ೧.೫ ಅಧ್ಯಯನದ ಸ್ವರೂಪ

ಪ್ರಸ್ತುತ ಮಹಾಪ್ರಬಂಧವು ಒಟ್ಟಾರೆ ಎಂಟು ಅಧ್ಯಾಯಗಳನ್ನು ಒಳಗೊಂಡಿದೆ. ಮೊದಲ ಅಧ್ಯಾಯದಲ್ಲಿ ಪ್ರಸ್ತುತ ಅಧ್ಯಯನದ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಅಧ್ಯಯನ ವಿಷಯಕ್ಕೆ ಪೂರಕವಾಗಿ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ ಮಾಡಲಾಗಿದೆ. ಈ ಸಮೀಕ್ಷೆಯಲ್ಲಿ ಆ ಅಧ್ಯಯನಗಳ ಸ್ವರೂಪ ಯಾವ ರೀತಿಯದು? ಮತ್ತು ಅವುಗಳ ಮಿತಿಗಳನ್ನು ಹೇಳುವುದರ ಜೊತೆಗೆ ಪ್ರಸ್ತುತ ಅಧ್ಯಯನದ ಉದ್ದೇಶಗಳೇನು ಎಂಬುದನ್ನು ಹೇಳಲಾಗಿದೆ.

ಅಧ್ಯಾಯ ಎರಡರಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಕ್ಷೇತ್ರವಾದ ಹಾವೇರಿ ಜಿಲ್ಲೆಯ ಬಗೆಗೆ ಸ್ಥೂಲವಾದ ಪರಿಚಯವನ್ನು ನೀಡಲಾಗಿದೆ. ಜಿಲ್ಲೆಯ ಚಾರಿತ್ರಿಕ ಮತ್ತು ಭೌಗೋಳಿಕ ವಿವರಗಳನ್ನು, ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆ, ಜಿಲ್ಲೆಯ ಹವಾಮಾನ ಮತ್ತು ಮಳೆಗೆ ಸಂಬಂಧಿಸಿದ ವಿವರಗಳನ್ನು, ಜಿಲ್ಲೆಯ ಪ್ರಮುಖ ಉದ್ಯೋಗ, ಜಿಲ್ಲೆಯಲ್ಲಿ ಬೆಳೆಯುವ ಬೆಳೆಗಳು, ಜಿಲ್ಲೆಯ ಆದಾಯ ಮೂಲ, ಶೈಕ್ಷಣಿಕ ವಿವರ ಮತ್ತು ಜಿಲ್ಲೆಗೆ ಸಂಬಂಧಿಸಿದ ಇತರ ಕೆಲವು ಮಾಹಿತಿಗಳನ್ನು ಸಂಕ್ಷಿಪ್ತವಾಗಿ

ಈ ಅಧ್ಯಾಯದಲ್ಲಿ ಕೊಡಲಾಗುವುದು. ಈ ವಿವರಗಳು ಅಧ್ಯಯನದಲ್ಲಿ ಚರ್ಚಿಸುವ ವಿಷಯದ ಅರ್ಥೈಸುವಿಕೆಗೆ ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ.

ಅಧ್ಯಾಯ ಮೂರು 'ಕೃಷಿಯ ಹುಟ್ಟು, ಬೆಳವಣಿಗೆ ಮತ್ತು ಮಹಿಳೆ' ಎಂಬ ಶೀರ್ಷಿಕೆಯದಾಗಿದ್ದು, ಇದರಲ್ಲಿ ಕೃಷಿಯನ್ನು ಕಂಡುಕೊಳ್ಳುವ ಪೂರ್ವದಲ್ಲಿ ಮನುಷ್ಯ ಜೀವಿಗಳು ಬದುಕು ಸಾಗಿಸುತ್ತಿದ್ದ ಕ್ರಮ ಯಾವ ರೀತಿಯಿತ್ತು? ಎಂಬುದನ್ನು ಹೇಳುತ್ತಲೇ, ಕೃಷಿಯ ಉಗಮ ವಿಕಾಸದ ಕುರಿತು ಚರ್ಚಿಸಲಾಗುವುದು. ಮುಖ್ಯವಾಗಿ ಕೃಷಿ ಉಗಮ ವಿಕಾಸಕ್ಕೆ ಮಹಿಳೆಯ ಕೊಡುಗೆ ಯಾವ ಬಗೆಯದು? ಎಂಬುದರ ಕಡೆಗೆ ಹೆಚ್ಚು ಒತ್ತು ಕೊಡಲಾಗುವುದು. ಕೃಷಿ ಕಂಡುಕೊಂಡ ಆರಂಭಿಕ ಕಾಲಘಟ್ಟದಲ್ಲಿ ಮಹಿಳೆಯ ಸ್ಥಾನಮಾನ ಯಾವ ರೀತಿಯಾಗಿತ್ತು? ಕೃಷಿಯಲ್ಲಿ ಪುರುಷನ ಪ್ರವೇಶವಾದ ನಂತರದಲ್ಲಾದ ಬದಲಾವಣೆಗಳೇನು? ಕೃಷಿಯ ಉಪಕರಣಗಳಲ್ಲಾದ ಸುಧಾರಣೆಯಿಂದ ಕೃಷಿಯಲ್ಲಾದ ಬೆಳವಣಿಗೆಗಳೇನು ಎಂಬ ವಿಷಯವನ್ನು ಕುರಿತು ಚರ್ಚಿಸಲಾಗುವುದು.

ಅಧ್ಯಾಯ ನಾಲ್ಕು 'ಭೂಮಿ ಮತ್ತು ಹೆಣ್ಣಿನ ಸಮೀಕರಣ' ಎಂಬ ವಿಷಯಕ್ಕೆ ಸಂಬಂಧಿಸಿರುವಂತಹದ್ದು. ಈ ಅಧ್ಯಾಯದಲ್ಲಿ ಭೂಮಿ ಮತ್ತು ಹೆಣ್ಣಿನ ಬಗೆಗೆ ಇರುವ ಸಾಮಾಜಿಕ ಗ್ರಹಿಕೆಗಳೇನು? ಭೂಮಿ ಮತ್ತು ಹೆಣ್ಣನ್ನು ಏಕೆ ಸಮೀಕರಿಸಿಕೊಂಡು ಬರಲಾಗಿದೆ? ಭೂಮಿಯನ್ನು ಹೆಣ್ಣಿನ ಸ್ವರೂಪದಲ್ಲಿ ಪೂಜಿಸುವ, ಆರಾಧಿಸುವ, ಗೌರವಿಸುವ ಕ್ರಮ ಮತ್ತು ಹೆಣ್ಣಿನ ಗುಣ ಸ್ವಭಾವಗಳಿಗೆ ಭೂಮಿಯ ಹೋಲಿಕೆ ಕೊಡುವ ಇಲ್ಲವೆ ಹೆಣ್ಣನ್ನು ಭೂಮಿಯಷ್ಟೆ ಶ್ರೇಷ್ಠ ಎಂಬ ವೈಭವೀಕರಿಸುವುದರ ಹಿಂದಿರುವ ಉದ್ದೇಶವೇನು? ಎಂಬುದನ್ನು ಈ ಅಧ್ಯಾಯದಲ್ಲಿ ಚರ್ಚಿಸಲು ಪ್ರಯತ್ನಿಸಲಾಗುವುದು.

ಅಧ್ಯಾಯ ಐದರಲ್ಲಿ 'ಕೃಷಿ ಸಂಬಂಧಿ ನಂಬಿಕೆ-ಆಚರಣೆಗಳು ಮತ್ತು ಮಹಿಳೆ' ಎಂಬ ವಿಷಯವನ್ನು ಕುರಿತು ಚರ್ಚಿಸಲಾಗಿದ್ದು, ಇಲ್ಲಿ ಕೆಲವು ಕೃಷಿ ಆಚರಣೆಗಳ ವಿವರ, ಅವು ಆಚರಿಸಲ್ಪಡುವ ವಿಧಾನ, ಕೃಷಿಯ ಸಾಂಸ್ಕೃತಿಕ ಆಚರಣೆ ಮತ್ತು ನಂಬಿಕೆಗಳು ಏನು ಹೇಳುತ್ತವೆ? ಆಚರಣೆಗಳು ಹುಟ್ಟಿಕೊಳ್ಳುವಿಕೆಯ ಹಿಂದಿರುವ ಆಶಯವೇನಾಗಿತ್ತು? ಕೃಷಿ ಆಚರಣೆಗಳಲ್ಲಿ ಮಹಿಳೆಯ ಪಾಲುದಾರಿಕೆ ಯಾವ ರೀತಿಯದು? ಕೃಷಿ ಸಂಸ್ಕೃತಿಯಲ್ಲಿ ಮಹಿಳೆಯನ್ನು ಹೇಗೆ ಕಾಣಲಾಗಿದೆ ಎಂಬುದನ್ನು ಕೃಷಿ ಸಮುದಾಯದ ನಂಬಿಕೆ ಆಚರಣೆಗಳ ಮೂಲಕ ನೋಡುವ ಪ್ರಯತ್ನವನ್ನು ಮಾಡಲಾಗುವುದು.

ಅಧ್ಯಾಯ ಆರು 'ಕೃಷಿ ಸಂಬಂಧಿ ಜನಪದ ಸಾಹಿತ್ಯ ಮತ್ತು ಮಹಿಳೆ' ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಈ ಅಧ್ಯಾಯದಲ್ಲಿ ಸಾಹಿತ್ಯ ಅಂದರೇನು? ಸಾಹಿತ್ಯಕ್ಕೂ ಜನಜೀವನಕ್ಕೂ ಇರುವ ಸಂಬಂಧ ಯಾವ ರೀತಿಯದು? ಕೃಷಿ ಜನಪದ ಸಾಹಿತ್ಯದ ಸ್ವರೂಪ ಯಾವ ಬಗೆಯದು? ಕೃಷಿ ಸಂಬಂಧಿ ಜನಪದ ಸಾಹಿತ್ಯದಲ್ಲಿ, ಕೃಷಿಯಲ್ಲಿ ಮಹಿಳೆಯ ಪಾಲುದಾರಿಕೆಯನ್ನು ಕುರಿತಂತೆ ಏನು ಹೇಳಲಾಗಿದೆ? ಕೃಷಿ ಮಹಿಳೆಯ ಬದುಕು ಹೇಗೆ ಚಿತ್ರಣಗೊಂಡಿದೆ ಎಂಬುದನ್ನು ತಿಳಿಯುವ ಪ್ರಯತ್ನ ಮಾಡಲಾಗುವುದು.

ಏಳನೆಯ ಅಧ್ಯಾಯದಲ್ಲಿ 'ಕೃಷಿ, ಮಹಿಳೆ ಮತ್ತು ಸಮಕಾಲೀನತೆ'ಯನ್ನು ಕುರಿತಂತೆ ಚರ್ಚಿಸಲಾಗಿದೆ. ಈ ಹೊತ್ತಿನಲ್ಲಿ ಕೃಷಿ ವಲಯದಲ್ಲಿ ಮಹಿಳೆಯ ಪಾಲುದಾರಿಕೆಯ ಸ್ವರೂಪ ಯಾವ ಬಗೆಯದು? ಕೃಷಿಯ ಯಾವ ಕೆಲಸಗಳಲ್ಲಿ ಅವಳ ಪಾಲುದಾರಿಕೆ ಇದೆ? ಮತ್ತು ವ್ಯವಸ್ಥೆಯೊಳಗೆ ಎಲ್ಲಿ ಅವಳ ಪಾಲುದಾರಿಕೆ ಇಲ್ಲ? ಏಕೆ? ಅದರ ಹಿಂದಿರುವ ತಾತ್ವಿಕತೆ ಏನು ಎಂಬುದನ್ನು ಅರಿಯುವ ಮತ್ತು ಸಾಮಾಜಿಕ ಹಾಗೂ ಕೌಟುಂಬಿಕ ವಲಯದಲ್ಲಿ ಕೃಷಿ ಮಹಿಳೆಯ ಸ್ಥಾನಮಾನ ಯಾವ ಬಗೆಯದು ಎಂಬುದನ್ನು ವಿವರಿಸುವ ಪ್ರಯತ್ನ ಮಾಡಲಾಗುವುದು. ಈ ಅಧ್ಯಾಯದ ಎರಡನೆಯ ಭಾಗದಲ್ಲಿ ಸಮಕಾಲೀನ ಸಂದರ್ಭದ ಕೃಷಿಯಲ್ಲಿ ಆಧುನಿಕ ಯಂತ್ರೋಪಕರಣ, ತಂತ್ರಜ್ಞಾನಗಳ ಬಳಕೆಯಿಂದ ಯಾವ ರೀತಿಯ ಪರಿಣಾಮ ಬೀರಿದೆ ಎಂಬುದನ್ನು 'ಆಧುನಿಕತೆಯಿಂದ ಕೃಷಿ ಮತ್ತು ಕೃಷಿ ಅವಲಂಬಿತ ಮಹಿಳಾ ದುಡಿಮೆಗಾರರ ಮೇಲಾದ ಪರಿಣಾಮ ಹಾಗೂ ಆಧುನಿಕತೆಯಿಂದ ಪಾರಂಪರಿಕ ಕೃಷಿ ಜ್ಞಾನ ಮತ್ತು ಕೃಷಿಯ ಸಾಂಸ್ಕೃತಿಕ ಪರಿಸರದ ಮೇಲಾದ ಪರಿಣಾಮ' ಯಾವ ರೀತಿಯದು ಎಂಬ ಈ ಎರಡು ನೆಲೆಯಲ್ಲಿ ವಿಷಯವನ್ನು ಚರ್ಚಿಸಲಾಗುವುದು.

ಅಧ್ಯಾಯ ಎಂಟು 'ಸಮಾರೋಪ'ದಲ್ಲಿ ಒಟ್ಟು ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಯನದ ಸಂದರ್ಭದಲ್ಲಿ ಎದುರಾದ ದ್ವಂದ್ವಗಳನ್ನು ಹೇಳುತ್ತಲೇ, ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಮತ್ತು ಕೆಲವು ಸಲಹೆಗಳನ್ನು ನೀಡುವ ಪ್ರಯತ್ನ ಮಾಡಲಾಗುವುದು.

* * * * *

ಅಧ್ಯಾಯ ೧

# ಹಾವೇರಿ ಜಿಲ್ಲೆ : ಒಂದು ಪರಿಚಯಾತ್ಮಕ ನೋಟ

# ಅಧ್ಯಾಯ ೨

# ಹಾವೇರಿ ಜಿಲ್ಲೆ : ಒಂದು ಪರಿಚಯಾತ್ಮಕ ನೋಟ

**'ಕೃಷಿ** ಜಾನಪದ ಮತ್ತು ಮಹಿಳೆ' ಎನ್ನುವ ಈ ಅಧ್ಯಯನವು ಸಮಾಜ ವಿಜ್ಞಾನ ಸಂಶೋಧನೆಯಾಗಿದ್ದು, ಅಧ್ಯಯನದ ಅನುಕೂಲಕ್ಕಾಗಿ ಒಂದು ನಿರ್ದಿಷ್ಟ ಕ್ಷೇತ್ರವನ್ನು ಗುರುತಿಸಿಕೊಳ್ಳಲಾಗಿದೆ. ಅಧ್ಯಯನದ ವಿಷಯ ಯಾವುದೇ ಆಗಿದ್ದರೂ ಅದನ್ನು ಸರಿಯಾಗಿ ಅರ್ಥೈಸಲು ಮತ್ತು ಆ ವಿಷಯದ ಬಗೆಗೆ ಒಂದು ಸೈದ್ಧಾಂತಿಕತೆಯನ್ನು ಕಟ್ಟಿಕೊಡಬೇಕಾದರೆ ಮೊದಲು ಅಧ್ಯಯನಕ್ಕೆ ಆಯ್ದುಕೊಂಡ ಕ್ಷೇತ್ರದ ಒಟ್ಟಾರೆ ಭೌಗೋಳಿಕ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳ ಕುರಿತು ಮಾಹಿತಿ ಇರುವುದು ಅವಶ್ಯಕವಾಗಿದೆ. ಆಗ ಅಧ್ಯಯನದ ಬಗೆಗೆ ವಿಶ್ಲೇಷಿಸುವ, ಚರ್ಚಿಸುವ, ಆ ಕ್ಷೇತ್ರದ ಸಮಸ್ಯೆಗಳನ್ನು ಗುರುತಿಸಿಕೊಳ್ಳಲು, ಅರ್ಥೈಸಿಕೊಳ್ಳಲು ಹಾಗೂ ಪರಿಹಾರೋಪಾಯಗಳನ್ನು ಕಂಡುಕೊಳ್ಳಲು ಅನುಕೂಲ ವಾಗುತ್ತದೆ. ಕಾರಣ ಅಧ್ಯಯನ ವಿಷಯದ ಪ್ರವೇಶಕ್ಕೂ ಮೊದಲು ಅಧ್ಯಯನ ಕ್ಷೇತ್ರವಾದ ಹಾವೇರಿ ಜಿಲ್ಲೆಯ ಬಗೆಗೆ ಸ್ಥೂಲವಾದ ಪರಿಚಯವನ್ನು ಕೊಡುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಈಗ ಜಿಲ್ಲೆ ಎಂದು ಕರೆಯುತ್ತಿರುವ ಹಾವೇರಿಯು ಮೊದಲು ಧಾರವಾಡ ಜಿಲ್ಲೆಗೆ ಸೇರಿತ್ತು. ೧೯೯೭ ರಲ್ಲಿ ಕರ್ನಾಟಕ ಸರ್ಕಾರವು ಏಳು ಹೊಸ ಜಿಲ್ಲೆಗಳನ್ನು ರೂಪಿಸಿತು. ಆಗ ಧಾರವಾಡ ಜಿಲ್ಲೆಯನ್ನು ವಿಭಜಿಸಿ ಗದಗ ಮತ್ತು ಹಾವೇರಿ ಎಂಬ ಹೊಸ ಜಿಲ್ಲೆಗಳನ್ನು ರೂಪಿಸಲಾಗಿದ್ದು, ಬ್ಯಾಡಗಿ, ಹಾನಗಲ್ಲು, ಹಾವೇರಿ, ಹಿರೇಕೆರೂರು, ರಾಣೆಬೆನ್ನೂರು, ಸವಣೂರು ಮತ್ತು ಶಿಗ್ಗಾಂವ ತಾಲ್ಲೂಕುಗಳನ್ನು ಸೇರಿಸಿ ಹಾವೇರಿ ಜಿಲ್ಲೆಯನ್ನಾಗಿ ಮಾಡಲಾಯಿತು.

## ೨.೧ ಜಿಲ್ಲೆಯ ಚಾರಿತ್ರಿಕ ನೋಟ

ಚರಿತ್ರೆಯನ್ನು ಗಮನಿಸಿದಾಗ ಹಾವೇರಿ ಜಿಲ್ಲೆಯ ವಿವಿಧ ಭಾಗಗಳು ಅನೇಕ ರಾಜಮನೆತನಗಳ ಆಳ್ವಿಕೆಗೆ ಒಳಪಟ್ಟಿದೆ. ರಾಷ್ಟ್ರಕೂಟರು, ರಾಷ್ಟ್ರಕೂಟರ ಸಾಮಂತರಾದ ಚಲ್ಲಕೇತನರು, ಕಲ್ಯಾಣ ಚಾಲುಕ್ಯರು, ಗೋವ, ಬನವಾಸಿ ಕದಂಬರು, ಮಂಡಲೇಶ್ವರರು, ಕಲಿಯಮರಸರು, ಹೊಯ್ಸಳರು, ಬಿಜಾಪುರದ ಆದಿಲ್‌ಶಾಹಿಗಳು, ಹೈದರಾಲಿ, ಟಿಪ್ಪುಸುಲ್ತಾನರು, ಹಂಪೆ ಪಾಳೆಗಾರರು ಈ ಅರಸು ಮನೆತನಗಳು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಾರೆ ಎಂಬುದಕ್ಕೆ ಪ್ರಾಗೈತಿಹಾಸಿಕ ಕುರುಹುಗಳಾದ ಜಿಲ್ಲೆಯಲ್ಲಿ ದೊರೆತ

ಅನೇಕ ಶಾಸನಗಳು ಮತ್ತು ದೇವಾಲಯಗಳು ಇದಕ್ಕೆ ಸಾಕ್ಷಿಯಾಗಿವೆ. ಜಿಲ್ಲೆಯಲ್ಲಿ ಬಾದಾಮಿ ಚಾಲುಕ್ಯರ, ರಾಷ್ಟ್ರಕೂಟರ, ಕಲ್ಯಾಣ ಚಾಲುಕ್ಯರ, ಹೊಯ್ಸಳರ, ವಿಜಯನಗರ ಕಾಲದ ದೇವಾಲಯಗಳಿವೆ. ಅಲ್ಲದೆ ಕೆಲವು ಬಸದಿಗಳು, ಮಠಗಳು, ಮಸೀದಿಗಳೂ ಸಹ ಜಿಲ್ಲೆಯಲ್ಲಿವೆ.

ಎಂ.ಬಿ. ನೇಗಿನಹಾಳ ಅವರು ಜೆ.ಎಂ. ನಾಗಯ್ಯ ಎಂಬುವರ 'ಕಲಕೇರಿ' ಎಂಬ ಕೃತಿಗೆ ಮುನ್ನುಡಿ ಬರೆಯುವ ಸಂದರ್ಭದಲ್ಲಿ ಹಾವೇರಿಯ ಸಾಂಸ್ಕೃತಿಕ ಚರಿತ್ರೆಯ ಬಗೆಗೆ ಹೇಳಿದ ಪ್ರಶಂಸನೀಯ ಮಾತುಗಳು ಈ ರೀತಿಯಾಗಿವೆ. '.... ಹಾವೇರಿ, ಬ್ಯಾಡಗಿ, ಹಿರೇಕೆರೂರು ತಾಲ್ಲೂಕುಗಳು ಜಿಲ್ಲೆಯ ಸಾಂಸ್ಕೃತಿಕ ಚರಿತ್ರೆ ಬರೆಯುವವರಿಗೆ ಪ್ರಾಚೀನ ದಾಖಲೆಗಳ ಖನಿಯಾಗಿವೆ. ಅಲ್ಲಿನ ಪ್ರತಿ ಹಳ್ಳಿಯೂ ಅಪೂರ್ವವಾದ ಶಾಸನಗಳು, ದೇವಾಲಯಗಳು, ಬಗೆಬಗೆಯ ವಾಸ್ತು ರಚನೆಗಳು ಮೊದಲಾದ ಐತಿಹಾಸಿಕ ಮಹತ್ವದ ದಾಖಲೆಗಳನ್ನು ಗರ್ಭೀಕರಿಸಿಕೊಂಡಿದೆ. ಹಳ್ಳಿ ಹಳ್ಳಿಗೂ ಹೇರಳವಾಗಿರುವ ಅಪಾರವಾದ ಚಾರಿತ್ರಿಕ ಮಾಹಿತಿ ದೊರೆಯುತ್ತದೆ' ಎಂದಿದ್ದಾರೆ. ಈ ಮಾತುಗಳು ಜಿಲ್ಲೆಯ ಸಾಂಸ್ಕೃತಿಕ ಚರಿತ್ರೆಗೆ ಹಿಡಿದ ಕನ್ನಡಿಯಾಗಿವೆ.

ಹಾವೇರಿ ಜಿಲ್ಲೆಯಲ್ಲಿ ಶೇಕಡಾ ಎಪ್ಪತ್ತರಷ್ಟು ಗ್ರಾಮಗಳಲ್ಲಿ ಪ್ರಾಚೀನ ದೇವಾಲಯಗಳು ಕಂಡುಬಂದಿವೆ. ಬಾದಾಮಿ ಚಾಲುಕ್ಯರ ಕಾಲದ ದೇವಾಲಯಗಳು ಜಿಲ್ಲೆಯಲ್ಲಿ ಉಳಿದು ಬಂದಿಲ್ಲವಾದರೂ ಬಾದಾಮಿ ಚಾಲುಕ್ಯರ ದೇವಾಲಯಗಳು ನಿರ್ಮಾಣಗೊಂಡಿದ್ದವು ಎಂಬ ಬಗೆಗೆ ಶಾಸನಗಳಲ್ಲಿ ಆಧಾರಗಳು ದೊರೆಯುತ್ತವೆ. ಶಿಗ್ಗಾಂವ ತಾಲ್ಲೂಕಿನ ಬನ್ನಿಕೊಪ್ಪ ಎಂಬ ಗ್ರಾಮದಲ್ಲಿರುವ ಪಂಚಪಾಂಡವರ ಗುಡಿಯ ಮುಂದೆ ಬಾದಾಮಿ ಚಾಲುಕ್ಯರ ಕಾಲದ ಶಾಸನವಿದೆ. ಜಿಲ್ಲೆಯುದ್ದಕ್ಕೂ ಕೆಲವು ರಾಷ್ಟ್ರಕೂಟರ ಶಾಸನಗಳು ಮತ್ತು ಶಿಲ್ಪಾವಶೇಷಗಳು ಕಂಡುಬರುತ್ತವೆ. ಆದರೆ ರಾಷ್ಟ್ರಕೂಟ ದೇವಾಲಯಗಳು ಕೆಲವೇ ಗ್ರಾಮಗಳಲ್ಲಿ ಕಂಡುಬಂದಿವೆ. ಅವುಗಳೆಂದರೆ ಹಿರೇಕೆರೂರು ತಾಲ್ಲೂಕಿನ ಖಂಡೇಬಾಗೂರು, ಮೇದೂರು, ಅರಳಿಕಟ್ಟಿ, ಬೈರವನಪಾದ ಮತ್ತು ಸಿರುಗುಂಬಗಳಲ್ಲಿ, ಶಿಗ್ಗಾಂವ ತಾಲ್ಲೂಕಿನ ಮೊಟಳ್ಳಿಯಲ್ಲಿ, ರಾಣೆಬೆನ್ನೂರು ತಾಲ್ಲೂಕಿನ ಹಿರೇಮಾಗನೂರಿನಲ್ಲಿ, ಹಾವೇರಿ ತಾಲ್ಲೂಕಿನ ಹೊಮ್ಮರಡಿ ಗ್ರಾಮದಲ್ಲಿ ರಾಷ್ಟ್ರಕೂಟರ ಕಾಲದ ಕೆಲವು ದೇವಾಲಯಗಳು ಕಂಡುಬಂದಿವೆ. ಆದರೆ ಬಹುಪಾಲು ದೇವಾಲಯಗಳು ಅವನತಿ ಮತ್ತು ಜೀರ್ಣೋದ್ಧಾರದ ಕ್ರಿಯೆಗೆ ಒಳಪಟ್ಟಿದ್ದರಿಂದ ತಮ್ಮ ಮೂಲ ಸ್ವರೂಪ ಕಳೆದುಕೊಂಡಿವೆ.

ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರ ದೇವಾಲಯಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತವೆ. ಬಂಕಾಪುರದ ನಗರೇಶ್ವರ ದೇವಾಲಯ, ಹಾನಗಲ್ಲಿನ ತಾರಕೇಶ್ವರ ದೇವಾಲಯ, ಚೌಡದಾನಪುರದ ಮುಕ್ತೇಶ್ವರ ದೇವಾಲಯ, ಹಾವೇರಿಯ ಸಿದ್ದೇಶ್ವರ ದೇವಾಲಯಗಳು ಕಲ್ಯಾಣ ಚಾಲುಕ್ಯರ ದೇವಾಲಯಗಳಾಗಿವೆ. ಹೊಯ್ಸಳರು ವಾಸ್ತು ಮತ್ತು ಶಿಲ್ಪ ಕ್ಷೇತ್ರಕ್ಕೆ ತಮ್ಮದೇ ಆದ ಮಹತ್ವದ ಕೊಡುಗೆ ನೀಡಿದ್ದಾರೆ. ಕಲ್ಯಾಣ ಚಾಲುಕ್ಯರು ಮತ್ತು ಹೊಯ್ಸಳರ ವಾಸ್ತು ಶೈಲಿಗಳಲ್ಲಿ ಹೋಲಿಕೆಗಳಿರುವುದನ್ನು ಕಾಣುತ್ತೇವೆ. ಹಿರೇಕೆರೂರು ತಾಲ್ಲೂಕಿನ ನಾಗವಂದದ ಸಿದ್ದೇಶ್ವರ ದೇವಾಲಯ, ರಟ್ಟಿಹಳ್ಳಿಯ ಕದಂಬೇಶ್ವರ ದೇವಾಲಯ, ರಾಣೆಬೆನ್ನೂರು ತಾಲ್ಲೂಕಿನ ಅಂತರಳ್ಳಿಯ ದೇವಾಲಯಗಳು ಹೊಯ್ಸಳರ ರಚನೆಗಳಾಗಿದ್ದರೂ ಅವು ಕಲ್ಯಾಣ ಚಾಲುಕ್ಯರ ದೇವಾಲಯಗಳ ಶೈಲಿಯಲ್ಲಿರುವುದು ಕಂಡುಬರುತ್ತದೆ.

ವಿಜಯನಗರದ ಕಾಲದ ದೇವಾಲಯಗಳು ಹಾವೇರಿ ಪರಿಸರದಲ್ಲಿ ಕಂಡುಬರುವುದು ತೀರಾ ವಿರಳವಾದರೂ ಕೆಲವು ಪ್ರಾಚೀನ ದೇವಾಲಯಗಳು ಜೀರ್ಣೋದ್ಧಾರಗೊಂಡ ಸ್ಥಿತಿಯಲ್ಲಿವೆ. ಉದಾಹರಣೆಗೆ ಹಾನಗಲ್ಲು ತಾಲ್ಲೂಕಿನ ಹೊಂಬಳಿಯ ಗಣೇಶ ಶಿಲ್ಪವು ಹಂಪೆಯ ಬೃಹತ್ ಗಣೇಶ ಶಿಲ್ಪವನ್ನು ಹೋಲುತ್ತದೆ. ಅಲ್ಲದೆ ಶಿಗ್ಗಾಂವ ತಾಲ್ಲೂಕಿನ ಅತ್ತಿಗೇರಿಯಲ್ಲಿ ವಿಜಯನಗರೋತ್ತರ ಕಾಲದ ಆಂಜನೇಯ ದೇವಾಲಯವಿದೆ. ಈ ದೇವಾಲಯಗಳಿಂದ ಆದಿಮ ಸಮಾಜದಲ್ಲಿ ಹುಟ್ಟಿಕೊಂಡಿದ್ದ ದೇವರು-ದೈವಗಳ ಬಗೆಗಿನ ನಂಬಿಕೆಗಳು ನಿರಂತರವಾಗಿ ಮನುಷ್ಯ ಸಮಾಜದಲ್ಲಿ ಉಳಿದುಕೊಂಡು ಬಂದಿರುವುದು ಸ್ಪಷ್ಟವಾಗುತ್ತದೆ.

ಹೊಸದಾಗಿ ನಿರ್ಮಾಣಗೊಂಡ ಹಾವೇರಿ ಜಿಲ್ಲೆಯರುವ ಈ ಏಳು ತಾಲ್ಲೂಕುಗಳು ತಮ್ಮದೇಯಾದ ವೈಶಿಷ್ಟ್ಯತೆಯನ್ನು ಹೊಂದಿದ್ದು, ಅವುಗಳ ಸಂಕ್ಷಿಪ್ತ ಮಾಹಿತಿಯನ್ನು ಈ ಕೆಳಗೆ ಕೊಡಲಾಗಿದೆ.

## ಬ್ಯಾಡಗಿ ತಾಲ್ಲೂಕು

ಬ್ಯಾಡಗಿ ನಗರವು ಧಾರವಾಡದಿಂದ ೧೧೨ ಕಿ.ಮೀ. ದೂರದಲ್ಲಿ ಹಾಗೂ ಬೆಂಗಳೂರಿನಿಂದ ೩೨೩ ಕಿ.ಮೀ. ದೂರದಲ್ಲಿದೆ. ಇಲ್ಲಿನ ಪುರಸಭೆಯನ್ನು ೧೮೭೯ರಲ್ಲಿ ಸ್ಥಾಪಿಸಲಾಗಿದೆ. ಈ ಊರಿನಲ್ಲಿ ನಾಲ್ಕು ಶಿಲಾಶಾಸನಗಳಿದ್ದು, ಅವುಗಳಲ್ಲಿ ಅತ್ಯಂತ ಪ್ರಾಚೀನವಾದ ಕ್ರಿ.ಶ. ೯೦೨ನೇಯ ವರ್ಷದ ಶಾಸನವು ರಾಷ್ಟ್ರಕೂಟ ದೊರೆ ಎರಡನೇಯ ಕೃಷ್ಣನ ಆಳ್ವಿಕೆಗೆ ಸಂಬಂಧಿಸಿದ್ದು. ಎರಡು ಶಾಸನಗಳು ಚಾಲುಕ್ಯ ಆರನೇಯ ವಿಕ್ರಮಾದಿತ್ಯ ಹಾಗೂ ಸೇವಣ ಸಿಂಘಣನ ಕಾಲಕ್ಕೆ ಸೇರಿದವುಗಳಾಗಿವೆ. ಇತ್ತೀಚಿನ ಶಾಸನವೊಂದು ಗೌಡಿಕೆಗೆ ಸಂಬಂಧಿಸಿದ ಎರಡು ಬಣಗಳ ವಿವಾದದ ಕುರಿತು ನೆರೆಯ ಹಳ್ಳಿಗಳ ಪ್ರತಿನಿಧಿಗಳನ್ನು ಒಳಗೊಂಡ ಸಭೆಯು ಇತ್ತ ನಿರ್ಣಯವನ್ನು ವರ್ಣಿಸುತ್ತದೆ. ಸಿದ್ದೇಶ್ವರ, ಕಲ್ಲೇಶ್ವರ, ವೀರಭದ್ರ, ಬಸವಣ್ಣ, ಗ್ರಾಮದೇವತೆ ಮತ್ತು ದುರ್ಗಾ ದೇವಿಯ ಗುಡಿಗಳಿದ್ದು, ಇವು ನಗರದ ಮಹತ್ವದ ಪ್ರಾಚೀನ ದೇವಾಲಯಗಳಾಗಿವೆ. ಮೆಣಸಿನಕಾಯಿ ವ್ಯಾಪರಕ್ಕೆ ಬ್ಯಾಡಗಿಯು ಉತ್ತರ ಕರ್ನಾಟಕದಲ್ಲೆಲ್ಲಾ ಪ್ರಸಿದ್ಧವಾಗಿದೆ. ಬ್ಯಾಡಗಿಯಿಂದ ಪಶ್ಚಿಮಕ್ಕೆ ೧೫ ಕಿ.ಮೀ. ದೂರದಲ್ಲಿ ಕಾಗಿನೆಲೆ ಎಂಬ ಇನ್ನೊಂದು ಐತಿಹಾಸಿಕ ಸ್ಥಳವಿದೆ. ಈ ಊರಿನಲ್ಲಿ ಪ್ರಾಚೀನ ಕಾಲದ ಆದಿಕೇಶವ, ಕಾಳಹಸ್ತೀಶ್ವರ, ಲಕ್ಷ್ಮೀನರಸಿಂಹ, ಸಂಗಮೇಶ್ವರ, ಸೋಮೇಶ್ವರ ಮತ್ತು ವೀರಭದ್ರ ದೇವಸ್ಥಾನಗಳಿವೆ. ಈ ಎಲ್ಲ ದೇವಸ್ಥಾನಗಳಲ್ಲಿ ಒಟ್ಟಿಗೆ ೧೨ ಶಿಲಾಶಾಸನಗಳಿದ್ದು, ಅವುಗಳಲ್ಲಿ ಬಹುಸಂಖ್ಯೆ ಶಾಸನಗಳು ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಸಂಬಂಧಿಸಿದವುಗಳಾಗಿರುವುದು ತಿಳಿದುಬಂದಿದೆ. ಇದರಲ್ಲಿ ಕ್ರಿ.ಶ. ೧೨೮೨ ಇಸ್ವಿಯ ಶಾಸನವು ಸೇವಣ ರಾಮಚಂದ್ರನ ಕಾಲದ್ದಾಗಿದೆ. ಇಲ್ಲಿನ ಮಂದಿರಗಳನ್ನು ಸ್ಥಳೀಯ ಅಧಿಕಾರಿಗಳಾಗಿದ್ದಿರಬಹುದಾದ ಕೊಂಡಪ್ಪ ಮತ್ತು ವೆಂಕಪ್ಪ ಎಂಬ ಇಬ್ಬರು ವ್ಯಕ್ತಿಗಳು ಕಟ್ಟಿಸಿದುದಾಗಿ ಹೇಳುತ್ತಾರೆ. ೧೬ನೆಯ ಶತಮಾನದಲ್ಲಿ ಆಗಿಹೋದ ಪ್ರಸಿದ್ಧ ಹರಿದಾಸ ಮತ್ತು ಕವಿಯಾಗಿದ್ದ ಕನಕದಾಸರ ಕೀರ್ತನೆಗಳಲ್ಲಿ `ಕಾಗಿನೆಲೆ ಆದಿಕೇಶವ' ಎಂಬ ಅಂಕಿತವಿದೆ.

## ಹಾನಗಲ್ ತಾಲ್ಲೂಕು

ಹಾನಗಲ್ ಬೆಂಗಳೂರಿನ ವಾಯುವ್ಯಕ್ಕೆ ೩೬೮ ಕಿ.ಮೀ. ಧಾರವಾಡದ ದಕ್ಷಿಣಕ್ಕೆ ೯೦ ಕಿ.ಮೀ. ದೂರದಲ್ಲಿದೆ. ಇಲ್ಲಿ ೧೯೭೩ರಲ್ಲಿ ಪುರಸಭೆಯನ್ನು ರಚಿಸಲಾಯಿತು. ಪಾಂಡವರು ತಮ್ಮ ವನವಾಸದಲ್ಲಿ ಇಲ್ಲಿ ತಂಗಿದ್ದರೆಂಬ ಸ್ಥಳೀಯ ಐತಿಹ್ಯವು ದೊರೆಯುತ್ತದೆ. ಜನ ಅದನ್ನು ಸಮರ್ಥಿಸಲು ಕೆಲವು ಆಧಾರಗಳನ್ನು ತೋರಿಸುತ್ತಾರೆ. ಹಿಂದಿನ ದಾಖಲೆಗಳಲ್ಲಿ ಈ ಊರನ್ನು ಮೊದಲು ಪಂಕ್ತಿಪುರ, ವಿರಾಟಪುರ, ವಿರಾಟನಕೋಟೆ, ವಿರಾಟನಗರ, ಪಾನುಂಗಲ್, ಹಾನುಂಗಲ್ ಎಂದು ಕರೆದುಕೊಂಡು ಬರಲಾಗಿದೆ. ಇಲ್ಲಿ ೨೦ಕ್ಕೂ ಹೆಚ್ಚು ಶಾಸನಗಳಿದ್ದು ಕಲ್ಯಾಣಿ ಚಾಳುಕ್ಯ ಕಳಚೂರಿನ ಮತ್ತು ಹಾನಗಲ್ ಕದಂಬರಿಗೆ ಸೇರಿದವುಗಳಾಗಿವೆ. ಹಿಂದೆ ಇದು ಕಲ್ಯಾಣಿ ಚಾಲುಕ್ಯರ ಸಾಮಂತರಾದ ಕದಂಬರ ರಾಜಧಾನಿಯಾಗಿದ್ದಿತು. ಹೊಯ್ಸಳ ವಿಷ್ಣುವರ್ಧನನು ಉತ್ತರ ದಂಡಯಾತ್ರೆಯನ್ನು ಕೈಗೊಂಡಾಗ ಅವನು ಸ್ವಾಧೀನಪಡಿಸಿಕೊಂಡ ಪ್ರಮುಖ ಕೇಂದ್ರಗಳಲ್ಲಿ ಇದೂ ಒಂದು. ಇಲ್ಲಿನ ಪ್ರಮುಖ ಐತಿಹಾಸಿಕ ಸ್ಮಾರಕಗಳೆಂದರೆ ತಾರಕೇಶ್ವರ, ವೀರಭದ್ರ, ಬಿಲ್ಲೇಶ್ವರ, ರಾಮಲಿಂಗ, ನಾರಾಯಣ ದೇವಾಲಯಗಳೂ, ಶಿಥಿಲವಾದ ಕೋಟೆ ಮುಂತಾದವುಗಳು ಮತ್ತು ಆನೆಕೆರೆ ಎಂಬ ಕೆರೆ. ಚಾಳುಕ್ಯ ಶೈಲಿಯಲ್ಲಿ ಕಣಶಿಲೆಯಲ್ಲಿ ನಿರ್ಮಿತವಾದ ತಾರಕೇಶ್ವರ ದೇವಾಲಯವು ದೊಡ್ಡ ಕಟ್ಟಡವಾಗಿದ್ದು ಇಂದಿಗೂ ಇದನ್ನು ರಕ್ಷಿಸಿಕೊಂಡು ಬರಲಾಗಿದೆ. ಈ ದೇವಾಲಯಕ್ಕೆ ಸಮೀಪದಲ್ಲಿಯೇ ಬಹು ಗಮನಾರ್ಹವಾದ ಚಿಕ್ಕ ಗಣಪತಿ ಮಂದಿರವಿದೆ. ಪಾಳುಕೋಟೆಯಲ್ಲಿರುವ ವೀರಭದ್ರ ದೇವಾಲಯದಲ್ಲಿ ಈಗ ಶಿವನನ್ನು ಆರಾಧಿಸಲಾಗುತ್ತಿದೆ. ಕುಮಾರಸ್ವಾಮಿಮಠ ಇಲ್ಲಿನ ಪ್ರಮುಖ ವೀರಶೈವ ಮಠ. ಈ ಕುಮಾರಸ್ವಾಮಿಗಳು ಶಿವಯೋಗ ಮಂದಿರದ ಸ್ಥಾಪಕರಲ್ಲೊಬ್ಬರು. ಶೃಂಗೇರಿಮಠ, ವಿಠ್ಠಲ ಮಂದಿರವಲ್ಲದೆ ಹಾನಗಲ್ಲಿನಲ್ಲಿ ಎಂಟು ಮಸೀದಿಗಳು, ಸಯ್ಯದ್ ಸಾದತ್‌ವಲಿ ಮತ್ತು ಪೀರ್‌ಸಯ್ಯದ್ ಇವರ ಎರಡು ಮುಖ್ಯ ದರ್ಗಾಗಳು ಇವೆ. ಈ ಊರು ಭತ್ತದ ಬೆಳೆಗೆ ಹೆಸರುವಾಸಿಯಾಗಿದೆ. ಈ ತಾಲ್ಲೂಕಿನ ಕಾಡುಗಳಲ್ಲಿ ಗಂಧದ ಮರ ಹೆಚ್ಚಾಗಿ ಬೆಳೆಯುತ್ತದೆ.

## ಹಾವೇರಿ ತಾಲ್ಲೂಕು

ಹಾವೇರಿಯು ಬೆಂಗಳೂರಿನಿಂದ ವಾಯುವ್ಯಕ್ಕೆ ೩೩೯ ಕಿ.ಮೀ. ಮತ್ತು ಧಾರವಾಡದಿಂದ ೧೧೫ ಕಿ.ಮೀ. ದೂರದಲ್ಲಿದೆ. ೧೯೦೫ರಲ್ಲಿ ಕರ್ಜಿಗಿಗೆ ಬದಲಾಗಿ ಇದನ್ನು ಉಪವಿಭಾಗ ಮತ್ತು ತಾಲ್ಲೂಕನ್ನಾಗಿ ಮಾಡಲಾಯಿತು. ಇಲ್ಲಿ ೧೮೭೯ರಲ್ಲಿ ಮೊಟ್ಟಮೊದಲನೆಯ ಬಾರಿಗೆ ಪುರಸಭೆ ಸ್ಥಾಪಿತವಾಯಿತು. ಕೃತಯುಗದಲ್ಲಿ ಇದನ್ನು ನಳನು ಸ್ಥಾಪಿಸಿದನೆಂದೂ ಆದ್ದರಿಂದ ಇದಕ್ಕೆ ನಳಪುರಿ ಎಂಬ ಹೆಸರಿದ್ದಿತೆಂದೂ ಒಂದು ದಂತಕಥೆಯಿದೆ. ಈ ಊರಿಗೆ ಮೊದಲು ಪಾವರಿ, ಹಾಹರಿ, ಕಡೆಯದಾಗಿ ಹಾವೇರಿ ಎಂದು ಕರೆಯಲಾಯಿತೆಂದು ತಿಳಿಯಲಾಗಿದೆ. ಈ ನಗರವು ಹತ್ತನೆಯ ಶತಮಾನಕ್ಕೂ ಮೊದಲೇ ಅಸ್ತಿತ್ವದಲ್ಲಿದ್ದಿತು. ಇಲ್ಲಿ ೩೨ ಶಾಸನಗಳು ದೊರಕಿದ್ದು ಅವು ಸಿಂಘಣ, ಕಿನ್ನರ, ರಾಮಚಂದ್ರ, ಮಹದೇವ ಮೊದಲಾದ ಸೇವಣ ದೊರೆಗಳ ಹೆಸರನ್ನು ಪ್ರಸ್ತಾಪಿಸುತ್ತವೆ. ಕಲ್ಯಾಣಿಯ ಚಾಳುಕ್ಯರು ಮತ್ತು ಕಳಚೂರಿಗಳ ಪ್ರಸ್ತಾಪವೂ ಇಲ್ಲಿನ ಶಾಸನಗಳಲ್ಲಿ ಬರುತ್ತದೆ. ಇಲ್ಲಿನ ಸಿದ್ದೇಶ್ವರ ದೇವಾಲಯವು ಐತಿಹಾಸಿಕ ದೃಷ್ಟಿಯಿಂದ

ಪ್ರಮುಖವಾಗಿದೆ. ಈ ಮಂದಿರದ ಅಧಿದೇವತೆಯನ್ನು ಸ್ವಯಂಭೂ ಸಿದ್ಧನಾಥನೆಂದು ಕರೆದು, ಅವನಿಗೆ ನೀಡಿದ ದಾನದತ್ತಿ ವಿವರಗಳನ್ನು ದೇವಾಲಯದ ಕಂಬಗಳ, ಶಿಲೆಗಳ ಹಾಗೂ ತೊಲೆಗಳ ಮೇಲೆ ಕೆತ್ತಿರುವ ಶಾಸನಗಳು ತಿಳಿಸುತ್ತವೆ. ಸಿದ್ದೇಶ್ವರ ದೇವಾಲಯದಲ್ಲಿ ಎಡಗೈಯಲ್ಲಿ ಲಿಂಗವನ್ನು ಹಿಡಿದಿರುವ ಆರು ಬಾಹುಗಳುಳ್ಳ ವಿಷ್ಣುವಿನ ಮೂರ್ತಿ ಶಿಲ್ಪವಿದೆ.

**ಹಿರೇಕೆರೂರು ತಾಲ್ಲೂಕು**

ಹಿರೇಕೆರೂರು ಬೆಂಗಳೂರು ವಾಯುವ್ಯಕ್ಕೆ ೩೮೨ ಕಿ.ಮೀ. ಧಾರವಾಡದ ದಕ್ಷಿಣಕ್ಕೆ ೧೫೫ ಕಿ.ಮೀ. ದೂರದಲ್ಲಿದೆ. ಹಿರೇಕೆರೂರು ಎಂಬ ಹೆಸರಿನ ತಾಲ್ಲೂಕು ರಚನೆಯಾಗುವ ಮೊದಲು ಇದು ಕೂಡಾ ತಾಲ್ಲೂಕಿನ ಮುಖ್ಯ ಸ್ಥಳವಾಗಿದ್ದಿತು. ಇಲ್ಲಿ ೧೯೭೩ರ ಏಪ್ರಿಲ್‌ನಲ್ಲಿ ಪುರಸಭೆಯು ಅಸ್ತಿತ್ವಕ್ಕೆ ಬಂದಿತು. ಪಿರಿಯ ಕೆರೆಯೂರು ಎಂಬ ಪದದಿಂದ ಹಿರೇಕೆರೂರು ಎಂಬ ಹೆಸರು ಬಂದಿದೆ. ಈ ಕೆರೆಯನ್ನು ಜನಮೇಜಯನ ಕೆರೆಯೆಂದೂ ಕರೆಯುತ್ತಾರೆ. ಇಲ್ಲಿ ಒಂಭತ್ತು ಶಿಲಾಶಾಸನಗಳು ದೊರಕಿವೆ. ಅವುಗಳಲ್ಲಿ ಕ್ರಿ.ಶ. ೧೦೬೦ರ ಒಂದು ಶಾಸನವು ಕಲ್ಯಾಣಿ ಚಾಳುಕ್ಯ ದೊರೆ ಒಂದನೇಯ ಸೋಮೇಶ್ವರನ ದಳಪತಿ ಗುಂಡಮಯ್ಯನ ಸಾಹಸಗಳನ್ನು ವಿವರಿಸುತ್ತದೆ. ಮಣ್ಣಿನಲ್ಲಿ ಹೂತುಹೋಗಿರುವ ಜನಾರ್ಧನ ತೋಟದ ವೀರಣ್ಣ (ವೀರಭದ್ರ), ಹನುಮಾನ್ ಮತ್ತು ಕೆರೆಯ ದಂಡೆಯ ಮೇಲಿರುವ ದುರ್ಗಾದೇವಿ ದೇವಾಲಯಗಳು ಪ್ರಮುಖವಾಗಿವೆ. ಇಲ್ಲಿ ಎರಡು ಮಸೀದಿಗಳೂ, ಎರಡು ದರ್ಗಾಗಳೂ ಇವೆ. ಈ ತಾಲ್ಲೂಕಿನಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಕರ ನಿರಾಕರಣ ಚಳುವಳಿಯನ್ನು ಏರ್ಪಡಿಸಲಾಗಿದ್ದಿತು (೧೯೩೧). ಹಿರೇಕೆರೂರಿಗೆ ಮೂರು ಕಿ.ಮೀ. ದೂರದಲ್ಲಿರುವ ಬಾಳಂಬೀಡು ಎಂಬ ಸಣ್ಣ ಹಳ್ಳಿಯಲ್ಲಿ ಕಲ್ಯಾಣದ ಚಾಳುಕ್ಯರ ಕಾಲದ ವಿಷಪರಿಹಾರೇಶ್ವರ ಎಂಬ ಪ್ರಸಿದ್ಧ ದೇವಾಲಯ ಮತ್ತು ಬಸವಣ್ಣನ ದೇವಾಲಯಗಳಿವೆ. ವಿಷಪರಿಹಾರೇಶ್ವರ ದೇವಾಲಯದ ಶಿವಲಿಂಗವು ಹಾವು ಮತ್ತು ವಿಷಪ್ರಾಣಿಗಳ ಕಡಿತಕ್ಕೊಳಗಾದವರನ್ನು ಗುಣಪಡಿಸುವುದೆಂದು ಇಲ್ಲಿನ ಜನರು ನಂಬುತ್ತಾರೆ.

**ರಾಣೆಬೆನ್ನೂರು ತಾಲ್ಲೂಕು**

ರಾಣೆಬೆನ್ನೂರು ಬೆಂಗಳೂರಿನಿಂದ ವಾಯುವ್ಯದಲ್ಲಿ ೨೯೪ ಕಿ.ಮೀ. ದೂರದಲ್ಲಿದ್ದು, ಧಾರವಾಡದಿಂದ ೧೨೫ ಕಿ.ಮೀ. ಆಗ್ನೇಯದಲ್ಲಿದೆ. ಮರಾಠಾ ಸೈನಿಕ ರಾಣೆ ಎನ್ನುವವನಿಂದ ಈ ಊರಿಗೆ ಈ ಹೆಸರು ಬಂದಿತು. ೧೮೫೫ರಲ್ಲಿ ಸ್ಥಾಪಿತವಾದ ಪುರಸಭೆಯು ಈ ಊರಿನ ನಾಗರಿಕ ಆಡಳಿತವನ್ನು ನೋಡಿಕೊಳ್ಳುತ್ತದೆ. ಇಲ್ಲಿ ಮೂರು ಶಾಸನಗಳು ದೊರೆತಿವೆ. ಶಾಸನಗಳನ್ನು ಹೊಂದಿರುವ ಸಿದ್ದೇಶ್ವರ, ದೇವಾಲಯವು ಪ್ರಾಚೀನವಾದುದಾಗಿದೆ. ಇಲ್ಲಿನ ಗಮನಾರ್ಹವಾದ ಇತ್ತೀಚಿನ ದೇವಾಲಯಗಳೆಂದರೆ ಬಸವಣ್ಣ, ಚೌಡೇಶ್ವರಿ, ಬನಶಂಕರಿ ಮತ್ತು ಬೀರೇಶ್ವರ ದೇವಾಲಯಗಳು. ಇಲ್ಲಿ ಒಂಬತ್ತು ಮಸೀದಿಗಳು ಮತ್ತು ದರ್ಗಾಗಳಿವೆ. ೧೭೮೫ರಲ್ಲಿ ಅಜ್ಮೀರ್‌ನಿಂದ ಇಲ್ಲಿಗೆ ಬಂದ ಸಂತ ಹಜ್ರತ್ ಜಮಾಲ್ ಷಾ ವಲಿಯ ಜ್ಞಾಪಕಾರ್ಥವಾಗಿ ಕಟ್ಟಿದ ದರ್ಗಾ ಇಲ್ಲಿ ಕಾಣಸಿಗುತ್ತದೆ.

## ಸವಣೂರು ತಾಲ್ಲೂಕು

ಇದು ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು ೪೧೫ ಕಿ.ಮೀ. ಮತ್ತು ಧಾರವಾಡದಿಂದ ಆಗ್ನೇಯಕ್ಕೆ ಸುಮಾರು ೮೩ ಕಿ.ಮೀ ದೂರದಲ್ಲಿದೆ. ನೆರೆಹೊರೆಯ ಹಾವೇರಿ ಮತ್ತು ಶಿಗ್ಗಾಂವ ತಾಲ್ಲೂಕುಗಳ ಪುನರ್‌ರಚನೆಗೊಂಡಾಗ ೧೯೬೮ರ ಮೇ ತಿಂಗಳಲ್ಲಿ ಸವಣೂರು ತಾಲ್ಲೂಕು ಅಸ್ತಿತ್ವಕ್ಕೆ ಬಂದಿತು. ಇಲ್ಲಿಯ ಪ್ರಥಮ ನಾಗರಿಕ ಸಮಿತಿಯು ೧೮೬೩ರಲ್ಲಿ ಜಾರಿಗೆ ಬಂದಿದೆ. ಈಗ ಇಲ್ಲಿ ಪುರಸಭೆ ಇದೆ. ಈ ಊರಿಗೆ 'ಶ್ರಾವಣಮಾಸ' ಎಂಬುದರಿಂದ 'ಸವಣೂರು' ಎಂಬ ಹೆಸರು ಬಂದಿತೆಂದು ಹೇಳುವರು. ಶ್ರಾವಣಮಾಸದಲ್ಲಿ ನವಾಬರ ಪೂರ್ವಿಕರಲ್ಲೊಬ್ಬನಾದ 'ಅಬ್ದುಲ್‌ರಾಮಾಫ್‌ಖಾನ್' ತನ್ನ ರಾಜಧಾನಿಯನ್ನು ಬಂಕಾಪುರದಿಂದ ಈಗಿನ ಪಟ್ಟಣವಿರುವ ಅಂದು 'ಜನಮಾರನಹಳ್ಳಿ' ಎಂಬ ಹೆಸರಿದ್ದ ಹೊಸ ಸ್ಥಳಕ್ಕೆ ಸ್ಥಳಾಂತರಿಸಿದ್ದೇ ಇದಕ್ಕೆ ಕಾರಣವೆನ್ನಲಾಗಿದೆ. ಇಲ್ಲಿ ಒಟ್ಟು ೨೦ ಶಾಸನಗಳು ದೊರಕಿದ್ದು, ಇಲ್ಲಿ ಪ್ರಾಚೀನ ಕಾಲದಲ್ಲಿ ಅಂದರೆ ಸುಮಾರು ಕ್ರಿ.ಶ. ೧೦೮೭ರಲ್ಲಿ ೨೦೦ ಮಹಾಜನರಿದ್ದ ಒಂದು ಅಗ್ರಹಾರವಿದ್ದುದು ತಿಳಿದುಬಂದಿದೆ. ಸವಣೂರು ನವಾಬರು ವಂಶದ ಸ್ಥಾಪಕನೆಂದು ಹೇಳುವ ಅಬ್ದುಲ್ ಕರೀಮ್‌ಖಾನನು ವಿಜಾಪುರದ ಸುಲ್ತಾನರಿಂದ ಶಿವಾಜಿಯು ಯುದ್ಧ ಚಟುವಟಿಕೆಗಳನ್ನು ಹತ್ತಿಕ್ಕಲೆಂದು ಬಂಕಾಪುರದ ಪ್ರಥಮ ಸುಬೇದಾರನಾಗಿ ನೇಮಕಗೊಂಡಿದ್ದನು. ಪ್ರಾರಂಭದಲ್ಲಿ ಸವಣೂರು ಸಂಸ್ಥಾನವು ಬಂಕಾಪುರ ಮತ್ತು ಕರಜಗಿ ತಾಲ್ಲೂಕುಗಳ ೨೫ ಹಳ್ಳಿಗಳನ್ನೊಳಗೊಂಡಿದ್ದು ೭೦ ಚ.ಮೈ. ವಿಸ್ತಾರವನ್ನು ಹೊಂದಿತ್ತು. ಸವಣೂರು ನವಾಬರು ಔರಂಗಜೇಬನ ಪತನದವರೆಗೆ ಮೊಘಲರ ಪರವಾಗಿ ಆಳ್ವಿಕೆ ನಡೆಸಿದರು. ನಂತರ ಅವರು ಕ್ರಮವಾಗಿ ನಿಜಾಮ, ಹೈದಾರ್, ಟಿಪ್ಪು ಮತ್ತು ಮರಾಠರಿಗೆ ನಿಷ್ಠೆಯಿಂದಿರುತ್ತಾ ಆಳ್ವಿಕೆ ನಡೆಸಿದರು. ಸವಣೂರು ನವಾಬರು ೧೮೦೨ರಲ್ಲಿ ಮರಾಠರಿಂದ ಬ್ರಿಟೀಷರ ಅಧೀನಕ್ಕೆ ಒಳಪಟ್ಟರು. ಬ್ರಿಟೀಷರು ೧೮೦೬ರಲ್ಲಿ ಸವಣೂರು ಸಂಸ್ಥಾನಕ್ಕೆ ೨೫ ಹಳ್ಳಿಗಳನ್ನು ಬಿಟ್ಟುಕೊಟ್ಟರಲ್ಲದೆ 'ಖೈರಖಾನ್' ಎಂಬುವನನ್ನು ನವಾಬನೆಂದು ಅಂಗೀಕರಿಸಿದರು. ನವಾಬ ಮನೆತನದವರ ಶಾಸನಗಳು, ಅರಮನೆ ಆವರಣ ಮತ್ತು ಇತರ ಕೆಲವು ಸ್ಮಾರಕಗಳು ಈಗಲೂ ಇಲ್ಲಿರುವುದು ಕಂಡುಬರುತ್ತದೆ.

## ಶಿಗ್ಗಾಂವ ತಾಲ್ಲೂಕು

ಶಿಗ್ಗಾಂವ ಬೆಂಗಳೂರಿನಿಂದ ವಾಯುವ್ಯಕ್ಕೆ ಸುಮಾರು ೩೬೩ ಕಿ.ಮೀ. ಹಾಗೂ ಧಾರವಾಡದಿಂದ ಆಗ್ನೇಯಕ್ಕೆ ಸುಮಾರು ೬೫ ಕಿ.ಮೀ. ದೂರದಲ್ಲಿದೆ ಇಲ್ಲಿ ೧೯೬೩ರಲ್ಲಿ ಪುರಸಭೆಯನ್ನು ರಚಿಸಲಾಯಿತು. ಕ್ರಿ.ಶ. ೮೬೬ರ ಒಂದನೇಯ ಅಮೋಘವರ್ಷನ ಒಂದು ಶಾಸನದಲ್ಲಿ ಈ ಸ್ಥಳವನ್ನು ಸಿಗ್ಗಾಮೆ ಎಂದು ಕರೆಯಲಾಗಿದೆ. ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಸೇವಣ ಮತ್ತು ವಿಜಯನಗರ ರಾಜಮನೆತನಗಳ ೧೬ ಶಾಸನಗಳು ಇಲ್ಲಿ ದೊರಕಿದ್ದು ರಾಷ್ಟ್ರಕೂಟ ಸೇನಾಪತಿ ಬಂಕೆಯರಸ ಮತ್ತು ಸಾಮಂತರಾದ ಕದಂಬ ಹಾಗೂ ಇತರ ಮನೆತನಗಳನ್ನು ಪರಿಚಯಿಸುವ ಶಾಸನಗಳು ಇಲ್ಲಿ ದೊರಕಿವೆ. ಪ್ರಾಚೀನ ಕಲ್ಲೇಶ್ವರ ಮತ್ತು ಜೀರ್ಣೋದ್ಧಾರ ಹೊಂದಿರುವ ಬಸವಣ್ಣ ದೇವಸ್ಥಾನಗಳಲ್ಲದೆ ಮಾರುತಿ, ಅಂಬಾಭವಾನಿ,

ಮಲ್ಲಿಕಾರ್ಜುನ, ವೀರಭದ್ರ ಮುಂತಾದ ದೇವಸ್ಥಾನಗಳು ಇಲ್ಲಿವೆ. ಅಲ್ಲದೆ, ಮೂರು ವೀರಶೈವ ಮಠಗಳು, ಮೂರು ಮಸೀದಿಗಳು ಹಾಗೂ ಒಂದು ದರ್ಗಾ ಸಹ ಇಲ್ಲಿವೆ. ಇಲ್ಲಿಂದ ಆರು ಕಿ.ಮೀ. ದೂರದಲ್ಲಿ ಪಶ್ಚಿಮಕ್ಕೆ ಹಳಿಯಾಳ ರಸ್ತೆಯಲ್ಲಿರುವ ಎಡಲ್‌ಬಾದ್ ಎಂಬ ಸ್ಥಳದಲ್ಲಿ ಗಂಗಿಬಾವಿ ಎಂಬ ಹೆಸರಿನ ಪವಿತ್ರವೆಂದು ಭಾವಿಸಲಾದ ಬಾವಿಯೊಂದಿದ್ದು, ಇಲ್ಲಿ ಸ್ಥಳೀಯ ಜನರು ಪರಮಪೂಜ್ಯವೆಂದು ಆರಾಧಿಸುವ 'ಸ್ವಯಂಭೂಲಿಂಗ'ವಿರುವ ರಾಮೇಶ್ವರ ದೇವಸ್ಥಾನವಿದೆ. ಶಿಶುನಾಳ ಗ್ರಾಮವು ಶಿಗ್ಗಾಂವಿಯಿಂದ ೧೭ ಕಿ.ಮೀ. ಮತ್ತು ಗುಡಗೇರಿ ರೈಲ್ವೆ ನಿಲ್ದಾಣದಿಂದ ಐದು ಕಿ.ಮೀ. ದೂರದಲ್ಲಿದ್ದು, ಶಿಶುನಾಳ ಶರೀಫ್ ಸಾಹೇಬ್ (೧೮೧೪-೧೮೮೯) ಎಂದು ಪ್ರಸಿದ್ಧರಾಗಿರುವ ಓರ್ವ ಸಂತ ಅನುಭಾವಿ ಕವಿಯಿಂದಾಗಿ ಈ ಸ್ಥಳ ಹೆಸರುವಾಸಿಯಾಗಿದೆ. ವೈದಿಕ, ವೀರಶೈವ ಮತ್ತು ಇಸ್ಲಾಂ ಧರ್ಮಶಾಸ್ತ್ರಗಳನ್ನು ಮೈಗೂಡಿಸಿಕೊಂಡಿದ್ದ ಶರೀಫ್ ಸಾಹೇಬರು 'ಕರ್ನಾಟಕದ ಕಬೀರ'ರೆಂದೇ ಹೆಸರಾಗಿದ್ದಾರೆ. ಶರೀಫರ ಮತ್ತು ಅವರ ಗುರುವಾಗಿದ್ದ ಕಳಸದ ಗೋವಿಂದಭಟ್ಟರ ಗದ್ದುಗೆಗಳು ಹಿಂದು-ಮುಸ್ಲಿಂರೆಲ್ಲರಿಗೂ ಪವಿತ್ರ ಪೂಜಾಸ್ಥಳಗಳಾಗಿವೆ. ಕಳಸದಲ್ಲಿಯ ಅಬಂಡೇಶ್ವರ ಮಠವು ಪ್ರಸಿದ್ಧವಾಗಿವೆ.

## ೨.೨ ಜಿಲ್ಲೆಯ ಭೌಗೋಳಿಕ ಹಿನ್ನೆಲೆ

### ಜಿಲ್ಲೆಯ ವಿಸ್ತೀರ್ಣ

ಹಾವೇರಿ ಜಿಲ್ಲೆಯು ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿದ್ದು ಉತ್ತರ ಅಕ್ಷಾಂಶ ೧೪.೨೮ ಮತ್ತು ಉತ್ತರ ಅಕ್ಷಾಂಶ ೧೪.೫೯ ಹಾಗೂ ಪೂರ್ವ ರೇಖಾಂಶ ೭೫.೦೭ ಮತ್ತು ಪೂರ್ವ ರೇಖಾಂಶ ೭೫.೩೮ರ ಮಧ್ಯದಲ್ಲಿದೆ. ಈ ಜಿಲ್ಲೆಯು ಉತ್ತರಕ್ಕೆ ಧಾರವಾಡ ಮತ್ತು ಗದಗ ಜಿಲ್ಲೆಯನ್ನು, ದಕ್ಷಿಣಕ್ಕೆ ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಯನ್ನು, ಪೂರ್ವಕ್ಕೆ ಬಳ್ಳಾರಿ ಜಿಲ್ಲೆಯ ಗಡಿಗಳನ್ನು ಹೊಂದಿರುವುದು. ಮೊದಲು ಧಾರವಾಡ ಜಿಲ್ಲೆಗೆ ಸೇರಿದ್ದ ಹಾವೇರಿಯು ಹೊಸದಾಗಿ ರಚನೆಗೊಂಡ ಜಿಲ್ಲೆಯಾಗಿದ್ದು ಅದು ಧಾರವಾಡ ಜಿಲ್ಲೆಯ ದಕ್ಷಿಣ ಭಾಗದ ಬ್ಯಾಡಗಿ, ಹಾನಗಲ್, ಹಾವೇರಿ, ಹಿರೇಕೆರೂರು, ರಾಣೆಬೆನ್ನೂರು, ಸವಣೂರು ಮತ್ತು ಶಿಗ್ಗಾಂವ ತಾಲ್ಲೂಕುಗಳನ್ನು ಒಳಗೊಂಡಿದೆ. ಜಿಲ್ಲೆಯ ಒಟ್ಟು ೪,೮೪೮ ಚ.ಕಿ.ಮೀ. ವಿಸ್ತೀರ್ಣ ಹೊಂದಿದ್ದು ಅದು ಜಿಲ್ಲೆಯ ಒಟ್ಟು ವಿಸ್ತೀರ್ಣದ ಶೇಕಡ ೨.೫೩ರಷ್ಟು ಇದೆ. ಅದರಲ್ಲಿ ಬ್ಯಾಡಗಿ ತಾಲ್ಲೂಕು ೪೩೬ ಚ.ಕಿ.ಮೀ. ವಿಸ್ತೀರ್ಣವನ್ನು, ಹಾನಗಲ್ ತಾಲ್ಲೂಕು ೭೭೩ ಚ.ಕಿ.ಮೀ. ವಿಸ್ತೀರ್ಣವನ್ನು, ಹಾವೇರಿ ತಾಲ್ಲೂಕು ೭೮೯ ಚ.ಕಿ.ಮೀ. ವಿಸ್ತೀರ್ಣವನ್ನು, ಹಿರೇಕೆರೂರು ತಾಲ್ಲೂಕು ೮೦೬ ಚ.ಕಿ.ಮೀ ವಿಸ್ತೀರ್ಣವನ್ನು, ರಾಣೆಬೆನ್ನೂರು ತಾಲ್ಲೂಕು ೯೦೭ ಚ.ಕಿ.ಮೀ. ವಿಸ್ತೀರ್ಣವನ್ನು, ಸವಣೂರು ತಾಲ್ಲೂಕು ೫೩೯ ಚ.ಕಿ.ಮೀ. ವಿಸ್ತೀರ್ಣವನ್ನು, ಶಿಗ್ಗಾಂವ ತಾಲ್ಲೂಕು ೫೮೮ ಚ.ಕಿ.ಮೀ. ವಿಸ್ತೀರ್ಣವನ್ನು ಹೊಂದಿದೆ. ಬ್ಯಾಡಗಿ ತಾಲ್ಲೂಕು ೬೬ ಗ್ರಾಮಗಳನ್ನು, ಹಾನಗಲ್ ತಾಲ್ಲೂಕು ೧೫೧ ಗ್ರಾಮಗಳನ್ನು, ಹಾವೇರಿ ತಾಲ್ಲೂಕು ೮೯ ಗ್ರಾಮಗಳನ್ನು, ಹಿರೇಕೆರೂರು ೧೨೮ ತಾಲ್ಲೂಕುಗಳನ್ನು, ರಾಣೆಬೆನ್ನೂರು ತಾಲ್ಲೂಕು ೧೦೭ ಗ್ರಾಮಗಳನ್ನು, ಸವಣೂರು ತಾಲ್ಲೂಕು ೬೫ ಗ್ರಾಮಗಳನ್ನು, ಶಿಗ್ಗಾಂವ

ತಾಲ್ಲೂಕು ೯೨ ಗ್ರಾಮಗಳನ್ನು ಹೊಂದಿದೆ. ಜಿಲ್ಲೆಯಲ್ಲಿ ಒಟ್ಟು ಸುಮಾರು ೬೪೮ ಗ್ರಾಮಗಳಿದ್ದು ಅವುಗಳಲ್ಲಿ ೬೯೧ ಗ್ರಾಮಗಳು ಜನವಸತಿಯನ್ನು ಹೊಂದಿದ್ದು, ಉಳಿದ ೭ ಗ್ರಾಮಗಳು ಜನವಸತಿ ರಹಿತವಾದ ಪ್ರದೇಶಗಳಾಗಿವೆ.

೨೦೦೩-೦೪ ರ ವಾರ್ಷಿಕ ಬೆಳೆ ವರದಿ ಪ್ರಕಾರ ಜಿಲ್ಲೆಯು ಒಟ್ಟು ೪೭,೪೫೪ ಹೆಕ್ಟೇರು ಅರಣ್ಯ ಪ್ರದೇಶವನ್ನು ಹೊಂದಿದೆ. ಶಿಗ್ಗಾಂವ, ಹಾನಗಲ್ ಮತ್ತು ಹಿರೇಕೆರೂರು ತಾಲ್ಲೂಕುಗಳಲ್ಲಿ ಹೆಚ್ಚಾಗಿ ಅರಣ್ಯ ಮತ್ತು ಬೆಟ್ಟಗುಡ್ಡಗಳು ಕಂಡುಬರುತ್ತವೆ. ಹಾಗೂ ಈ ಪ್ರದೇಶದಲ್ಲಿ ೩೭,೩೭೦ ಹೆಕ್ಟೇರು ಸಾಗುವಳಿಗೆ ಲಭ್ಯವಿಲ್ಲದ ಭೂಮಿಯಿರುವುದು. ಅದರಲ್ಲಿ ೫,೭೯೩ ಹೆಕ್ಟೇರು ಬಂಜರು ಭೂಮಿಯು ಮತ್ತು ೩೧,೫೭೭ ಹೆಕ್ಟೇರು ವ್ಯವಸಾಯೇತರ ಭೂಮಿಯೂ ಆಗಿದೆ. ಜಿಲ್ಲೆಯಲ್ಲಿ ಕಟ್ಟಡಕ್ಕೆ ಬಳಸಲಾಗುವ ಬಿಳಿ ಉಸುಕು ಮತ್ತು ಕಲ್ಲುಗಳನ್ನು ಹೊರತುಪಡಿಸಿದರೆ ಯಾವುದೇ ಖನಿಜ ನಿಕ್ಷೇಪಗಳು ಕಂಡುಬರುವುದಿಲ್ಲ.

## ೨.೩ ಜಿಲ್ಲೆಯ ಹವಾಮಾನ ಮತ್ತು ಮಳೆಗೆ ಸಂಬಂಧಿಸಿದ ವಿವರ

ಹಾವೇರಿ ಒಂದು ಒಳನಾಡು ಜಿಲ್ಲೆಯಾಗಿದ್ದು, ಮಲೆನಾಡು, ಅರೆಮಲೆನಾಡು ಮತ್ತು ಬಯಲುಸೀಮೆಗಳಿಂದ ಕೂಡಿದೆ. ಜಿಲ್ಲೆಯಲ್ಲಿ ವರದಾ ಮತ್ತು ತುಂಗಭದ್ರಾ ನದಿಗಳು ಹರಿಯುತ್ತವೆ. ಅಲ್ಲದೆ ಕುಮುದ್ವತಿ, ಧರ್ಮಾ ಮತ್ತು ಬೆಣ್ಣೆಹಳ್ಳ ಎಂಬ ಉಪನದಿಗಳು ಕಂಡುಬರುತ್ತವೆ. ಜಿಲ್ಲೆಯ ಹವಾಮಾನ ಸಾಮಾನ್ಯವಾಗಿ ಹಿತಕರ ಮತ್ತು ಆರೋಗ್ಯಕರವಾಗಿದೆ. ಫೆಬ್ರವರಿ ಅಂತ್ಯದಿಂದ ಮೇ ಅಂತ್ಯದವರೆಗೆ ಬೇಸಿಗೆ ಕಾಲ. ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಮಳೆಗಾಲ ಇರುತ್ತದೆ. ಆಗ ವಾತಾವರಣ ತಂಪಾಗಿರುತ್ತದೆ. ಅಕ್ಟೋಬರ್, ನವೆಂಬರ್‌ಗಳಲ್ಲಿ ಈಶಾನ್ಯ ಮಾರುತದಿಂದ ಮಳೆ ಆಗುತ್ತದೆ. ಡಿಸೆಂಬರ್‌ನಿಂದ ಫೆಬ್ರವರಿ ಮಧ್ಯದವರೆಗೆ ಚಳಿಗಾಲವಿರುತ್ತದೆ. ಏಪ್ರಿಲ್, ಮೇ ತಿಂಗಳಲ್ಲಿ ಗರಿಷ್ಠ ಉಷ್ಣತೆ ೪೨° ಸೆ.ವರೆಗೆ ಮತ್ತು ನವೆಂಬರ್ ತಿಂಗಳಲ್ಲಿ ಕನಿಷ್ಠ ೧೬° ಸೆ.ವರೆಗೆ ಉಷ್ಣತೆ ಇರುತ್ತದೆ.

ಜಿಲ್ಲೆಯಲ್ಲಿ ಒಟ್ಟು ೩೫ ಮಳೆ ಮಾಪನ ಕೇಂದ್ರಗಳಿದ್ದು, ಅವು ಮಳೆ ಮಾಪನದ ಕಾರ್ಯವನ್ನು ನಿರ್ವಹಿಸುತ್ತಿವೆ. ೧೯೦೧ ರಿಂದ ೧೯೭೦ ರವರೆಗೆ ಜಿಲ್ಲೆಯಲ್ಲಿ ಬಿದ್ದ ಮಳೆಯ ಪ್ರಮಾಣವನ್ನು ಆಧರಿಸಿ ಮಳೆಯ ಪ್ರಮಾಣ ೭೫೨.೮ ಸೆಂ.ಮೀ. ಎಂದು ಅಂದಾಜಿಸಲಾಗಿದೆ. ಆದರೆ ವಾಸ್ತವಿಕವಾಗಿ ೨೦೦೦ರಲ್ಲಿ ೮೩೬.೮ ಸೆಂ.ಮೀ. ನಷ್ಟು, ೨೦೦೧ ರಲ್ಲಿ ೫೩೪.೭ ಸೆ.ಮೀ.ನಷ್ಟು, ೨೦೦೨ ರಲ್ಲಿ ೫೭೦.೦ ಸೆ.ಮೀ. ನಷ್ಟು, ೨೦೦೪ ರಲ್ಲಿ ೭೦೮.೧ ಸೆಂ.ಮೀ. ನಷ್ಟು ಮಳೆಯಾಗಿದೆ. ಅಂದರೆ ೨೦೦೦ ರಲ್ಲಿ ಮಾತ್ರ ಜಿಲ್ಲೆಯಲ್ಲಿ ವಾಡಿಕೆ ಮಳೆಗಿಂತ ಅಧಿಕ ಮಳೆಯಾಗಿದ್ದು, ೨೦೦೧, ೨೦೦೨, ೨೦೦೩ ಮತ್ತು ೨೦೦೪ ರಲ್ಲಿ ವಾಡಿಕೆ ಮಳೆಗಿಂತ ಕಡಿಮೆ ಪ್ರಮಾಣದಲ್ಲಿ ಮಳೆ ಆಗಿದೆ. ಅದರಲ್ಲೂ ೨೦೦೧, ೨೦೦೨ ಮತ್ತು ೨೦೦೩ ರಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿ ಮಳೆ ಆಗಿರುವುದು ತಿಳಿದುಬಂದಿದೆ.

ಅದೇ ರೀತಿ ಜಿಲ್ಲೆಯಲ್ಲಿ ಮಳೆಯಾಗುವ ದಿನಗಳನ್ನು ಗಮನಿಸಿದರೆ, ವಾಡಿಕೆಯಾಗಿ ಜಿಲ್ಲೆಯಲ್ಲಿ ವರುಷಕ್ಕೆ ೬೧ ದಿನ ಮಳೆಯಾಗುತ್ತದೆ ಎಂದು ಅಂದಾಜಿಸಲಾಗಿದೆ. ಆದರೆ ವಾಸ್ತವಿಕವಾಗಿ ನೋಡಿದರೆ ೨೦೦೦ದಲ್ಲಿ ೬೮ ದಿನಗಳು, ೨೦೦೧ ರಲ್ಲಿ ೫೩ ದಿನಗಳು, ೨೦೦೨ ರಲ್ಲಿ ೫೦ ದಿನಗಳು, ೨೦೦೩ ರಲ್ಲಿ ೪೭ ದಿನಗಳು ಮತ್ತು ೨೦೦೪ ರಲ್ಲಿ ೫೫ ದಿನಗಳು ಮಳೆಯಾಗಿರುವುದು ತಿಳಿದು ಬಂದಿದೆ. ೨೦೦೦ ದಲ್ಲಿ ಮಾತ್ರ ವಾಡಿಕೆ ಮಳೆ ದಿನಗಳಿಗಿಂತ ಹೆಚ್ಚು ದಿಸ ಮಳೆ ಆಗಿದ್ದು ಉಳಿದ ವರ್ಷಗಳಲ್ಲಿ ಅಂದರೆ ೨೦೦೧, ೨೦೦೨, ೨೦೦೩ ಮತ್ತು ೨೦೦೪ ರಲ್ಲಿ ವಾಡಿಕೆ ಮಳೆ ದಿನಗಳಿಗಿಂತ ಕಡಿಮೆ ದಿನ ಮಳೆಯಾಗಿರುವುದು ಕಂಡುಬಂದಿದೆ. ಇದರಿಂದ ಇತ್ತೀಚಿನ ವರ್ಷಗಳಲ್ಲಿ ಮಳೆಯ ಪ್ರಮಾಣ ಮತ್ತು ಮಳೆಯಾಗುವ ದಿನಗಳು ಕಡಿಮೆಯಾಗುತ್ತಿರುವ ಅಂಶ ಗೋಚರಿಸುತ್ತದೆ. ಹಾಗಾಗಿ ಕಳೆದ ಎರಡು, ಮೂರು ವರ್ಷದ ಕೆಳಗೆ ಜಿಲ್ಲೆಯಲ್ಲಿ ಅನಿಶ್ಚಿತ ಮಳೆಯಿಂದಾಗಿ ತೀವ್ರ ಬರಗಾಲವನ್ನು ಎದುರಿಸಬೇಕಾದ ಸ್ಥಿತಿ ಎದುರಾಗಿತ್ತು.

## ೨.೪ ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆ

### ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆಯ ಪ್ರಮಾಣ

**ಕೋಷ್ಟಕ : ೨.೧**

| ತಾಲ್ಲೂಕು | ಗಂಡಸರು | ಹೆಂಗಸರು | ಒಟ್ಟು | ಗ್ರಾಮೀಣ | ನಗರ | ಪ.ಜಾ. | ಪ.ಪಂ. |
|---|---|---|---|---|---|---|---|
| ಬ್ಯಾಡಗಿ | ೬೫೭೬೫ | ೬೨೧೭೯ | ೧೨೭೯೪೪ | ೧೦೨೨೮೧ | ೨೫೬೬೩ | ೧೪೪೫೨ | ೧೭೧೫೪ |
| ಹಾನಗಲ್ಲ | ೧೧೮೧೬೧ | ೧೧೨೫೮೯ | ೨೩೦೭೫೦ | ೨೦೫೭೪೧ | ೨೫೦೦೯ | ೩೦೯೩೩ | ೧೮೨೪೯ |
| ಹಾವೇರಿ | ೧೩೦೨೩೦ | ೧೨೨೧೧೭ | ೨೫೨೩೪೭ | ೧೯೬೪೩೪ | ೫೫೯೧೩ | ೨೯೬೩೬ | ೨೨೯೬೩ |
| ಹಿರೇಕೆರೂರು | ೧೦೮೮೨೯ | ೧೦೩೬೨೯ | ೨೧೨೪೫೮ | ೧೯೬೫೮೬ | ೧೫೮೭೪ | ೨೬೯೧೪ | ೨೨೩೩೮ |
| ರಾಣೆಬೆನ್ನೂರು | ೧೫೭೦೧೯ | ೧೪೭೯೭೧ | ೩೦೪೯೯೦ | ೨೦೮೬೪೧ | ೯೬೩೪೯ | ೩೬೪೦೯ | ೨೫೧೩೪ |
| ಸವಣೂರು | ೭೪೩೫೩ | ೬೯೫೩೨ | ೧೪೩೮೮೫ | ೧೦೮೩೨೨ | ೩೫೫೬೩ | ೧೯೯೧೨ | ೧೧೩೭೭ |
| ಶಿಗ್ಗಾಂವ | ೮೬೧೧೨ | ೮೦೬೩೦ | ೧೬೬೭೪೨ | ೧೨೨೦೯೧ | ೪೪೬೫೧ | ೧೭೦೦೪ | ೯೯೪೮ |
| ಒಟ್ಟು | ೭೪೦೪೬೯ | ೬೯೮೬೪೭ | ೧೪೩೯೧೧೬ | ೧೧೪೦೦೯೬ | ೨೯೯೦೨೨ | ೧೭೫೩೬೦ | ೧೨೭೧೬೩ |

ಮೂಲ : ೨೦೦೧ರ ಜನಗಣತಿ

ಕೃಪೆ : ಹಾವೇರಿ ಜಿಲ್ಲಾ ಅಂಕಿ-ಅಂಶಗಳ ನೋಟ, ೨೦೦೪-೦೫

೨೦೦೧ರ ಜನಗಣತಿಯ ಪ್ರಕಾರ ಬ್ಯಾಡಗಿ ತಾಲ್ಲೂಕಿನಲ್ಲಿ ೧೨೭೯೪೪ ರಷ್ಟು, ಹಾನಗಲ್ ತಾಲ್ಲೂಕಿನಲ್ಲಿ ೨೩೦೭೫೦ ರಷ್ಟು, ಹಾವೇರಿ ತಾಲ್ಲೂಕಿನಲ್ಲಿ ೨೫೨೩೪೭ ರಷ್ಟು, ಹಿರೇಕೆರೂರು ತಾಲ್ಲೂಕಿನಲ್ಲಿ ೨೧೨೪೫೮ ರಷ್ಟು, ರಾಣೆಬೆನ್ನೂರು ತಾಲ್ಲೂಕಿನಲ್ಲಿ ೩೦೪೯೯೦ ರಷ್ಟು, ಸವಣೂರು ತಾಲ್ಲೂಕಿನಲ್ಲಿ ೧೪೩೮೮೫ ರಷ್ಟು ಮತ್ತು ಶಿಗ್ಗಾಂವ ತಾಲ್ಲೂಕಿನಲ್ಲಿ ೧೬೬೭೪೨ ರಷ್ಟು ಜನಸಂಖ್ಯೆ ಇದ್ದು, ಜಿಲ್ಲೆಯ ಒಟ್ಟು ಜನಸಂಖ್ಯೆ ೧೪೩೯೧೧೬ ರಷ್ಟಿದೆ. ಇದರಲ್ಲಿ ಗಂಡಸರ ಸಂಖ್ಯೆ ೭೪೦೪೬೯ ಆಗಿದ್ದು, ಹೆಂಗಸರ

ಸಂಖ್ಯೆ ೬೯೮೬೪೭ ರಷ್ಟಿದೆ. ಜಿಲ್ಲೆಯಲ್ಲಿ ರಾಣೆಬೆನ್ನೂರು ತಾಲ್ಲೂಕು ಅತೀ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವುದು. ಅಲ್ಲದೆ ಇದೇ ತಾಲ್ಲೂಕಿನಲ್ಲಿ ಅತೀ ಹೆಚ್ಚು ಗಂಡಸರು ಮತ್ತು ಹೆಂಗಸರು ಇದ್ದಾರೆ. ಜಿಲ್ಲೆಯ ಜನರು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ೧೧೪೦೯೬ ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ಮತ್ತು ೨೯೯೦೨೨ ರಷ್ಟು ಜನ ನಗರ ಪ್ರದೇಶದಲ್ಲಿ ವಾಸವಾಗಿದ್ದಾರೆ. ಇಲ್ಲಿ ೧೭೫೩೬೦ ರಷ್ಟು ಪರಿಶಿಷ್ಟ ಜಾತಿಯ ಜನ ಮತ್ತು ೧೨೭೧೬೩ ರಷ್ಟು ಪರಿಶಿಷ್ಟ ಪಂಗಡದ ಜನ ವಾಸವಾಗಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಗೆ ಹೋಲಿಸಿದಾಗ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆಯು ಶೇಕಡ ೨೧ ರಷ್ಟು ಇರುವುದು. ಜಿಲ್ಲೆಯ ಒಟ್ಟು ಪರಿಶಿಷ್ಟ ಜಾತಿಯ ಜನರಲ್ಲಿ ೭೮೪೧೪ ಗಂಡಸರು ಮತ್ತು ೭೩೯೩೫ ಹೆಣ್ಣುಮಕ್ಕಳು ಅಂದರೆ ಒಟ್ಟು ೧೫೨೩೪೯ ಜನರು ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಾರೆ. ಇನ್ನುಳಿದ ೧೧೬೯೪ ಜನ ಗಂಡಸರು ಮತ್ತು ೧೧೩೧೭ ರಷ್ಟು ಹೆಣ್ಣು ಮಕ್ಕಳು ಅಂದರೆ ಒಟ್ಟು ೨೩೦೧೧ ರಷ್ಟು ಪರಿಶಿಷ್ಟ ಜಾತಿಯ ಜನ ಪಟ್ಟಣಗಳಲ್ಲಿ ವಾಸವಾಗಿದ್ದಾರೆ. ಅದೇ ರೀತಿ ಜಿಲ್ಲೆಯ ಒಟ್ಟು ಪರಿಶಿಷ್ಟ ಪಂಗಡದ ಜನರಲ್ಲಿ ೫೯೬೪೧ ಜನ ಗಂಡಸರು ಮತ್ತು ೫೬೨೮೫ ಜನ ಹೆಣ್ಣುಮಕ್ಕಳು ಅಂದರೆ ಒಟ್ಟು ೧೧೫೮೨೬ ಜನರು ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದಾರೆ. ಅಲ್ಲದೆ ೫೮೫೭ ಜನ ಗಂಡಸರು ಮತ್ತು ೫೪೮೦ ಜನ ಹೆಣ್ಣು ಮಕ್ಕಳು ಅಂದರೆ ಪರಿಶಿಷ್ಟ ಪಂಗಡದವರಲ್ಲಿ ಒಟ್ಟು ೧೧೩೩೭ ರಷ್ಟು ಜನರು ಪಟ್ಟಣದಲ್ಲಿ ವಾಸವಾಗಿದ್ದಾರೆ.

ಜಿಲ್ಲೆಯಲ್ಲಿ ಮಹಿಳೆಯರ ಸಂಖ್ಯೆಗಿಂತ ಪುರುಷರ ಸಂಖ್ಯೆ ಅಧಿಕವಾಗಿರುವುದು ಕಂಡುಬರುತ್ತದೆ. ಅಲ್ಲದೆ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ನಗರ ಪ್ರದೇಶದ ಜನಸಂಖ್ಯೆಗಿಂತ ಗ್ರಾಮೀಣ ಪ್ರದೇಶದ ಜನಸಂಖ್ಯೆ ಅಧಿಕವಾಗಿದೆ. ಅಂದರೆ ಗ್ರಾಮೀಣ ಪ್ರದೇಶದಲ್ಲಿಯೇ ಅಧಿಕ ಜನ ವಾಸವಾಗಿರುವುದು ಇದರಿಂದ ತಿಳಿದುಬರುತ್ತದೆ. ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಇದ್ದು, ಪರಿಶಿಷ್ಟ ಪಂಗಡದವರಿಗಿಂತ ಪರಿಶಿಷ್ಟ ಜಾತಿಯ ಜನರ ಸಂಖ್ಯೆ ಅಧಿಕವಾಗಿದೆ. ಅಲ್ಲದೆ ಪರಿಶಿಷ್ಟ ಜಾತಿಯ ಜನರಲ್ಲಿ ಪಟ್ಟಣದ ಪ್ರದೇಶದಲ್ಲಿ ನೆಲೆನಿಂತಿರುವವರಿಗಿಂತ ಗ್ರಾಮೀಣ ಪ್ರದೇಶದಲ್ಲಿ ನೆಲೆನಿಂತವರ ಸಂಖ್ಯೆಯೇ ಅಧಿಕವಾಗಿದೆ. ಅದೇ ರೀತಿ ಪರಿಶಿಷ್ಟ ಪಂಗಡದ ಜನರಲ್ಲಿ ಕೂಡ ಪಟ್ಟಣ ಪ್ರದೇಶಗಳಲ್ಲಿ ವಾಸವಾಗಿದ್ದವರಿಗಿಂತ ಗ್ರಾಮೀಣ ಪ್ರದೇಶದಲ್ಲಿ ವಾಸವಾದವರ ಸಂಖ್ಯೆ ಅಧಿಕವಾಗಿದೆ.

೨೦೦೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೬ ವರ್ಷದೊಳಗಿನ ಮಕ್ಕಳ ಸಂಖ್ಯೆ ಒಟ್ಟು ೨೦೩೭೧೨ ಇದ್ದು, ಅದರಲ್ಲಿ ಗಂಡುಮಕ್ಕಳ ಸಂಖ್ಯೆ ೧೦೪೧೧೯ ರಷ್ಟಿದ್ದರೆ ಹೆಣ್ಣು ಮಕ್ಕಳ ಸಂಖ್ಯೆ ೯೯೫೯೩ ರಷ್ಟಿದೆ. ಇದರಲ್ಲಿ ೮೨೩೪೯ ರಷ್ಟು ಗಂಡು ಮಕ್ಕಳು ಮತ್ತು ೭೯೦೦೫ ರಷ್ಟು ಹೆಣ್ಣು ಮಕ್ಕಳು ಅಂದರೆ ಒಟ್ಟು ೧೬೧೩೫೪ ರಷ್ಟು ಮಕ್ಕಳು ಗ್ರಾಮೀಣ ಪ್ರದೇಶದಲ್ಲಿ ಕಂಡುಬಂದರೆ, ೨೧೭೭೦ ರಷ್ಟು ಗಂಡು ಮಕ್ಕಳು ಮತ್ತು ೨೦೫೮೮ ಹೆಣ್ಣು ಮಕ್ಕಳು ಅಂದರೆ ಒಟ್ಟು ೪೨೩೫೮ ರಷ್ಟು ಮಕ್ಕಳು ನಗರ ಪ್ರದೇಶದಲ್ಲಿ ಕಂಡುಬರುತ್ತಾರೆ.

ಇದರಿಂದ ಜಿಲ್ಲೆಯಲ್ಲಿ ೦-೬ ವರ್ಷದೊಳಗಿನ ಮಕ್ಕಳಲ್ಲಿ ಗಂಡುಮಕ್ಕಳ ಸಂಖ್ಯೆ ಹೆಣ್ಣು ಮಕ್ಕಳ ಸಂಖ್ಯೆಗಿಂತ ಅಧಿಕವಾಗಿರುವುದು ತಿಳಿದುಬರುತ್ತದೆ. ಅಲ್ಲದೆ ನಗರ ಪ್ರದೇಶಕ್ಕಿಂತ ಗ್ರಾಮೀಣ ಪ್ರದೇಶದಲ್ಲಿ ಮಕ್ಕಳ ಸಂಖ್ಯೆ ಅಧಿಕವಿರುವುದು ಕಂಡುಬರುತ್ತದೆ. ನಗರ ಪ್ರದೇಶದಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳ ಸಂಖ್ಯೆಯ ನಡುವಿನ ವ್ಯತ್ಯಾಸವು ಕಡಿಮೆ ಇದ್ದು, ಗ್ರಾಮೀಣ ಪ್ರದೇಶದಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳ ಸಂಖ್ಯೆಯ ನಡುವಿನ ವ್ಯತ್ಯಾಸ ಅಧಿಕವಾಗಿರುವುದನ್ನು ಕಾಣುತ್ತೇವೆ.

೨೦೦೧ರ ಜನಗಣತಿಯ ಪ್ರಕಾರ ಜನಸಾಂದ್ರತೆ (ಪ್ರತಿ ಚ.ಕಿ.ಮೀ.ಗೆ) ಬ್ಯಾಡಗಿ ತಾಲ್ಲೂಕಿನಲ್ಲಿ ೨೯೩, ಹಾನಗಲ್ ತಾಲ್ಲೂಕಿನಲ್ಲಿ ೨೯೭, ಹಾವೇರಿ ತಾಲ್ಲೂಕಿನಲ್ಲಿ ೩೧೫, ಹಿರೇಕೆರೂರು ತಾಲ್ಲೂಕಿನಲ್ಲಿ ೨೬೩, ರಾಣೆಬೆನ್ನೂರು ತಾಲ್ಲೂಕಿನಲ್ಲಿ ೩೩೫, ಸವಣೂರು ತಾಲ್ಲೂಕಿನಲ್ಲಿ ೨೬೭ ಮತ್ತು ಶಿಗ್ಗಾಂವ ತಾಲ್ಲೂಕಿನಲ್ಲಿ ೨೮೩ ಜನಸಾಂದ್ರತೆ ಇದೆ. ಹಾವೇರಿ ಜಿಲ್ಲೆಯ ಒಟ್ಟು ಜನಸಾಂದ್ರತೆ ಪ್ರತಿ ಚ.ಕಿ.ಮೀ.ಗೆ ೨೯೬ ಇದ್ದು, ಇದು ರಾಜ್ಯದ ಜನಸಾಂದ್ರತೆ ೨೭೫ ಕ್ಕಿಂತ ಹೆಚ್ಚಿಗೆ ಇದೆ. ೧೯೯೧-೨೦೦೧ರ ದಶಕದಲ್ಲಿ ಹಾವೇರಿ ಜಿಲ್ಲೆಯಲ್ಲಿ ೧.೬೮ ಲಕ್ಷ ಜನಸಂಖ್ಯೆ ಹೆಚ್ಚಾಗಿದ್ದು ಜನಸಂಖ್ಯೆ ಪ್ರಮಾಣವು ಶೇಕಡ ೧೩.೨೯ ರಷ್ಟು ಹೆಚ್ಚಾಗಿರುವುದು.

ಜಿಲ್ಲೆಯಲ್ಲಿನ ಲಿಂಗಾನುಪಾತ (Sex Ratio) ಪ್ರತಿ ಸಾವಿರ ಪುರುಷರಿಗೆ ೯೬೧ ಜನ ಮಹಿಳೆಯರಿದ್ದಾರೆ. ಅಂದರೆ ಜಿಲ್ಲೆಯಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣ ಕಡಿಮೆ ಇದೆ. ವಿಶೇಷವೆಂದರೆ ಈ ಜಿಲ್ಲೆಯ ಒಂದು ತಾಲ್ಲೂಕಿನಲ್ಲಿ ಮಾತ್ರ ಅಂದರೆ ಹಿರೇಕೆರೂರು ತಾಲ್ಲೂಕಿನಲ್ಲಿ ಮಾತ್ರ Sex Ratio ಅಧಿಕವಾಗಿರುವುದು. ಅಂದರೆ ಇಲ್ಲಿ ಪ್ರತಿ ಸಾವಿರ ಪುರುಷರಿಗೆ ೧೦೧೦ ಮಹಿಳೆಯರಿದ್ದಾರೆ. ಹೀಗೆ ಹಿರೇಕೆರೂರು ತಾಲ್ಲೂಕನ್ನು ಹೊರತುಪಡಿಸಿದರೆ ಜಿಲ್ಲೆಯ ಉಳಿದೆಲ್ಲ ತಾಲ್ಲೂಕಿನಲ್ಲಿ ಪುರುಷರಿಗಿಂತ ಮಹಿಳೆಯರ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತದೆ. ಜಿಲ್ಲೆಯಲ್ಲಿ ಅತ್ಯಂತ ಕಡಿಮೆ ಲಿಂಗಾನುಪಾತ ಹೊಂದಿರುವ ತಾಲ್ಲೂಕೆಂದರೆ ರಾಣೆಬೆನ್ನೂರು.

## ೨.೫ ಜಿಲ್ಲೆಯ ಪ್ರಮುಖ ಉದ್ಯೋಗ

೨೦೦೧ ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೬೬೬೭೧೪ ಜನ ಕೆಲಸಗಾರರಿದ್ದಾರೆ. ೭೭೨೪೦೨ ಜನ ಕೆಲಸಗಾರರಲ್ಲದವರೂ ಇದ್ದಾರೆ. ಒಟ್ಟು ಕೆಲಸಗಾರರಲ್ಲಿ ೫೩೧೨೨೧ ರಷ್ಟು ಜನ ಮುಖ್ಯ ಕೆಲಸದಲ್ಲಿ ಮತ್ತು ೧೩೫೪೯೩ ಜನ ಅರೆಕಾಲಿಕ ಕೆಲಸಗಾರರಾಗಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇಕಡ ೪೫ ರಷ್ಟಾಗುವುದು. ಅಂದರೆ ಜಿಲ್ಲೆಯಲ್ಲಿ ಒಟ್ಟು ಕೆಲಸಗಾರರಲ್ಲದವರ ಪ್ರಮಾಣ ಕೆಲಸಗಾರರ ಪ್ರಮಾಣಕ್ಕಿಂತ ಅಧಿಕವಾಗಿದೆ. ಅಲ್ಲದೆ ಜಿಲ್ಲೆಯಲ್ಲಿ ಒಟ್ಟು ೨೭೬೪೦ ರಷ್ಟು ಜನ ಗೃಹಕೃತ್ಯ ಚಟುವಟಿಕೆ (Household Activities) ಯಲ್ಲಿ ತೊಡಗಿದ್ದಾರೆ. ಅದರಲ್ಲಿ ೧೩೬೮೪ ರಷ್ಟು ಗಂಡಸರು ಮತ್ತು ೧೩೯೫೬ ಜನ ಹೆಂಗಸರು ಗೃಹಕೃತ್ಯ ಚಟುವಟಿಕೆಯಲ್ಲಿ ತೊಡಗಿರುವರು. ಅಂದರೆ ಗೃಹಕೃತ್ಯ ಚಟುವಟಿಕೆಯಲ್ಲಿ ಪುರುಷರಿಗಿಂತ ಮಹಿಳೆಯರು ಅಧಿಕವಾಗಿ ತೊಡಗಿರುವುದು ಕಂಡುಬರುತ್ತದೆ.

ಜಿಲ್ಲೆಯ ಮುಖ್ಯ ಉದ್ಯೋಗ ವ್ಯವಸಾಯವಾಗಿದೆ. ಫಲವತ್ತಾದ ಕಪ್ಪು ಮತ್ತು ಮಸಾರಿ ಭೂಮಿ ಹೊಂದಿದ್ದರಿಂದ ಇದು ವ್ಯವಸಾಯಕ್ಕೆ ಯೋಗ್ಯವಾದ ಪ್ರದೇಶವಾಗಿದೆ. ೨೦೦೧-೦೨ನೇ ಸಾಲಿನ ವಾರ್ಷಿಕ ಋತು ಮತ್ತು ಬೆಳೆ ಅಂಕಿ ಅಂಶಗಳ ವರದಿ ಪ್ರಕಾರ ಜಿಲ್ಲೆಯಲ್ಲಿ ಬಿತ್ತನೆ ಮಾಡಲ್ಪಟ್ಟ ನಿವ್ವಳ ವಿಸ್ತೀರ್ಣ ೫೮೮೭೫ ಹೆಕ್ಟೇರು ಆಗಿರುತ್ತದೆ.

ಜಿಲ್ಲೆಯಲ್ಲಿ ಕೇವಲ ವ್ಯವಸಾಯವನ್ನಲ್ಲದೆ ಇತರ ಉದ್ಯೋಗವನ್ನು ಅವಲಂಬಿಸಿದ ಜನರೂ ಇದ್ದಾರೆ. ವ್ಯಾಪಾರಸ್ಥರು, ಉದ್ಯಮದಾರರು, ಖಾಸಗಿ ಮತ್ತು ಸರ್ಕಾರಿ ನೌಕರರು ಜಿಲ್ಲೆಯಲ್ಲಿ ಕಂಡುಬರುತ್ತಾರೆ. ಅಲ್ಲದೆ ಜಿಲ್ಲೆಯಲ್ಲಿ ಒಟ್ಟು ೮೦ ಕಾರ್ಖಾನೆಗಳಿದ್ದು ೨೧೪೮ ಜನ ಅದರಲ್ಲಿ ಉದ್ಯೋಗಿಗಳಾಗಿದ್ದಾರೆ. ಅಂದರೆ ೨೧೪೮ ರಷ್ಟು ಜನ ಮಾತ್ರವೇ ಆ ಕಾರ್ಖಾನೆಯನ್ನು ಅವಲಂಬಿಸಿ ಬದುಕುತ್ತಿದ್ದಾರೆ. ಆದರೆ ಜಿಲ್ಲೆಯಲ್ಲಿ ಬಹುಪಾಲು ಜನ ಕೃಷಿಯನ್ನೇ ಅವಲಂಬಿಸಿ ಬದುಕುತ್ತಿದ್ದಾರೆ. ಜೊತೆಗೆ ಕೃಷಿಕರಾದವರೆಲ್ಲ ಸಾಮಾನ್ಯವಾಗಿ ಪಶುಪಾಲನೆಯನ್ನು ಮೈಗೂಡಿಸಿಕೊಂಡಿದ್ದಾರೆ.

## ೨.೬ ಜಿಲ್ಲೆಯ ಭೂಹಿಡುವಳಿ ಮತ್ತು ಭೂಹಿಡುವಳಿದಾರರು

ಜಿಲ್ಲೆಯಲ್ಲಿ ಅತಿ ಸಣ್ಣ ಹಿಡುವಳಿದಾರರು, ಸಣ್ಣ ಹಿಡುವಳಿದಾರರು, ಅರೆ ಮಧ್ಯಮ ಹಿಡುವಳಿದಾರರು, ಮಧ್ಯಮ ಹಿಡುವಳಿದಾರರು ಮತ್ತು ದೊಡ್ಡ ಹಿಡುವಳಿದಾರರು ಇದ್ದಾರೆ. ಜಿಲ್ಲೆಯಲ್ಲಿ ಒಟ್ಟು ೩೮೧೭೯೭ ಹೆಕ್ಟೇರು ಭೂ ಹಿಡುವಳಿ ಇದ್ದು, ಅದು ೧೯೪೦೮೦ ಜನ ಒಟ್ಟು ಭೂ ಹಿಡುವಳಿದಾರರ ನಡುವೆ ಹಂಚಿಕೆಯಾಗಿದೆ. ಅದರಲ್ಲಿ ಅತಿ ಸಣ್ಣ ಹಿಡುವಳಿದಾರರು ಅಂದರೆ ಒಂದು ಹೆಕ್ಟೇರಿಗಿಂತ ಕಡಿಮೆ ಹಿಡುವಳಿಯನ್ನು ಹೊಂದಿದವರ ಸಂಖ್ಯೆ ೫೭೯೮೩ ರಷ್ಟಿದ್ದು, ಒಟ್ಟು ಅತಿ ಸಣ್ಣ ಹಿಡುವಳಿಯ ವಿಸ್ತೀರ್ಣ ೩೨೩೨೮ ಹೆಕ್ಟೇರುಗಳಿರುವುದು. ಜಿಲ್ಲೆಯಲ್ಲಿ ಹಿರೇಕೆರೂರು ತಾಲ್ಲೂಕು ಅಧಿಕ ಸಂಖ್ಯೆಯ ಅತಿ ಸಣ್ಣ ಭೂ ಹಿಡುವಳಿದಾರರನ್ನು (೧೪೫೨೫ ಜನ) ಹೊಂದಿದೆ.

ಅದೇ ರೀತಿ ಜಿಲ್ಲೆಯಲ್ಲಿ ಸಣ್ಣ ಹಿಡುವಳಿದಾರರು ಅಂದರೆ ೧ ರಿಂದ ೨ ಹೆಕ್ಟೇರು ಭೂಮಿ ಹೊಂದಿದ ಹಿಡುವಳಿದಾರರ ಹಿಡುವಳಿಯ ಒಟ್ಟು ವಿಸ್ತೀರ್ಣ ೧೦೩೧೬೬ ಹೆಕ್ಟೇರು ಇದ್ದು, ಒಟ್ಟು ಸಣ್ಣ ಹಿಡುವಳಿದಾರರ ಸಂಖ್ಯೆ ೭೧೪೩೦ ರಷ್ಟಿದೆ. ರಾಣೆಬೆನ್ನೂರು ತಾಲ್ಲೂಕು ಜಿಲ್ಲೆಯಲ್ಲಿ ಅತಿ ಹೆಚ್ಚು ಸಣ್ಣ ಹಿಡುವಳಿದಾರರನ್ನು ಹೊಂದಿದೆ.

ಜಿಲ್ಲೆಯಲ್ಲಿ ಒಟ್ಟು ೪೬೨೬೪ ಜನ ಅರೆ ಮಧ್ಯಮ ಹಿಡುವಳಿದಾರರಿದ್ದಾರೆ. ಅಂದರೆ ಇಷ್ಟು ಸಂಖ್ಯೆಯ ಜನ ೨ ರಿಂದ ೪ ಹೆಕ್ಟೇರು ಭೂಮಿಯನ್ನು ಹೊಂದಿದವರಾಗಿದ್ದಾರೆ. ಅರೆ ಮಧ್ಯಮ ಹಿಡುವಳಿದಾರರ ಒಟ್ಟು ಭೂ ಹಿಡುವಳಿಯ ವಿಸ್ತೀರ್ಣ ೧೨೪೯೨೧ ಹೆಕ್ಟೇರಿನಷ್ಟಿದೆ. ಜಿಲ್ಲೆಯಲ್ಲಿ ರಾಣೆಬೆನ್ನೂರು ತಾಲ್ಲೂಕು ಅಧಿಕ ಅರೆ ಮಧ್ಯಮ ಭೂಹಿಡುವಳಿದಾರರನ್ನು (೯೩೭೬ ಜನರನ್ನು) ಹೊಂದಿದೆ.

ಅಂತೆಯೇ ಜಿಲ್ಲೆಯಲ್ಲಿ ಒಟ್ಟು ೧೬೪೯೪ ಜನ ಮಧ್ಯಮ ಹಿಡುವಳಿಯನ್ನು ಅಂದರೆ ನಾಲ್ಕರಿಂದ ಹತ್ತು ಹೆಕ್ಟೇರು ಭೂಮಿಯನ್ನು ಹೊಂದಿದವರಾಗಿದ್ದಾರೆ. ಇವರು ಹೊಂದಿದ ಒಟ್ಟು ಭೂ ಹಿಡುವಳಿಯ ವಿಸ್ತೀರ್ಣ ೯೪೨೨೫ ಹೆಕ್ಟೇರು ಆಗಿದೆ. ಜಿಲ್ಲೆಯಲ್ಲಿ ಹಾವೇರಿ ತಾಲ್ಲೂಕು ಅತಿ ಹೆಚ್ಚು ಮಧ್ಯಮ ಹಿಡುವಳಿದಾರರನ್ನು ಹೊಂದಿರುವುದು. ಹಾಗೆಯೇ ಹಾವೇರಿ ಜಿಲ್ಲೆಯಲ್ಲಿ ದೊಡ್ಡ ಭೂ ಹಿಡುವಳಿಯನ್ನು ಅಂದರೆ ಸುಮಾರು ಹತ್ತು ಹೆಕ್ಟೇರುಗಳಿಗಿಂತ ಅಧಿಕ ಹಿಡುವಳಿಯನ್ನು ಹೊಂದಿದವರ ಸಂಖ್ಯೆ ೧೯೧೦ ರಷ್ಟಿದ್ದು, ಇವರು ಹೊಂದಿರುವ ಒಟ್ಟು ಹಿಡುವಳಿಯ ವಿಸ್ತೀರ್ಣ ೨೭೧೪೭ ಹೆಕ್ಟೇರಿನಷ್ಟಿರುವುದು. ಜಿಲ್ಲೆಯಲ್ಲಿ ಹಾವೇರಿ ತಾಲ್ಲೂಕಿನ ಅತಿ ಹೆಚ್ಚು ದೊಡ್ಡ ಹಿಡುವಳಿದಾರರನ್ನು (೪೭೮ ಜನರನ್ನು) ಹೊಂದಿರುವುದು.

ಹೀಗೆ ಒಟ್ಟಾರೆ ಜಿಲ್ಲೆಯಲ್ಲಿ ಬ್ಯಾಡಗಿ ತಾಲ್ಲೂಕು ಅತಿ ಕಡಿಮೆ ಭೂ ಹಿಡುವಳಿದಾರರನ್ನು (೧೮೫೭೬ ಜನ) ಹೊಂದಿರುವ ಮತ್ತು ಹಿರೇಕೆರೂರು ಅತಿ ಹೆಚ್ಚು ಭೂ ಹಿಡುವಳಿದಾರರನ್ನು (೩೭೪೯೯ ಜನ) ಹೊಂದಿರುವ ಪ್ರದೇಶವಾಗಿದೆ. ಹಾಗೂ ರಾಣೆಬೆನ್ನೂರು ತಾಲ್ಲೂಕು ಜಿಲ್ಲೆಯಲ್ಲಿಯೇ ಒಟ್ಟಾರೆ ಅತಿಹೆಚ್ಚು ಭೂ ಹಿಡುವಳಿಯನ್ನು (೭೧೯೩೯ ಹೆಕ್ಟೇರು) ಹೊಂದಿದ್ದು, ಬ್ಯಾಡಗಿ ತಾಲ್ಲೂಕು ಅತಿ ಕಡಿಮೆ ವಿಸ್ತೀರ್ಣದ ಭೂ ಹಿಡುವಳಿಯನ್ನು (೩೪೩೭೮ ಹೆಕ್ಟೇರು) ಹೊಂದಿರುವುದು. ಅಲ್ಲದೆ ಜಿಲ್ಲೆಯಲ್ಲಿ ಒಟ್ಟು ೨೯೧೨೭೫ ಜನ ಭೂರಹಿತ ಕೃಷಿಕಾರ್ಮಿಕರಿದ್ದಾರೆ. ಅವರಲ್ಲಿ ೧೩೩೯೭೭ ಜನ ಗಂಡಸರು ಮತ್ತು ೧೫೭೨೯೮ ರಷ್ಟು ಹೆಂಗಸರು ಕೃಷಿಯನ್ನು ಅವಲಂಬಿಸಿ ಬದುಕುತ್ತಿದ್ದಾರೆ.

### ಭೂ ಹಿಡುವಳಿಗಳು ಮತ್ತು ವಿಸ್ತೀರ್ಣ ೨೦೦೦-೦೧ ಕೃಷಿಗಣತಿ ಪ್ರಕಾರ

ಕೋಷ್ಟಕ : ೨.೨

| ತಾಲ್ಲೂಕು | ಅತಿಸಣ್ಣ ಹಿಡುವಳಿದಾರರು | | ಸಣ್ಣ ಹಿಡುವಳಿದಾರರು | | ಅರೆಮಧ್ಯಮ ಹಿಡುವಳಿದಾರರು | | ಮಧ್ಯಮ ಹಿಡುವಳಿದಾರರು | | ದೊಡ್ಡ ಹಿಡುವಳಿದಾರರು | | ಒಟ್ಟು ಹಿಡುವಳಿದಾರರು | |
|---|---|---|---|---|---|---|---|---|---|---|---|---|
| | ೧ ಹೆ.ಗಿಂತ ಕಡಿಮೆ | | ೧ ಹೆ.-೨ ಹೆ.ವರೆಗೆ | | ೨ ಹೆ.-೪ ಹೆ.ವರೆಗೆ | | ೪ ಹೆ.-೧೦ ಹೆ.ವರೆಗೆ | | ೧೦ ಹೆ.ಕ್ಕಿಂತ ಜಾಸ್ತಿ | | ಸಂಖ್ಯೆ | ವಿಸ್ತೀರ್ಣ |
| | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | ಸಂಖ್ಯೆ | ವಿಸ್ತೀರ್ಣ | | |
| ಬ್ಯಾಡಗಿ | ೫೪೯೩ | ೩೦೫೮ | ೭೨೩೦ | ೧೦೪೨೯ | ೪೩೯೨ | ೧೧೯೮೬ | ೧೩೬೦ | ೭೬೦೭ | ೧೦೧ | ೧೨೯೮ | ೧೮೫೭೬ | ೩೪೩೭೮ |
| ಹಾನಗಲ್ಲ | ೧೨೪೭೭ | ೭೦೧೯ | ೧೧೭೦೦ | ೧೬೮೮೯ | ೬೪೩೬ | ೧೭೩೮೯ | ೨೨೬೮ | ೧೨೮೪೭ | ೧೯೯ | ೨೯೫೮ | ೩೩೦೮೦ | ೫೭೧೦೨ |
| ಹಾವೇರಿ | ೭೦೭೭ | ೪೦೨೫ | ೧೧೭೮೭ | ೧೫೭೫೯ | ೭೪೧೫ | ೧೯೯೩೮ | ೩೧೫೧ | ೧೮೪೦೭ | ೪೭೮ | ೬೫೫೮ | ೨೯೯೦೮ | ೬೪೬೮೭ |
| ಹಿರೇಕೆರೂರು | ೧೪೫೨೫ | ೭೬೯೩ | ೧೩೧೯೭ | ೧೮೯೮೪ | ೭೬೩೨ | ೨೦೭೦೬ | ೨೦೨೩ | ೧೧೨೧೦ | ೧೨೨ | ೧೫೭೮ | ೩೭೪೯೯ | ೬೦೧೭೧ |
| ರಾಣೆಬೆನ್ನೂರು | ೯೫೧೮ | ೫೧೨೭ | ೧೩೫೬೪ | ೧೯೪೫೫ | ೯೩೭೬ | ೨೫೦೭೯ | ೩೧೨೭ | ೧೭೮೫೪ | ೩೦೨ | ೪೪೨೪ | ೩೫೮೮೭ | ೭೧೯೩೯ |
| ಸವಣೂರು | ೪೦೬೨ | ೨೪೪೮ | ೭೫೫೩ | ೧೦೯೮೭ | ೫೮೮೩ | ೧೫೭೬೩ | ೨೪೫೩ | ೧೪೧೬೭ | ೪೦೯ | ೫೮೬೩ | ೨೦೩೬೦ | ೪೯೨೨೮ |
| ಶಿಗ್ಗಾಂವ | ೪೮೩೦ | ೨೯೫೮ | ೭೩೯೯ | ೧೦೬೭೩ | ೫೧೩೦ | ೧೪೦೬೦ | ೨೧೧೨ | ೧೨೧೩೩ | ೨೯೯ | ೪೪೬೮ | ೧೯೭೭೦ | ೪೪೨೯೨ |
| ಒಟ್ಟು | ೫೭೯೮೨ | ೩೨೩೨೮ | ೭೧೪೩೦ | ೧೦೩೧೭೬ | ೪೬೨೬೪ | ೧೨೪೯೨೧ | ೧೬೪೯೪ | ೯೪೨೨೫ | ೧೯೧೦ | ೨೭೧೪೭ | ೧೯೫೦೮೦ | ೩೮೧೭೯೭ |

ಮೂಲ ಮಾಹಿತಿ : ೨೦೦೧ರ ಜನಗಣತಿ

## ೨.೭ ಜಿಲ್ಲೆಯ ಪ್ರಮುಖ ಬೆಳೆಗಳು

ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಸಾಮಾನ್ಯವಾಗಿ ಭತ್ತ, ರಾಗಿ, ಜೋಳ, ಸಜ್ಜೆ, ಮುಸುಕಿನ ಜೋಳ, ಗೋಧಿ, ಕಡಲೆ, ತೊಗರಿ, ಹೆಸರು, ಅಲಸಂದಿ, ಉದ್ದು, ಅವರೆ, ಹುರುಳಿ, ಮಸಾಲೆ ಮತ್ತು ಸಾಂಬಾರ ಪದಾರ್ಥಗಳು, ಹಣ್ಣುಗಳು, ತರಕಾರಿಗಳು ಹಾಗೂ ಶೇಂಗಾ, ಸೂರ್ಯಕಾಂತಿ, ಎಳ್ಳು, ಗುರೆಳ್ಳು, ಔಡಲ, ಸಾಸುವೆ, ಸೋಯಾ, ಅವರೆಯಂತಹ ಎಣ್ಣೆಕಾಳುಗಳನ್ನು ಮತ್ತು ಹೈಬ್ರೆಡ್ ಹತ್ತಿ, ಕಬ್ಬು, ತಂಬಾಕು, ಮೆಣಸಿನ ಗಿಡದಂತಹ ವಾಣಿಜ್ಯ ಬೆಳೆಗಳನ್ನು ಬೆಳೆಯುವರು. ಅಲ್ಲದೆ ಇತ್ತೀಚಿನ ದಿನಗಳಲ್ಲಿ ಬೆಳೆಯ ಸಾಧ್ಯತೆಯನ್ನು ಹೆಚ್ಚಿಸುವುದಕ್ಕೋಸ್ಕರ ಮಿಶ್ರ ಬೆಳೆ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಜಿಲ್ಲೆಯಲ್ಲಿ ಇತ್ತೀಚಿಗೆ ಬೇಸಾಯದಲ್ಲಿ ಈ ಕೆಳಗಿನಂತೆ ಹೊಸ ಬೆಳೆ ಬೆಳೆಯುವ ಪದ್ಧತಿ ಕಂಡುಬರುತ್ತದೆ.

೧. ಸೋಯಾಬಿನ್ + ತೊಗರಿ

೨. ಸೋಯಾಬಿನ್ + ಹೈಬ್ರೆಡ್ ಹತ್ತಿ

೩. ಸೋಯಾಬಿನ್ + ಕಬ್ಬು

೪. ಜೋಳ + ತೊಗರಿ + ತೃಣಧಾನ್ಯ + ಮಡಿಕೆ + ಪುಂಡಿ + ಔಡಲ

೫. ಶ್ರೀ ಪದ್ಧತಿ ಭತ್ತ

೬. ಗೋವಿನ ಜೋಳ + ತೊಗರಿ + ಔಡಲ + ಪುಂಡಿ

೭. ಸಾಂವಿ + ತೊಗರಿ

೮. ರಾಗಿ + ತೊಗರಿ

೯. ಎಲ್ಲ ಬೆಳೆಗಳಲ್ಲಿ ತೃಣಧಾನ್ಯ

೧೦. ಶೇಂಗಾ + ಅಲ್ಸಂದಿ

೧೧. ಎಳ್ಳು + ತೊಗರಿ

೧೨. ಗೋದಿ + ಕುಸುಬಿ

೧೩. ಕಡಲೆ + ಕುಸುಬಿ

ಈ ರೀತಿ ಜಿಲ್ಲೆಯಲ್ಲಿ ಮಿಶ್ರ ಬೆಳೆ ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

## ೨.೮ ಜಿಲ್ಲೆಯ ಆದಾಯ ಮೂಲಗಳು

ಹಾವೇರಿ ಜಿಲ್ಲೆಯು ಆದಾಯ ಬರುವ ವಿವಿಧ ಬಗೆಯ ಉತ್ಪನ್ನ ಮೂಲಗಳನ್ನು ಹೊಂದಿದೆ. ಕೃಷಿ ಮತ್ತು ಪಶುಸಂಗೋಪನೆ, ಅರಣ್ಯ ಮತ್ತು ಮರಕೆಲಸ, ಮೀನುಗಾರಿಕೆ, ಗಣಿ ಮತ್ತು ಕಲ್ಲು ಅಗೆತ, ತಯಾರಿಕೆ (Manufacturing), ನಿರ್ಮಾಣಕಾರ್ಯ (Construction), ವಿದ್ಯುಚ್ಛಕ್ತಿ, ಅನಿಲ ಮತ್ತು

ನೀರು ಸರಬರಾಜು, ರೈಲ್ವೆ ಸಾರಿಗೆ ಮತ್ತು ಇತರ ಸಾರಿಗೆ ಸಂಪರ್ಕ (Communication), ವ್ಯಾಪಾರ, ವಸತಿ ಮತ್ತು ಉಪಹಾರ ಗೃಹಗಳು, ಬ್ಯಾಂಕು ಮತ್ತು ವಿಮೆ ಉದ್ದಿಮೆ, ಸ್ಥಿರಾಸ್ತಿ, ವಾಸಗೃಹಗಳ ಒಡೆತನ ಮತ್ತು ವ್ಯವಹಾರ, ಸಾರ್ವಜನಿಕ ಆಡಳಿತ ಮತ್ತು ಇತರೆ ಸೇವೆಗಳು ಈ ಎಲ್ಲ ಮೂಲಗಳಿಂದ ಜಿಲ್ಲೆಗೆ ಆದಾಯ ಬರುವುದು. ಆದರೆ ಕೃಷಿ ಮತ್ತು ಪಶುಸಂಗೋಪನೆಯಿಂದಲೇ ಜಿಲ್ಲೆಗೆ ಅಧಿಕ ಆದಾಯ ಬರುವುದು. ಸ್ಪಷ್ಟತೆಗಾಗಿ ಈ ಕೆಳಗಿನ ಕೋಷ್ಟಕ ಗಮನಿಸಿ.

**ಜಿಲ್ಲೆಯ ಆಂತರಿಕ ಉತ್ಪನ್ನ : ೨೦೦೨-೦೩**

ಕೋಷ್ಟಕ : ೨.೩ (ಲಕ್ಷ ರೂ.ಗಳಲ್ಲಿ)

| ಕ್ರ.ಸಂ. | ಆದಾಯ ಮೂಲ | ಚಾಲ್ತಿ ಬೆಲೆಗಳಲ್ಲಿ ಒಟ್ಟು | ಸ್ಥಿರ ಬೆಲೆಗಳಲ್ಲಿ ನಿವ್ವಳ | ಒಟ್ಟು | ನಿವ್ವಳ |
|---|---|---|---|---|---|
| ೧ | ಕೃಷಿ ಮತ್ತು ಪಶುಸಂಗೋಪನೆ | ೫೯೬೯೯ | ೫೫೪೫೯ | ೩೭೮೯೮ | ೩೫೫೭೫ |
| ೨ | ಅರಣ್ಯ ಮತ್ತು ಮರಗೆಲಸ | ೪೭೦೩ | ೪೪೫೯ | ೨೭೯೯ | ೨೬೭೦ |
| ೩ | ಮೀನುಗಾರಿಕೆ | ೨೬೩ | ೨೩೪ | ೬೩ | ೫೩ |
| ೪ | ಗಣಿ ಮತ್ತು ಕಲ್ಲು ಅಗೆತ | ೫೦ | ೪೦ | ೪೫ | ೩೮ |
| ೫ | ತಯಾರಿಕೆ (ನೊಂದಾಯಿಸಿದ) | ೧೯೨೩ | ೧೪೨೮ | ೧೨೬೫೧ | ೯೧೦ |
| ೬ | ತಯಾರಿಕೆ (ನೊಂದಾಯಿಸಿಲ್ಲದ) | ೧೮೫೧೧ | ೧೬೪೩೮ | ೧೧೭೯೨ | ೧೦೫೨೫ |
| ೭ | ನಿರ್ವಹಣಾ ಕಾರ್ಯ | ೧೧೪೬೯ | ೧೧೦೧೬ | ೮೦೦೭ | ೭೬೮೦ |
| ೮ | ವಿದ್ಯುಚ್ಛಕ್ತಿ, ಅನಿಲ ಮತ್ತು ನೀರು ಸರಬರಾಜು | ೪೧೪೭ | ೨೦೯೭ | ೨೫೭೮ | ೧೩೫೮ |
| ೯ | ರೈಲ್ವೆ | ೧೩೨೨ | ೯೫೧ | ೮೪೦ | ೫೮೯ |
| ೧೦ | ಇತರೆ ಸಾರಿಗೆ | ೭೧೨೧ | ೫೩೯೬ | ೨೯೫೪ | ೧೮೭೯ |
| ೧೧ | ಸಂಗ್ರಹಣೆ | ೫೫ | ೫೦ | ೩೫ | ೩೨ |
| ೧೨ | ಸಂಪರ್ಕ | ೩೧೩೪ | ೨೫೭೦ | ೩೫೩೫ | ೩೧೮೯ |
| ೧೩ | ವ್ಯಾಪಾರ, ವಸತಿ ಮತ್ತು ಉಪಹಾರ ಗೃಹಗಳು | ೧೯೩೨೦ | ೧೮೯೪೬ | ೧೨೯೦೩ | ೧೨೬೩೦ |
| ೧೪ | ಬ್ಯಾಂಕು ಮತ್ತು ವಿಮೆ ಉದ್ದಿಮೆ | ೪೯೫೯ | ೪೭೧೨ | ೩೩೩೩ | ೩೧೬೦ |
| ೧೫ | ಸ್ಥಿರಾಸ್ತಿ, ವಾಸಗೃಹಗಳ ಒಡೆತನ ಮತ್ತು ವ್ಯವಹಾರ | ೧೮೮೫೭ | ೧೬೫೫೮ | ೧೦೩೫೦ | ೮೯೮೦ |
| ೧೬ | ಸಾರ್ವಜನಿಕ ಆಡಳಿತ | ೧೮೩೩೭ | ೧೪೨೪೦ | ೬೦೦೮ | ೫೨೧೮ |
| ೧೭ | ಇತರೆ ಸೇವೆಗಳು | ೨೦೦೪೫ | ೧೯೫೩೩ | ೧೦೭೫೮ | ೧೦೪೩೨ |
| | ಒಟ್ಟು ಆದಾಯ | ೧೯೧೯೧೬ | ೧೭೪೧೨೫ | ೧೧೫೧೫೨ | ೧೦೪೯೧೯ |
| | ತಲಾ ಆದಾಯ | ೧೩೦೭೦ | ೧೧೮೫೮ | ೭೮೪೨ | ೭೧೪೫ |

ಕೃಪೆ : ಹಾವೇರಿ ಜಿಲ್ಲಾ ಅಂಕಿ-ಅಂಶಗಳ ನೋಟ : ೨೦೦೪-೦೫

## ೨.೯ ಜಿಲ್ಲೆಯ ಆಡಳಿತಾತ್ಮಕ ವಿವರ

ಹಾವೇರಿ ಜಿಲ್ಲೆಯು ಒಟ್ಟು ಏಳು ತಾಲ್ಲೂಕುಗಳನ್ನು ಒಳಗೊಂಡಿದ್ದು, ಆಡಳಿತ ವಿಕೇಂದ್ರೀಕರಣ ದೃಷ್ಟಿಯಿಂದ ಜಿಲ್ಲೆಯಲ್ಲಿ ಎರಡು ಕಂದಾಯ ಉಪವಿಭಾಗಗಳು ಇವೆ. ಹಾವೇರಿ ಉಪವಿಭಾಗಕ್ಕೆ ಹಾವೇರಿ, ಬ್ಯಾಡಗಿ, ಹಿರೇಕೆರೂರು ಮತ್ತು ರಾಣೆಬೆನ್ನೂರು ತಾಲ್ಲೂಕುಗಳು ಹಾಗೂ ಸವಣೂರು ಉಪವಿಭಾಗಕ್ಕೆ ಶಿಗ್ಗಾಂವ, ಹಾನಗಲ್ ಮತ್ತು ಸವಣೂರು ತಾಲೂಕುಗಳು ಸೇರಿವೆ. ಜಿಲ್ಲೆಯಲ್ಲಿ ಒಟ್ಟು ೮ ಪಟ್ಟಣ/ನಗರ ಸಮುದಾಯಗಳಿವೆ. ಬ್ಯಾಡಗಿ, ಹಾನಗಲ್, ಸವಣೂರುಗಳಲ್ಲಿ ಪುರಸಭೆ, ಹಾವೇರಿ ಮತ್ತು ರಾಣೆಬೆನ್ನೂರುಗಳಲ್ಲಿ ನಗರಸಭೆ, ಬಂಕಾಪುರ ಮತ್ತು ಶಿಗ್ಗಾಂವಗಳಲ್ಲಿ ಪಟ್ಟಣ ಪಂಚಾಯಿತಿಗಳಿವೆ. ಗ್ರಾಮಗಳ ಸರ್ವಾಂಗೀಣ ಪ್ರಗತಿ ಸಾಧಿಸುವ ಸಲುವಾಗಿ ವಿಕೇಂದ್ರೀಕರಣ ಮಾಡಿ ಗ್ರಾಮಮಟ್ಟದಿಂದ ಯೋಜಿತ ರೀತಿಯಲ್ಲಿ ವ್ಯವಸ್ಥಿತವಾಗಿ ಅಭಿವೃದ್ಧಿ ಯೋಜನೆಗಳನ್ನು ಕಾರ್ಯತಗೊಳಿಸಲು ಪಟ್ಟಣ; ನಗರ ಸಮುದಾಯಗಳು, ತಾಲ್ಲೂಕು ಪಂಚಾಯಿತಿ ಹಾಗೂ ಗ್ರಾಮಪಂಚಾಯಿತಿಗಳ ಸಹಕಾರದೊಂದಿಗೆ ಜಿಲ್ಲೆಯ ಅಭಿವೃದ್ಧಿಯನ್ನು ಕಾರ್ಯಗತಗೊಳಿಸುತ್ತಿವೆ.

## ೨.೧೦ ಜಿಲ್ಲೆಯ ಶೈಕ್ಷಣಿಕ ವಿವರ

೨೦೦೧ರ ಜನಗಣತಿಯ ಪ್ರಕಾರ ಹಾವೇರಿ ಜಿಲ್ಲೆಯಲ್ಲಿ ಸಾಕ್ಷರತಾ ಪ್ರಮಾಣವು ಶೇ ೬೮.೦೯ ಇದೆ. ಗಂಡಸರು ಶೇಕಡ ೭೭.೯೪ ರಷ್ಟು ಸಾಕ್ಷರರಾಗಿದ್ದಾರೆ. ಹೆಂಗಸರು ಶೇಕಡ ೫೭.೦೬ ರಷ್ಟು ಸಾಕ್ಷರರಾಗಿದ್ದಾರೆ. ಅಂದರೆ ಜಿಲ್ಲೆಯಲ್ಲಿ ಪುರುಷರಿಗಿಂತ ಮಹಿಳೆಯರು ಹೆಚ್ಚು ಅಶಿಕ್ಷಿತರಾಗಿದ್ದಾರೆ. ಜಿಲ್ಲೆಯು ಒಟ್ಟು ೪೯೨ ಕಿರಿಯ ಪ್ರಾಥಮಿಕ ಶಾಲೆಗಳು, ೭೩೫ ಹಿರಿಯ ಪ್ರಾಥಮಿಕ ಶಾಲೆಗಳು, ೨೪೯ ಪ್ರೌಢ ಶಾಲೆಗಳು, ೬೭ ಪದವಿಪೂರ್ವ ಕಾಲೇಜುಗಳು, ೧೮ ಪದವಿ ಮಹಾವಿದ್ಯಾಲಯಗಳು, ೨ ಪಾಲಿಟೆಕ್ನಿಕ್ ಕಾಲೇಜುಗಳು, ಒಂದು ಇಂಜಿನೀಯರಿಂಗ್ ಕಾಲೇಜು ಮತ್ತು ಒಂದು ವೈದ್ಯಕೀಯ ಕಾಲೇಜನ್ನು ಹೊಂದಿದೆ. ಅಲ್ಲದೆ ಜಿಲ್ಲೆಯಲ್ಲಿ ಒಟ್ಟು ೧೨೪೯ ಅಂಗನವಾಡಿ ಕೇಂದ್ರಗಳಿವೆ.

## ೨.೧೧ ಜಿಲ್ಲೆಯ ಇತರೆ ವಿವರಗಳು

ಜಿಲ್ಲೆಯಲ್ಲಿ ೧೦ ಪಶು ಆಸ್ಪತ್ರೆಗಳು, ೫೬ ಪಶು ಚಿಕಿತ್ಸಾಲಯಗಳು, ೪೩ ಪ್ರಾಥಮಿಕ ಪಶು ವೈದ್ಯಕೇಂದ್ರಗಳು, ೭ ಸಂಚಾರಿ ಪಶು ಚಿಕಿತ್ಸಾಲಯಗಳು, ೨೨ ಕೃತಕ ಗರ್ಭಧಾರಣೆ ಕೇಂದ್ರಗಳಿದ್ದು, ಇವುಗಳಿಂದ ಕೃಷಿಕರಿಗೆ ಅನುಕೂಲವಾಗಿದೆ. ಈ ಸೌಲಭ್ಯಗಳಿರುವುದರಿಂದ ಪಶುಪಾಲನೆಗೆ ಹೆಚ್ಚು ಸಹಾಯಕವಾಗಿದೆ. ಅಲ್ಲದೆ ಜಿಲ್ಲೆಯಲ್ಲಿ ೪೯ ಸಹಕಾರಿ ಬ್ಯಾಂಕುಗಳು, ೪೮ ಗ್ರಾಮೀಣ ಬ್ಯಾಂಕುಗಳು, ೧೨ ನಗರ ಪ್ರದೇಶದ ಸಹಕಾರಿ ಬ್ಯಾಂಕುಗಳು, ೭ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಇದ್ದು, ಇವು ರೈತರಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿಯ ಸಾಲ ಸೌಲಭ್ಯವನ್ನು ಕಲ್ಪಿಸುವುದರಿಂದ ರೈತರಿಗೆ ಅನುಕೂಲವಾಗಿದೆ. ಅಲ್ಲದೆ ಜಿಲ್ಲೆಯ ಸಾರಿಗೆ ಸಂಪರ್ಕ ಉತ್ತಮವಾಗಿದ್ದು, ಕೃಷಿ ಉತ್ಪನ್ನಗಳನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಲು ಜಿಲ್ಲೆಯ ಸಾರಿಗೆ ವ್ಯವಸ್ಥೆ ಅನುಕೂಲವಾಗಿದೆ.

* * * * *

ಅಧ್ಯಾಯ ೩

# ಕೃಷಿ ಹುಟ್ಟು, ಬೆಳವಣಿಗೆ ಮತ್ತು ಮಹಿಳೆ.

೩.೧ ಕೃಷಿಗೆ ಮಹಿಳೆಯ ಕೊಡುಗೆ

೩.೨ ಕೃಷಿಯ ಆರಂಭಿಕ ಹಂತದಲ್ಲಿ ಮಹಿಳೆಯ ಸ್ಥಾನಮಾನಗಳು

೩.೩ ಕೃಷಿಯಲ್ಲಿ ಪುರುಷನ ಪ್ರವೇಶದ ನಂತರದಲ್ಲಾದ ಬದಲಾವಣೆಗಳು

## ಅಧ್ಯಾಯ ೩

# ಕೃಷಿ ಹುಟ್ಟು, ಬೆಳವಣಿಗೆ ಮತ್ತು ಮಹಿಳೆ

**ಈ** ಅಧ್ಯಾಯದಲ್ಲಿ ಕೃಷಿಯನ್ನು ಕಂಡುಕೊಳ್ಳುವ ಪೂರ್ವದಲ್ಲಿ ಮನುಷ್ಯರು ಯಾವ ರೀತಿ ಜೀವಿಸುತ್ತಿದ್ದರು? ಎಂಬುದನ್ನು ಹೇಳುತ್ತಲೇ, ಕೃಷಿಯ ಹುಟ್ಟು ಮತ್ತು ಬೆಳವಣಿಗೆಯ ಬಗೆಗೆ ಚರ್ಚಿಸಲಾಗಿದೆ. ಕೃಷಿಯ ಉಗಮಕ್ಕೆ ಮಹಿಳೆಯ ಕೊಡುಗೆ ಏನು? ಮಹಿಳೆಯಿಂದ ಕೃಷಿಯ ಆವಿಷ್ಕಾರವಾದದ್ದು ಯಾವಾಗ? ಕೃಷಿಯ ಆರಂಭಿಕ ಹಂತದಲ್ಲಿ ಅವಳ ಸ್ಥಾನಮಾನಗಳು ಏನಾಗಿದ್ದವು? ಆ ನಂತರದಲ್ಲಿ ಕೃಷಿಯಲ್ಲಾದ ಬೆಳವಣಿಗೆಗಳು ಮಹಿಳೆಯ ಸ್ಥಾನಮಾನಗಳಲ್ಲಿ ಉಂಟುಮಾಡಿದ ಬದಲಾವಣೆಗಳೇನು? ಎಂಬುದನ್ನು ಕುರಿತು ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಈಗಾಗಲೇ ಕೃಷಿ ಮತ್ತು ಕೃಷಿ ಮಹಿಳೆಯನ್ನು ಕುರಿತಂತೆ ಕೆಲವು ಮಾನವಶಾಸ್ತ್ರಜ್ಞರು ಮತ್ತು ವಿದ್ವಾಂಸರು ಮಂಡಿಸಿದ ಹೇಳಿಕೆಗಳನ್ನು ಬಳಸಿಕೊಂಡು ಚರ್ಚೆಯನ್ನು ಬೆಳೆಸಲಾಗಿದೆ.

ಮನುಷ್ಯರು ಜೀವಿಸುವುದಕ್ಕೆ ಬೇಕಾದ ಮೂಲಭೂತ ಅಗತ್ಯಗಳಲ್ಲಿ ಆಹಾರವೂ ಒಂದು. ಮನುಕುಲದ ವಿಕಾಸದಲ್ಲಿ ಮನುಷ್ಯ ತನಗೆ ಬೇಕಾದ ಆಹಾರವನ್ನು ಪಡೆದುಕೊಂಡ ರೀತಿಯನ್ನು ಡಿ.ಡಿ. ಕೋಸಂಬಿ ಮತ್ತು ದೇವಿಪ್ರಸಾದ ಚಟ್ಟೋಪಾಧ್ಯಾಯ ಮತ್ತಿತರ ವಿದ್ವಾಂಸರು ಎರಡು ಪ್ರಮುಖ ಹಂತಗಳಲ್ಲಿ ಗುರುತಿಸಿದ್ದಾರೆ.

ಅ. ಆಹಾರ ಸಂಗ್ರಹಣೆಯ ಹಂತ.

ಆ. ಆಹಾರ ಉತ್ಪಾದನೆಯ ಹಂತ.

### ಅ. ಆಹಾರ ಸಂಗ್ರಹಣೆಯ ಹಂತ

ಈ ಹಂತದಲ್ಲಿ ಮನುಷ್ಯರು ಗುಂಪು ಜೀವನವನ್ನು ನಡೆಸುತ್ತಿದ್ದರು. ಇದು ಮನುಕುಲದ ಆರಂಭಿಕ ಕಾಲವಾಗಿದ್ದು, ಇಲ್ಲಿ ಮನುಷ್ಯರು ಭೂಮಿಯ ಮೇಲೆ ತಾನಾಗಿಯೇ ಏನು ದೊರೆಯುತ್ತಿತ್ತೋ ಅದನ್ನು ಮಾತ್ರ ತಿಂದು ಬದುಕುಬೇಕಾದ ಅನಿವಾರ್ಯತೆ ಇತ್ತು. ಹಾಗಾಗಿ ಮನುಷ್ಯರು ಈ ಹಂತದಲ್ಲಿ ಆಹಾರಕ್ಕಾಗಿ ಸಂಪೂರ್ಣ ಪ್ರಕೃತಿಯನ್ನು ಅವಲಂಬಿಸಿದ್ದರು. ಕಾಡಿನಲ್ಲಿ ಅಲೆದಾಡಿ ಸಿಕ್ಕ ಗೆಡ್ಡೆ-ಗೆಣಸು, ಹಣ್ಣು-

ಹಂಪಲುಗಳನ್ನು ಸಂಗ್ರಹಿಸಿ ತಮ್ಮ ಹಸಿವು ನೀಗಿಸಿಕೊಳ್ಳುತ್ತಿದ್ದರು. ಜೊತೆಗೆ ಜಲಚರ ಪ್ರಾಣಿಗಳನ್ನು ಆಹಾರಕ್ಕಾಗಿ ಬಳಸುತ್ತಿದ್ದರು. ಕಾಲಾಂತರದಲ್ಲಿ ಬೇಟೆಯಾಡುವುದನ್ನು ಕಲಿತ ಮೇಲೆ ಕಾಡಿನ ಪ್ರಾಣಿ-ಪಕ್ಷಿಗಳನ್ನು ತಿಂದು ಬದುಕುತ್ತಿದ್ದರು. ತಾವು ಸಂಗ್ರಹಿಸಿದ ಆಹಾರವನ್ನು ಹಂಚಿಕೊಂಡು ತಿನ್ನುವ ರೂಢಿಯು ಇವರಲ್ಲಿತ್ತು.

**ಆ. ಆಹಾರ ಉತ್ಪಾದನೆಯ ಹಂತ**

ಮನುಷ್ಯರು ಸಾಧಿಸಿದ ಮೊಟ್ಟಮೊದಲ ಸಾಧನೆ ಎಂದರೆ ಕೃಷಿಯ ಆವಿಷ್ಕಾರ. ಈ ಮಹತ್ವದ ಬದಲಾವಣೆಯೇ ಮನುಷ್ಯರ ನಾಗರೀಕ ಜೀವನಕ್ಕೆ ಕಾರಣವಾಯಿತು. ಆಹಾರ ಸಂಗ್ರಹಣೆ ಹಾಗೂ ಪಶುಸಂಗೋಪನೆಗಳನ್ನು ಮಾಡುತ್ತಿದ್ದ ಮಾನವರು ಪ್ರಾಣಿಗಳಂತೆ ಋತುಗಳನ್ನು ಅನುಸರಿಸಿ ಸ್ಥಳದಿಂದ ಸ್ಥಳಕ್ಕೆ ಆಹಾರವನ್ನು ಅರಿಸುತ್ತಾ ಅಲೆಯುತ್ತಿದ್ದರು. ಹೀಗೆ ಅಲೆಮಾರಿಯಾಗಿದ್ದ ಮನುಷ್ಯರು ವ್ಯವಸಾಯವನ್ನು ರೂಢಿಸಿಕೊಂಡ ನಂತರ ಒಂದು ನಿರ್ದಿಷ್ಟ ಪ್ರದೇಶದಲ್ಲಿ ನೆಲೆಯೂರಲು ಪ್ರಾರಂಭಿಸಿದರು. ಉತ್ಪಾದನೆಯ ಕಲೆಯನ್ನು ಕರಗತ ಮಾಡಿಕೊಂಡ ಮೇಲೆ ಮನುಷ್ಯ ಜೀವಿಗಳ ಭೂಮಿಯನ್ನು ತಮ್ಮ ಹತೋಟಿಗೆ ತಂದುಕೊಂಡು ತಮಗೆ ಬೇಕಾದ ಬೆಳೆ ಬೆಳೆಯುವುದಕ್ಕೆ ಪ್ರಾರಂಭಿಸಿದರು.

ಕೃಷಿಯು ಮನುಷ್ಯನಿಗೆ ತುಂಬಾ ಪ್ರಾಚೀನ ಕಾಲದಿಂದಲೂ ಗೊತ್ತಿರುವ ಕಸುಬು. ಕೃಷಿಯ ಇತಿಹಾಸ ತುಂಬಾ ಪ್ರಾಚೀನವಾದುದು. ಹಳೆಯ ಶಿಲಾಯುಗದ ಮೊದಲು ಮನುಷ್ಯ ಆಹಾರ ಸಂಗ್ರಹಣೆ ಹಾಗೂ ಬೇಟೆಗಳಿಂದಲೇ ಜೀವಿಸುತ್ತಿದ್ದ. ಆದರೆ ನವಶಿಲಾಯುಗದ ಕಾಲಕ್ಕಾಗಲೇ ಮನುಷ್ಯರಿಗೆ ಕೃಷಿಯ ಪರಿಚಯವಾಗಿತ್ತು. 'ಭಾರತದಲ್ಲಿ ನವಶಿಲಾಯುಗ ಆರಂಭವಾದುದು ಕ್ರಿ.ಪೂ. ೬೦೦೦ದ ಸುತ್ತಿನಲ್ಲಿ' (ಆರ್.ಎಸ್. ಶರ್ಮ, ೧೯೯೭, ಪು.೪೦). ಆ ಕಾಲದಲ್ಲಿ ಮನುಷ್ಯ ಕಲ್ಲಿನ ಆಯುಧಗಳನ್ನು ಬಳಸುತ್ತಿದ್ದ. ಆಗ ಕೊಡಲಿಯ ಪರಿಚಯವೂ ಅವರಿಗಿತ್ತು ಎಂಬುದು ಆ ಕಾಲದಲ್ಲಿ ದೊರೆತ ವಿವಿಧ ಆಕಾರದ ಕೊಡಲಿಗಳಿಂದ ತಿಳಿದುಬರುತ್ತದೆ. ಕೃಷಿಯ ಆರಂಭಿಕ ಹಂತದಲ್ಲಿ ಈ ಆಯುಧಗಳು ಬಳಕೆಯಾಗುತ್ತಿದ್ದವು. ಅಲ್ಲದೆ ನವಶಿಲಾಯುಗದ ಕಾಲದಿಂದಲೇ ಕೃಷಿಯು ಆರಂಭವಾಯಿತು ಎಂಬುದಕ್ಕೆ ಚರಿತ್ರೆಯಲ್ಲಿ ನಮಗೆ ಕೆಲವು ನಿದರ್ಶನಗಳು ದೊರೆಯುತ್ತವೆ.

ಆರ್.ಎಸ್. ಶರ್ಮ (೧೯೯೭) ಅವರು, 'ಗೋದಾವರಿಯ ದಕ್ಷಿಣದಲ್ಲಿ ಬೆಟ್ಟಗಳ ಮೇಲೆ ಇಲ್ಲವೆ ನದಿ ತೀರದಲ್ಲಿ ವಾಸವಾಗಿದ್ದ ನವಶಿಲಾಯುಗದ ಒಂದು ಗುಂಪಿನ ಜನ ಕಲ್ಲು ಕೊಡಲಿಗಳು, ಕಲ್ಲು ಅಲಗುಗಳನ್ನು ಬಳಸುತ್ತಿದ್ದರು. ಇವರು ದನ, ಕುರಿ, ಮೇಕೆಗಳನ್ನು ಸಾಕುತ್ತಿದ್ದರು. ಅಲ್ಲದೆ ಬೀಸುವ ಕಲ್ಲನ್ನು ಉಪಯೋಗಿಸಿ ಹಿಟ್ಟು ಮಾಡುತ್ತಿದ್ದ ಕಾರಣ ಇವರಿಗೆ ಧಾನ್ಯಗಳ ಉತ್ಪಾದನೆ ತಿಳಿದಿರುತ್ತದೆಂದು ತಿಳಿಯಬಹುದು' (ಪು.೪೦) ಮತ್ತು 'ವಿಂಧ್ಯ ಪರ್ವತಗಳ ಉತ್ತರ ಇಳಿಜಾರಿನ ಮಿರ್ಜಾಪುರ ಮತ್ತು ಅಲಹಾಬಾದ್ ಜಿಲ್ಲೆಗಳಲ್ಲಿ ಕೆಲವು ನವಶಿಲಾಯುಗದ ನಿವೇಶನಗಳು ದೊರೆತಿದ್ದು, ಅಲಹಾಬಾದ್ ಜಿಲ್ಲೆಯ

ನಿವೇಶನಗಳಲ್ಲಿ ಕ್ರಿ.ಪೂ. ೬೦೦೦ದ ಸುತ್ತಿನಲ್ಲಿ ಭತ್ತದ ಕೃಷಿ ನಡೆಯುತ್ತಿತ್ತು' (ಪು.೪೦) ಎಂದು ಅಭಿಪ್ರಾಯಪಡುತ್ತಾರೆ. ಇವರ ಈ ವಿಚಾರದಿಂದ ನವಶಿಲಾಯುಗದ ಜನ ಕೃಷಿಯನ್ನು ಅರಿತವರಾಗಿದ್ದರು. ಅವರಿಗೆ ಧಾನ್ಯ ಬೆಳೆಯುವ ಕಲೆ ಕರಗತವಾಗಿತ್ತೆಂದು ತಿಳಿದು ಬರುತ್ತದೆ.

ಆರ್.ಎಸ್. ಶರ್ಮ ಅವರು ಪ್ರಸ್ತುತ ಪಡಿಸಿದ ಇನ್ನೂ ಕೆಲವು ವಿಚಾರಗಳಿಂದ ನವಶಿಲಾಯುಗದ ಜನ ಒಂದೆಡೆ ನೆಲೆನಿಂತು ಯಶಸ್ವಿ ನಾಗರೀಕ ಜೀವನ ನಡೆಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ಆ ವಿಚಾರಗಳು ಈ ರೀತಿಯಾಗಿವೆ. 'ನವಶಿಲಾಯುಗದ ಜನರೇ ಮೊದಮೊದಲು ಕೃಷಿಕರು ನೆಲವನ್ನು ಕಲ್ಲು ಪಿಕಾಸಿಗಳು ಹಾರೆಗಳಿಂದ ಹದಗೊಳಿಸುತ್ತಿದ್ದರು. ಬಲವಾದ ಕೋಲಿನಿಂದ ಕಾವು ತಯಾರಿಸಿ ಅದರ ಕೊನೆಯಲ್ಲಿ ಒಂದು ತೂಕವಾದ ಕಲ್ಲು ಜೋಡಿಸಿ ಹಾರೆಗಳನ್ನು ಮಾಡಿಕೊಳ್ಳುತ್ತಿದ್ದರು. ಇವರು ನಯ ಮಾಡಿದ ಕಲ್ಲು ಆಯುಧಗಳೊಂದಿಗೆ, ಕಲ್ಲಿನ ಸಣ್ಣ ಉಪಕರಣಗಳನ್ನೂ ಬಳಸುತ್ತಿದ್ದರು. ಲಾಳದ ಕಡ್ಡಿಗಳು ಮತ್ತು ಮಣ್ಣು ಬಳಸಿ ಆಯತಾಕಾರದ ಇಲ್ಲವೇ ದುಂಡನೆಯ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ದುಂಡನೆಯ ಮನೆಗಳಲ್ಲಿ ವಾಸಿಸುತ್ತಿದ್ದ ಜನ ಸಾಮೂಹಿಕ ಆಸ್ತಿ ಪಡೆದಿದ್ದರೆಂದು ನಂಬಲಾಗಿದೆ. ಅಂತೂ ಅವರು ಒಂದೇ ಜಾಗದಲ್ಲಿ ಸ್ಥಿರವಾಗಿ ನೆಲೆಸಿದ್ದ ಜನರಾಗಿದ್ದು, ರಾಗಿ, ಹುರುಳಿಗಳನ್ನು ಬೆಳೆಯುತ್ತಿದ್ದರು. ಅಂತೆಯೇ ಮೆಹರ್‌ಘರನ ಜನ ಗೋಧಿ ಮತ್ತು ಹತ್ತಿ ಬೆಳೆಯುತ್ತಿದ್ದು, ಮಣ್ಣಿನ ಇಟ್ಟಿಗೆಗಳಿಂದ ಕಟ್ಟಿದ ಮನೆಗಳಲ್ಲಿ ವಾಸಿಸುತ್ತಿದ್ದರು.

ಕ್ರಿ.ಪೂ. ೯೦೦೦ ದಿಂದ ೩೦೦೦ದ ಅವಧಿಯಲ್ಲಿ ಪಶ್ಚಿಮ ಏಷ್ಯಾದಲ್ಲಿ ಜನರು ಕೃಷಿ, ನೇಯ್ಗೆ, ಕುಂಬಾರಿಕೆ, ಮನೆಗಳ ನಿರ್ಮಾಣ, ಪಶುಪಾಲನೆಗಳನ್ನು ಅಭಿವೃದ್ಧಿಪಡಿಸಿಕೊಂಡು ಅಪಾರ ಪ್ರಗತಿ ಸಾಧಿಸಿದರು. 'ಭಾರತದಲ್ಲಿ ನವಶಿಲಾಯುಗದ ಕಾಲದಲ್ಲಿ ಅಕ್ಕಿ, ಗೋಧಿ, ಬಾರ್ಲಿ ಮುಂತಾದವುಗಳ ಕೃಷಿ ಆರಂಭವಾಗಿ ಹಳ್ಳಿಗಳು ಹುಟ್ಟಿಕೊಂಡಿದ್ದವು. ಜನ ನಾಗರೀಕತೆಯ ಹೊಸ್ತಿಲಿಗೆ ಬಂದಂತಾಯಿತು' (ಅದೇ. ಪು. ೪೧-೪೨). ಈ ಮೇಲಿನ ಸಂಗತಿಗಳಿಂದ ನವಶಿಲಾಯುಗದ ಕಾಲಕ್ಕೆ ಕೃಷಿಯು ಇತ್ತು ಎಂಬುದು ತಿಳಿದುಬರುತ್ತದೆ.

### ೩.೧ ಕೃಷಿಗೆ ಮಹಿಳೆಯ ಕೊಡುಗೆ

ಕೃಷಿಗೂ-ಮಹಿಳೆಗೂ ಅವಿನಾಭಾವ ಸಂಬಂಧವಿದೆ. ನೇರವಾಗಿ ಇಲ್ಲವೆ ಪರೋಕ್ಷವಾಗಿ ಮಹಿಳೆ ಕೃಷಿಯೊಂದಿಗೆ ಒಡನಾಟವನ್ನು ಹೊಂದಿದವಳಾಗಿದ್ದಾಳೆ. ಏಕೆಂದರೆ ನಮ್ಮಲ್ಲಿ 'ಬೇಸಾಯ ನಾ ಸಾಯ ನೀ ಸಾಯ ಮನೆಮಂದಿ ಎಲ್ಲ ಸಾಯ' ಎಂಬ ಗಾದೆ ಮಾತೊಂದಿದೆ. ಇದು ಕೃಷಿಕರ ಶ್ರಮದ ಬಗೆಗೆ ಹೇಳುವಂತಹ ಮಾತಾದರೂ ಈ ಗಾದೆ ಮಾತು ಕೃಷಿ ಎನ್ನುವುದು ಮನೆಗೆ ಸಂಬಂಧಿಸಿದ ಪ್ರಕ್ರಿಯೆಯಾಗಿದೆ ಎಂಬುದನ್ನು ಧ್ವನಿಸುತ್ತದೆ. ಒಂದು ಮನೆ ಎಂದರೆ ಅದು ಆ ಮನೆಯ ಗಂಡು, ಹೆಣ್ಣು ಮತ್ತು ಮಕ್ಕಳನ್ನು ಒಳಗೊಂಡಿರುವಂತಹದ್ದು. ಹಾಗಾಗಿ ಕೃಷಿ ಎನ್ನುವುದು ಮನೆಗೆ ಸಂಬಂಧಿಸಿದ ಪ್ರಕ್ರಿಯೆ ಎನ್ನುವುದಾದರೆ ಅದು ಆ ಮನೆಯ ಸದಸ್ಯರೆಲ್ಲರಿಗೂ ಸಂಬಂಧಿಸಿದ ಪ್ರಕ್ರಿಯೆಯೇ ಆಗಿದೆ. ಅಂದರೆ ಇಲ್ಲಿ

ಕುಟುಂಬದೊಳಗಿನ ಪುರುಷ, ಮಹಿಳೆ, ಮಕ್ಕಳೆಲ್ಲರೂ ಒಂದಲ್ಲಾ ಒಂದು ರೀತಿಯಲ್ಲಿ ಕೃಷಿಯಲ್ಲಿ ಭಾಗಿಯಾಗುತ್ತಾರೆ ಎಂಬುದನ್ನು ಹೇಳಲಾಗಿದೆ. ಕೃಷಿಯಲ್ಲಿ ಮಹಿಳೆಯೂ ಭಾಗಿಯಾಗಿದ್ದಾಳೆ ಎಂಬುದಕ್ಕೆ ಈ ಮಾತೊಂದೆ ಸಾಕೆನಿಸುತ್ತದೆ.

ಮನುಷ್ಯ ಬೇಟೆಯ ಕಲೆಯನ್ನು ಕಲಿಯುವುದಕ್ಕೆ ಮುಂಚೆ ಮನುಷ್ಯರು ಗುಂಪು ಜೀವನ ನಡೆಸುತ್ತಿದ್ದರು. ಆಗ ಸ್ತ್ರೀಪುರುಷರ ನಡುವೆ ಕೆಲಸದ ವಿಭಜನೆಯೇನು ಆಗಿರಲಿಲ್ಲ. ಎಲ್ಲರೂ ಗೆಡ್ಡೆ-ಗೆಣಸು, ಹಣ್ಣು-ಹಂಪಲಗಳನ್ನು ಸಂಗ್ರಹಿಸುವ ಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಿದ್ದರು. ಆದರೆ ಮನುಷ್ಯ ಬೇಟೆಯ ಕಲೆಯನ್ನು ಕಲಿತ ಮೇಲೆ ಕಾಡಿನಲ್ಲಿ ಬೇಟೆಗಾಗಿ ಅಲೆಯುವ ಕೆಲಸ ಪುರುಷನದ್ದಾಯಿತು. ಸ್ತ್ರೀಯು ಮಕ್ಕಳ ಲಾಲನೆ ಪಾಲನೆಯ ಜವಾಬ್ದಾರಿಯನ್ನು ಹೊತ್ತಿದ್ದರಿಂದ ತಮ್ಮ ವಸತಿಯ ಸುತ್ತಮುತ್ತಲೇ ಆಹಾರ ಸಂಗ್ರಹಣೆಯ ಪ್ರಯತ್ನ ನಡೆಸುತ್ತಿದ್ದರು ಎಂದು ಅನೇಕ ವಿದ್ವಾಂಸರು ಊಹಿಸಿದ್ದಾರೆ.

ಕೃಷಿಯ ಆರಂಭದ ದಿನಗಳನ್ನು ಗಮನಿಸಿದರೆ ಕೃಷಿಗೆ ಸಂಬಂಧಪಟ್ಟಂತೆ ಮಹಿಳೆಯ ಪಾತ್ರ ಬಹಳ ಮಹತ್ವವಾದದ್ದು. ಏಕೆಂದರೆ ವ್ಯವಸಾಯಕ್ಕೆ ನಾಂದಿ ಹಾಡಿದವಳೇ ಹೆಣ್ಣು. ಹಾಗಾಗಿ ಮನುಷ್ಯನ ಅಲೆಮಾರಿತನದ ಬದುಕನ್ನು ಒಂದೆಡೆ ನೆಲೆ ನಿಲ್ಲುವಂತೆ ಮಾಡಿದವಳೇ ಹೆಣ್ಣು ಎಂದು ಹೇಳಬಹುದು. 'ಗೆಡ್ಡೆ-ಗೆಣಸು ಸಂಗ್ರಹಣೆಯ ಸಂದರ್ಭದಲ್ಲಿಯೇ ಸ್ತ್ರೀಯರು ಕೃಷಿ ಕೆಲಸದ ಆವಿಷ್ಕಾರ ಮಾಡಿದರು. ಅವರು ಹೇಗೆ ಈ ಕೃಷಿ ಕಾರ್ಯವನ್ನು ಕಂಡು ಹಿಡಿದರೆನ್ನುವುದನ್ನು ಈಗಿನ ದಿನಗಳಲ್ಲಿ ನಾವು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ. ಕಾಡಿನಲ್ಲಿ ಹಣ್ಣುಹಂಪಲು ಇತ್ಯಾದಿಗಳನ್ನು ಸಂಗ್ರಹಿಸುವ ಸಂದರ್ಭದಲ್ಲಿ ಸ್ತ್ರೀಯರು ಕಾಲಾನುಕ್ರಮದಲ್ಲಿ ತಾವು ಅಲ್ಲಲ್ಲಿ ಎಸೆದಿದ್ದ ಬೀಜಗಳು ಮೊಳಕೆಯೊಡೆದು ಮೊಳಕೆಯಿಂದ ಸಸಿ ಬೆಳೆದುದನ್ನು ಕಂಡರು. ಈ ಜ್ಞಾನವೇ ಕೃಷಿಯ ಆವಿಷ್ಕಾರಕ್ಕೆ ಮೊದಲ ಹೆಜ್ಜೆಯಾಗಿರಬಹುದು' (ದೇವಿಪ್ರಸಾದ ಚಟ್ಟೋಪಾಧ್ಯಾಯ, ೧೯೯೭, ಪು. ೨೩). ಕೃಷಿ ಆವಿಷ್ಕಾರ ಹೀಗಾಗಿರಬಹುದು ಎಂದು ಊಹಿಸಿದಂತೆ ಸ್ತ್ರೀ ಕೃಷಿಯನ್ನು ಆವಿಷ್ಕರಿಸಿದ ಕಾಲಘಟ್ಟವನ್ನು ನಾವು ಗುರುತಿಸಿಕೊಳ್ಳಬಹುದು. 'ಆಹಾರ ಸಂಗ್ರಹಣೆಯ ಹಂತ ಹೊಸ ಶಿಲಾಯುಗದ ಆರಂಭದೊಂದಿಗೆ ಕೊನೆಗೊಳ್ಳುತ್ತದೆ' (ಬಾಲಗೋಪಾಲ್ ಕೆ., ೧೯೯೮, ಪು. ೨೭). ಅಂದರೆ ಹೊಸ ಶಿಲಾಯುಗದ ಆರಂಭದೊಂದಿಗೆ ಆಹಾರ ಉತ್ಪಾದನೆಯ ಕ್ರಮ ಬೆಳೆದು ಬಂದಿತು ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಮಹಿಳೆಯೇ ಕೃಷಿ ಆವಿಷ್ಕಾರ ಮಾಡಿದ್ದು ಎನ್ನುವುದಾದರೆ, ನವಶಿಲಾಯುಗದ ಕಾಲಕ್ಕೆ ಸ್ತ್ರೀಯಿಂದ ಕೃಷಿ ಆವಿಷ್ಕಾರವಾಯಿತೆಂದು ಹೇಳಬಹುದು.

ಅಂತೆಯೇ ಸ್ತ್ರೀಯರೇ ಕೃಷಿಯ ಆವಿಷ್ಕಾರಕರು ಎನ್ನುವುದಕ್ಕೆ ರಾಬರ್ಟ್ ಬ್ರಿಫಾಲ್ಟ್ ಎನ್ನುವ ವಿದ್ವಾಂಸ ದಂತಕಥೆಗಳ ಉದಾಹರಣೆಯನ್ನು ಕೊಟ್ಟಿದ್ದಾರೆ. 'ಅಮೇರಿಕಾದಲ್ಲಿನ ಒಂದು ಆದಿವಾಸಿ ಗುಂಪಿನ ಹೆಸರು ಚೆರೋಕಿ. ಅವರ ಒಂದು ದಂತಕಥೆಯ ಪ್ರಕಾರ ಒಬ್ಬ ಸ್ತ್ರೀ ಅರಣ್ಯದಲ್ಲಿ ಮೊದಲು ಸಸ್ಯವನ್ನು ಹುಡುಕಿದಳು. ಸಾಯುವಾಗ ಆ ಸ್ತ್ರೀ ತಾನು ಸತ್ತ ಮೇಲೆ ತನ್ನ ದೇಹವನ್ನು ನೆಲದ ಮೇಲಿಂದ ಎಳೆದುಕೊಂಡು

ಹೋಗಬೇಕೆಂದು ಹೇಳಿದ್ದಳು. ಅವಳ ದೇಹ ಎಲ್ಲೆಲ್ಲಿ ನೆಲವನ್ನು ಸ್ಪರ್ಶಿಸಿದ್ದಿತೋ ಅಲ್ಲೆಲ್ಲಾ ಬೆಳೆ ಸಮೃದ್ಧಿಯಾಗಿ ಬೆಳೆದಿದ್ದಿತು' (ಅದೇ, ಪು. ೨೫-೨೬) ಎಂಬ ವಿವರಗಳನ್ನು ದಂತಕಥೆ ಒಳಗೊಡಿದೆ. ಅಂದರೆ ಕೃಷಿಯ ಹುಟ್ಟಿಗೆ ಸ್ತ್ರೀಯೇ ಕಾರಣಕರ್ತೆಗಳು ಎನ್ನುವುದನ್ನು ಈ ದಂತಕಥೆಯು ಧ್ವನಿಸುತ್ತದೆ.

ಅದೇ ರೀತಿಯಾಗಿ 'ಹರಪ್ಪ ಸಂಸ್ಕೃತಿಯಲ್ಲಿ ಒಂದು ಕುತೂಹಲಕರವಾದ ಮುದ್ರೆ ದೊರೆತಿದ್ದು, ಇದು ಕೃಷಿ ದೃಶ್ಯಕ್ಕೆ ಸಂಬಂಧಿಸಿದ್ದಾಗಿದೆ. ಈ ಮುದ್ರಿಕೆಯಲ್ಲಿ ಒಂದು ಸ್ತ್ರೀ ವಿಗ್ರಹವಿದ್ದು, ಆಕೆಯ ಗರ್ಭದಿಂದ ಒಂದು ಸಸ್ಯವು ಹುಟ್ಟುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಇನ್ನೊಂದು ಬದಿಯಲ್ಲಿ ಸ್ತ್ರೀ ಪುರುಷರ ಚಿತ್ರಗಳಿವೆ. ಒಬ್ಬ ಮನುಷ್ಯನು ನೇಗಿಲಿನಂಥ ಆಯುಧವನ್ನು ಹಿಡಿದಿದ್ದಾನೆ. ಈ ಚಿತ್ರದಲ್ಲಿರುವ ಮನುಷ್ಯ ಉಳುಮೆ ಮಾಡುವ ರೈತನೆಂದು ಭಾವಿಸಲಾಗಿದೆ. ಗರ್ಭದಿಂದ ಸಸ್ಯವು ಹೊಮ್ಮುತ್ತಿರುವ ಸ್ತ್ರೀ ಚಿತ್ರವನ್ನು ಮಾತೃದೇವತೆಯೆಂದು ಹೇಳಲಾಗಿದೆ. ಈಕೆಯನ್ನು ಶಾಕಾಂಬರಿ ಎಂದು ಗುರುತಿಸುತ್ತಾರೆ. ಹೀಗೆ ಸಸ್ಯ ಸಂಬಂಧಿಯಾದ ದೇವತೆಯ ಇನ್ನೊಂದು ಮುದ್ರಿಕೆಯು ಹರಪ್ಪಾ ಸಂಸ್ಕೃತಿಯಲ್ಲೇ ದೊರಕಿದೆ. ಈ ಚಿತ್ರ ಒಂದು ಹೆಣ್ಣಿನದಾಗಿದ್ದು ಈಕೆ ಒಂದು ವೃಕ್ಷದ ಎರಡು ಕೊಂಬೆಗಳ ನಡುವೆ ನಿಂತಿದ್ದಾಳೆ. ಒಬ್ಬ ಭಕ್ತನು ಮರದ ಪಕ್ಕದಲ್ಲಿ ಬಾಗಿ ನಿಂತಿದ್ದಾನೆ. ಒಂದು ಮೇಕೆಯು ಭಕ್ತನ ಹಿಂದೆ ನಿಂತಿದೆ. ಇದರ ಕೆಳಭಾಗದಲ್ಲಿ ಏಳು ವಿಗ್ರಹಗಳನ್ನು ಕಾಣಬಹುದು. ಈ ಚಿತ್ರದ ಹೆಣ್ಣಿನ ವಿಗ್ರಹವನ್ನು ಮಾತೃದೇವತೆಯೆಂದು ಭಾವಿಸಲಾಗಿದೆ' (ಉದ್ಧೃತ; ಬೋರಲಿಂಗಯ್ಯ ಹಿ.ಚಿ., ೨೦೦೦, ಪು. ೧೦೬).

ಈ ಮೇಲಿನ ವಿವರಗಳು ಕೃಷಿಗೂ ಮಹಿಳೆಗೂ ಇದ್ದ ಸಂಬಂಧವನ್ನು ಸೂಚ್ಯವಾಗಿ ತಿಳಿಸುತ್ತವೆ. ಅಲ್ಲದೆ ಸಸ್ಯಗಳ ಹುಟ್ಟಿಗೆ ಮಹಿಳೆಯೇ ಕಾರಣ ಎನ್ನುವುದನ್ನು, ಸ್ತ್ರೀಯ ಗರ್ಭದಿಂದ ಸಸ್ಯವು ಹುಟ್ಟಿದಂತೆ ಚಿತ್ರಿಸಲಾದ ಈ ಮುದ್ರಿಕೆಯು ಸ್ಪಷ್ಟಪಡಿಸುತ್ತದೆ. ಅಂತೆಯೇ ಒಂದು ವೃಕ್ಷದ ಎರಡು ಕೊಂಬೆಗಳ ನಡುವೆ ಒಂದು ಹೆಣ್ಣು ನಿಂತಿರುವಂತೆ ಮುದ್ರಿಕೆಯೊಳಗೆ ಚಿತ್ರಿಸಿದ ಚಿತ್ರ ಕೂಡಾ ಸಸ್ಯಗಳ ಬೆಳವಣಿಗೆಗೂ ಮಹಿಳೆಗೂ ಯಾವುದೋ ಬಗೆಯ ಸಂಬಂಧವಿದೆ ಎನ್ನುವುದನ್ನು ತಿಳಿಸುತ್ತದೆ. ಏಕೆಂದರೆ ಆದಿಮ ಮನುಷ್ಯ ರಚಿಸುತ್ತಿದ್ದ ಚಿತ್ರಕಲೆ, ಭಿತ್ತಿಚಿತ್ರಗಳಲ್ಲಿ ಅವರ ಬದುಕನ್ನು ಹೊರತುಪಡಿಸಿದ ಸಂಗತಿಗಳೇನಾಗಿರಲಿಲ್ಲ. ಅವರ ಸುತ್ತಮುತ್ತಲಿನ ಪರಿಸರದಲ್ಲಿ ಏನನ್ನು ಕಾಣುತ್ತಿದ್ದರೋ ಅದನ್ನೇ ಅವರು ತಮ್ಮ ಕಲೆಯಲ್ಲಿ ಅಭಿವ್ಯಕ್ತಿಸುತ್ತಿದ್ದರು. ಹಾಗಾಗಿ ಈ ಮುದ್ರಿಕೆಯೊಳಗಿನ ಚಿತ್ರಗಳು ಕೃಷಿಯೊಟ್ಟಿಗೆ ಮಹಿಳೆಗಿದ್ದ ಸಂಬಂಧದ ಬಗೆಗಿನ ಪರಿಕಲ್ಪನೆಯ ಹಿನ್ನೆಲೆಯಲ್ಲಿಯೇ ರೂಪುಗೊಂಡಿರುವ ಸಾಧ್ಯತೆ ಇದೆ.

ಹಾಗೆಯೇ ಕೃಷಿಯಲ್ಲಿ ಮಹಿಳೆ ಬಹುಕಾಲದಿಂದಲೂ ಕಾರ್ಯನಿರ್ವಹಿಸುತ್ತಿದ್ದಳು ಎನ್ನುವುದಕ್ಕೆ ಪ್ರಾಚೀನ ಗ್ರಂಥಗಳಾದ ರಾಮಾಯಣ, ಮಹಾಭಾರತಗಳಲ್ಲಿ ಕೆಲವು ಉಲ್ಲೇಖಗಳು ಸಿಗುತ್ತವೆ ಎಂದು ಕೆಲವು ವಿದ್ವಾಂಸರು ಹೇಳಿದ್ದಾರೆ. 'ಭಾರತದಲ್ಲಿ ಮಹಿಳೆ ಕೃಷಿಗೆ ಅಂಟಿಕೊಂಡೇ ಬೆಳೆದು ಬಂದಿದ್ದಾಳೆ. ಮಹಿಳೆಗೂ ಮಣ್ಣಿಗೂ ಬಿಗಿಯಾದ ನಂಟಿರುವುದು ರಾಮಾಯಣ, ಮಹಾಭಾರತ ಗ್ರಂಥಗಳಲ್ಲಿ ಕಾಣಬಹುದು.

ಜನಕ ಮಹಾರಾಜ ತನ್ನ ಪತ್ನಿಯೊಂದಿಗೆ ಚಿನ್ನದ ನೇಗಿಲಿನಿಂದ ಭೂಮಿಯನ್ನು ಉಳುತ್ತಿದ್ದಾನೆಂದು ರಾಮಾಯಣದಲ್ಲಿ ತಿಳಿಸಲಾಗಿದೆ' (ಡಿ.ವೆಂಕಟರಾವ್, ೧೯೮೬, ಪು.೧೯೦). ಅಂತೆಯೇ ಪ್ರಾಚೀನ ಗ್ರಂಥಗಳಲ್ಲೂ ಮಹಿಳೆ ಪುರುಷನಿಗೆ ಸರಿಸಮವಾಗಿ ದುಡಿಯುತ್ತಿದ್ದಳು ಎಂಬ ಉಲ್ಲೇಖಗಳಿವೆ. 'ಕಾಳಿದಾಸ ತನ್ನ ರಘುವಂಶ ಕಾವ್ಯದಲ್ಲಿ ಮಹಿಳೆ ಕಬ್ಬು, ಭತ್ತದ ಗದ್ದೆಗಳಲ್ಲಿ ಇಂಪಾಗಿ ಹಾಡುತ್ತಿದ್ದ ಬಗ್ಗೆ ಹೇಳಿದ್ದಾನೆ. ಮೇಘದೂತದಲ್ಲಿ ಹೆಣ್ಣಿನ ಹಿರಿಮೆಯನ್ನು ಮನೋಜ್ಞವಾಗಿ ಚಿತ್ರಿಸಿದ್ದಾನೆ. ಕಾಲಕ್ಕೆ ಸರಿಯಾಗಿ ಕೃಷಿ ಕಾರ್ಯಗಳನ್ನು ಕೈಗೊಳ್ಳುವುದು, ಉತ್ತಮ ಬೆಳೆ ಪಡೆಯುವುದು ಇತ್ಯಾದಿಗಳಲ್ಲಿ ಮಹಿಳೆಯೂ ಪುರುಷನಷ್ಟೇ ಆಸಕ್ತಿವಹಿಸಬಲ್ಲಳು ಎಂದು ಕಾಳಿದಾಸ ಹೇಳಿದ್ದಾನೆ' (ಅದೇ, ಪು.೧೯೧) ಎಂಬ ಮಾಹಿತಿಗಳು ದೊರೆಯುತ್ತವೆ. ಡಿ. ವೆಂಕಟರಾವ್ ಅವರೇ ಭಾರತದಲ್ಲಿ ಮಹಿಳೆ ಕೃಷಿಯಲ್ಲಿ ಪುರುಷನೊಂದಿಗೆ ಬಹುವಾಗಿ ಸಹಕರಿಸಿದಳು ಎಂಬ ಬಗ್ಗೆ ಮತ್ತೊಂದೆಡೆ ಹೀಗೆ ಹೇಳಿದ್ದಾರೆ; 'ಪುರಾತನ ಕಲೆಗಳಲ್ಲಿ ಅನೇಕ ಕಲಾ ಕುಸುರಿಗಳು ಇದಕ್ಕೊಂದು ಉದಾಹರಣೆಯಾಗಿವೆ. ಜೈನರ ಕೃತಿಗಳಲ್ಲೂ ಮಹಿಳೆಯರು ಹೊಲದಲ್ಲಿ ಹಾಡು ಹೇಳುತ್ತಾ ಗಲಾಟೆ ಮಾಡುತ್ತಾ ಮೃಗ ಪಕ್ಷಿಗಳನ್ನು ಓಡಿಸುತ್ತಿದ್ದಳು ಎಂದು ಹೇಳಲಾಗಿದೆ' (ಅದೇ, ಪು.೧೯೧) ಎಂದಿರುವರು.

ಮೇಲಿನ ಈ ಎಲ್ಲ ವಿವರಗಳಿಂದ ಕೃಷಿಯಲ್ಲಿ ಮಹಿಳೆ ಬಹುಹಿಂದಿನಿಂದಲೂ ತೊಡಗಿಕೊಂಡು ಬಂದಿದ್ದಾಳೆ ಎಂಬುದು ಸ್ಪಷ್ಟವಾಗುತ್ತದೆ. ಹಾಗಾಗಿ ಶತಮಾನಗಳಿಂದ ಕೃಷಿಯಲ್ಲಿ ದುಡಿಯುತ್ತಲೇ ಬಂದ ಮಹಿಳೆ ಕೃಷಿಗೆ ನೀಡಿದ ಕೊಡುಗೆ ಅಪಾರವಾದದ್ದೆಂದು ಹೇಳಿದರೆ ಉತ್ಪ್ರೇಕ್ಷೆಯಾಗಲಾರದು.

ಅಂತೆಯೇ ಸಮಕಾಲೀನ ಸಂದರ್ಭದಲ್ಲಿ ಕೃಷಿಯ ಬಹುಪಾಲು ಚಟುವಟಿಕೆಗಳಲ್ಲಿ ಮಹಿಳೆಯು ಭಾಗಿಯಾಗಿರುವುದನ್ನು ನಾವು ನೋಡುತ್ತೇವೆ (ಈ ವಿಷಯದ ಬಗೆಗೆ ಅಧ್ಯಾಯ ೭ ರಲ್ಲಿ ವಿವರವಾಗಿ ಚರ್ಚಿಸಲಾಗಿದೆ). ಅಲ್ಲದೆ ಇಂದಿಗೂ ಕೆಲವು ಬುಡಕಟ್ಟುಗಳಲ್ಲಿ ಕೃಷಿಯನ್ನು ಮಹಿಳೆಯರೇ ನಿರ್ವಹಿಸುತ್ತಿರುವುದನ್ನು ನಾವು ಕಾಣುತ್ತೇವೆ. ಒಟ್ಟಿನಲ್ಲಿ ಕೃಷಿಯ ಆವಿಷ್ಕಾರ ಮನುಷ್ಯ ಇತಿಹಾಸವು ಒಂದು ಮಹತ್ವದ ಮೈಲುಗಲ್ಲು. ಕೃಷಿಯ ಆವಿಷ್ಕಾರವೇ ನಾಗರೀಕತೆಯ ಬುನಾದಿ ಎಂದು ನಾವು ಒಪ್ಪುವುದಾದರೆ, ಕೃಷಿಯ ಆವಿಷ್ಕಾರಕಳು ಮಹಿಳೆಯೇ ಆಗಿದ್ದರಿಂದ ಮನುಷ್ಯ ನಾಗರೀಕ ಹಂತದತ್ತ ಹೆಜ್ಜೆಯಿಡುವುದಕ್ಕೆ ಮುಖ್ಯ ಕಾರಣ ಮಹಿಳೆಯೇ ಆಗಿದ್ದಾಳೆ ಎಂಬುದು ನಿಸ್ಸಂಶಯ. ಅಲ್ಲದೆ ಇವತ್ತಿನ ವಿಸ್ತೃತವಾದ, ವ್ಯವಸ್ಥಿತವಾದ ಬೇಸಾಯ ಪದ್ಧತಿಗೆ ಮಹಿಳೆ ಅಂದು ಕೃಷಿಯನ್ನು ಶೋಧಿಸಿದ್ದೆ ಮಹತ್ವದ ಕೊಡುಗೆಯಾಗಿದೆ.

### ೩.೨ ಕೃಷಿಯ ಆರಂಭಿಕ ಹಂತದಲ್ಲಿ ಮಹಿಳೆಯ ಸ್ಥಾನಮಾನಗಳು

ಮಾರ್ಗನ್, ಟೇಲರ್ ಹಾಗೂ ಸ್ಪೆನ್ಸರ್‌ರಂತಹ ಮಾನವಶಾಸ್ತ್ರಜ್ಞರು ಸಮಾಜ ವಿಕಾಸದ ಪ್ರಾಚೀನ ಕಾಲದಲ್ಲಿ ಮಾತೃಪ್ರಧಾನ ಕುಟುಂಬ ಅಸ್ತಿತ್ವದಲ್ಲಿತ್ತೆಂದು ಮತ್ತು ಮಾತೃಪ್ರಧಾನ ಕುಟುಂಬವೇ ಕುಟುಂಬದ

ಮೂಲರೂಪವೆಂದು ಅಭಿಪ್ರಾಯಪಡುತ್ತಾರೆ. ಹಾಗಾಗಿ ಕೃಷಿಯ ಆರಂಭಿಕ ಹಂತದಲ್ಲಿ ಮಾತೃಪ್ರಧಾನ ವ್ಯವಸ್ಥೆ ಇತ್ತೆಂಬುದು ತಿಳಿದು ಬರುತ್ತದೆ. ಆದಿವಾಸಿಗಳಿಗೆ ಪಿತೃತ್ವದ ಬಗೆಗೆ ಸರಿಯಾದ ತಿಳುವಳಿಕೆ ಇರಲಿಲ್ಲ. ಸಂತಾನದ ವಿಷಯದಲ್ಲಿ ಪುರುಷನ ಪಾತ್ರವಿದೆ ಎಂಬ ಅರಿವು ಅವರಿಗಿರಲಿಲ್ಲ. ಸ್ತ್ರೀಯರ ತಾಯ್ತನಕ್ಕೆ ದೇವರ ಅನುಗ್ರಹವೇ ಕಾರಣವೆಂದೋ ಇಲ್ಲವೆ ಗರ್ಭಧರಿಸಿ ಮಗುವಿಗೆ ಜನ್ಮ ನೀಡುವುದು ಸ್ತ್ರೀಯರಲ್ಲಿರುವ ಅದ್ಭುತ ಶಕ್ತಿಯೆಂದೋ ಭಾವಿಸಿದ್ದರು. ಹಾಗಾಗಿ ಪುರುಷರಿಗೆ ಆ ಕಾಲದಲ್ಲಿ ಸ್ತ್ರೀಯ ಬಗೆಗೆ ಅಪಾರ ಗೌರವ ಭಾವನೆಗಳು ಇದ್ದವು. ಅಲ್ಲದೆ ತಾವು ಆರಾಧಿಸುತ್ತಿದ್ದ ದೈವಗಳನ್ನು ಸಹ ಸ್ತ್ರೀಯ ರೂಪದಲ್ಲಿಯೇ ಆರಾಧಿಸುತ್ತಿದ್ದರು.

ಕೃಷಿಯ ಆರಂಭಿಕ ಹಂತದಲ್ಲಿ ಮಾತೃಪ್ರಧಾನ ವ್ಯವಸ್ಥೆ ಇದ್ದುದರಿಂದ ತಾಯಿಯೇ ಮನೆಯ ಒಡತಿಯಾಗಿದ್ದಳು. ಎಲ್ಲ ವಿಷಯದಲ್ಲಿ ಸ್ತ್ರೀಗೆ ಹೆಚ್ಚಿನ ಪ್ರಾಮುಖ್ಯತೆ ಇತ್ತು. ಆಗ ಸಾಮೂಹಿಕ ಲೈಂಗಿಕತೆ ರೂಢಿಯಲ್ಲಿತ್ತು. ಹಾಗಾಗಿ ಹುಟ್ಟುವ ಮಕ್ಕಳನ್ನು ಸ್ತ್ರೀ ಮೂಲಕವೇ ಗುರುತಿಸಲಾಗುತ್ತಿತ್ತು. ಪುರುಷ ಬೇಟೆಯಾಡುವ ಕ್ರಿಯೆಯಲ್ಲಿ ತೊಡಗಿದ್ದರಿಂದ ಬೇಟೆಗಾಗಿ ಆತ ಕಾಡುಮೇಡು ಅಲೆಯುವ ಅಲೆಮಾರಿಯಾಗಿದ್ದ. ಬೇಟೆಗೆಂದು ಎಲ್ಲಿಯೋ ಹೋಗಿ ಮತ್ತ್ಯಾವಾಗಲೋ ಬರುತ್ತಿದ್ದ. ಒಟ್ಟಿನಲ್ಲಿ ಅವನ ಬರುವಿಕೆ ಅನಿಶ್ಚಿತತೆಯಿಂದ ಕೂಡಿತ್ತು. ಹಾಗಾಗಿ ಪುರುಷ ಕುಟುಂಬದಲ್ಲಿ ಬಂದು ಹೋಗುವ ಅತಿಥಿಯಾಗಿದ್ದ. ಮಕ್ಕಳ ಲಾಲನೆ-ಪಾಲನೆ ಪೋಷಣೆಯ ಹೊಣೆಗಾರಿಕೆ ಮಹಿಳೆಯ ಮೇಲೆಯೇ ಇರುತ್ತಿತ್ತು. ಆಹಾರ ಸಂಗ್ರಹಿಸುವಲ್ಲಿ ಮತ್ತು ಆಹಾರ ಶೇಖರಿಸುವಲ್ಲಿ ಮಹಿಳೆ ಪಾಲ್ಗೊಳ್ಳುತ್ತಿದ್ದಳು. ಹಾಗಾಗಿ ಕುಟುಂಬದ ಆಹಾರ ಪೂರೈಕೆಯಲ್ಲಿ ಮಹಿಳೆ ಪ್ರಮುಖ ಪಾತ್ರವಹಿಸುತ್ತಿದ್ದಳು. ಏಕೆಂದರೆ ಪುರುಷ ಬೇಟೆಯಿಂದ ತಂದ ಮಾಂಸ ತಾತ್ಕಾಲಿಕ ಹಸಿವು ನೀಗಿಸುತ್ತಿತ್ತು. ಆದರೆ ಮಹಿಳೆಯಿಂದ ಸಂಗ್ರಹಿಸಿಟ್ಟ ಆಹಾರ ಪದಾರ್ಥಗಳಿಂದ ಗೆಡ್ಡೆ-ಗೆಣಸುಗಳು ಬಹಳ ಕಾಲದವರೆಗೆ ಇರುತ್ತಿದ್ದರಿಂದ ಅವರ ಹಸಿವು ನೀಗಿಸುವಲ್ಲಿ ಹೆಚ್ಚು ಅನುಕೂಲವಾಗಿದ್ದವು. ಅಲ್ಲದೆ ಅಂದಿನ ಉತ್ಪಾದನಾ ವಿಧಾನ ಅತ್ಯಲ್ಪವಾಗಿರುತ್ತಿದ್ದರಿಂದ ಅದನ್ನು ಶ್ರಮವಹಿಸಿ ಅಗತ್ಯಾನುಸಾರ ಹಂಚುವ ಕೆಲಸ ಮಹಿಳೆಯದೇ ಆಗಿರುತ್ತದೆ ಎಂದು ಡಿ.ಡಿ. ಕೋಸಂಬಿಯವರು ಅಭಿಪ್ರಾಯ ಪಡುತ್ತಾರೆ. ಅಂತೆಯೇ ಆಗ ಉತ್ಪಾದಿಸಿದ್ದೆಲ್ಲವೂ ನೇರವಾಗಿ ಬಳಕೆಯಾಗುತ್ತಿದ್ದುದರಿಂದ ಕೊಡುವ ತೆಗೆದುಕೊಳ್ಳುವ ಪ್ರಶ್ನೆಯೇ ಇರಲಿಲ್ಲ. ಹಾಗಾಗಿ ಉತ್ಪಾದಿಸಿದ ತನ್ನ ಉತ್ಪಾದನೆಯ ಮೇಲೆ ಆಗ ಮಹಿಳೆಗೆ ಸಂಪೂರ್ಣವಾದ ಹಿಡಿತವಿತ್ತು. ಈಗಿನಂತೆ ಉತ್ಪಾದನಾ ಪ್ರಕ್ರಿಯೆಯಲ್ಲಿ ತೊಡಗಿದ್ದರೂ ಉತ್ಪಾದನೆಯ ನಂತರ ಅದು ಪುರುಷನ ಪಾಲಾಗುವಂತಹ ಸ್ಥಿತಿ ಆಗಿರಲಿಲ್ಲ.

### ೩.೩ ಕೃಷಿಯಲ್ಲಿ ಪುರುಷನ ಪ್ರವೇಶದ ನಂತರದಲ್ಲಾದ ಬದಲಾವಣೆಗಳು

ಗಂಡಸರು ಬೇಟೆಯಾಡುತ್ತಿದ್ದ ಸಂದರ್ಭದಲ್ಲಿ ಅಂದರೆ ಕೃಷಿ ಆವಿಷ್ಕಾರದ ಆರಂಭದ ದಿನಗಳಲ್ಲಿ ವ್ಯವಸಾಯದ ಕೆಲಸವನ್ನು ಪೂರ್ತಿಯಾಗಿ ಸ್ತ್ರೀಯರೇ ನಿರ್ವಹಿಸಿಕೊಂಡು ಹೋಗುತ್ತಿದ್ದರು. ಆಗ ವ್ಯವಸಾಯ

ಕ್ಷೇತ್ರದಲ್ಲಿ ಪುರುಷ ಪ್ರವೇಶವಿದ್ದಿಲ್ಲ. ಆಗ ಕೃಷಿಯನ್ನು ಮಹಿಳೆಯರು ಪುರುಷರ ಸಹಾಯ ಸಹಕಾರಗಳಿಲ್ಲದೆ ಸ್ವತಂತ್ರವಾಗಿ ನಿರ್ವಹಿಸುತ್ತಿದ್ದರೆಂದು ತಿಳಿಯಲಾಗಿದೆ. 'ಎತ್ತು ಹಾಗೂ ನೇಗಿಲುಗಳನ್ನು ಬಳಸಿ ವ್ಯವಸಾಯ ಮಾಡುವ ಸ್ಥಿತಿಯನ್ನು ಮನುಷ್ಯ ಯಾವಾಗ ತಲುಪಿದನೋ ಆಗ ವ್ಯವಸಾಯದ ಕೆಲಸ ಸ್ತ್ರೀಯರ ಪರಿಮಿತಿಯಿಂದ ದೂರವಾಯಿತು. ಅದು ಸ್ತ್ರೀಯರಿಂದ ಪುರುಷರ ಕೈಗೆ ಬಂತು. ವ್ಯವಸಾಯ ಸ್ತ್ರೀಯರಿಂದ ಆವಿಷ್ಕಾರಗೊಂಡಿದ್ದರೂ ಮುಂದೆ ಅದು ಅವರದ್ದೇ ಆಗಿ ಉಳಿಯಲಿಲ್ಲ' (ದೇವಿಪ್ರಸಾದ ಚಟ್ಟೋಪಾಧ್ಯಾಯ, ೧೯೯೭, ಪು. ೨೪).

ಹಾಗಿದ್ದರೆ ಕೃಷಿಯಲ್ಲಿ ನೇಗಿಲಿನ ಬಳಕೆಯ ಇತಿಹಾಸವನ್ನು ಗಮನಿಸಿದರೆ, ಕೃಷಿಯಲ್ಲಿ ಪುರುಷನ ಪ್ರವೇಶ ಯಾವಾಗ ಆಯಿತೆಂಬ ಸಂಗತಿ ತಿಳಿದು ಬರುತ್ತದೆ. ಚರಿತ್ರೆಯನ್ನು ಗಮನಿಸಿದರೆ, ವೇದ ಕಾಲದಿಂದ ನೇಗಿಲು ಬಳಕೆಗೊಂಡಿರುವುದು ತಿಳಿದು ಬರುತ್ತದೆ. 'ನೇಗಿಲು ವೇದ ಕಾಲದಿಂದಲೂ ತನ್ನ ಸ್ವರೂಪವನ್ನು ಕಾಯ್ದುಕೊಂಡು ಬಂದಿದೆ. ಆಯಾ ಪ್ರದೇಶಗಳ ಜನತೆಯ ಪ್ರತಿಭೆಗನುಗುಣವಾಗಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಹೊಂದಿರುತ್ತದೆ. ನೇಗಿಲು ಗುಳದ ಮುಖ್ಯ ಭಾಗವು ಆರ್ಯರ ಕಾಲದಲ್ಲಿ ಬಿಲ್ಲೆಯಾಕಾರವಿದ್ದು ಇನ್ನೂ ಅದೇ ಆಕಾರವನ್ನು ಉಳಿಸಿಕೊಂಡಿದೆ' (ಅನು. ಕುಮುದಿನಿ ಸಿ.ಕೆ., ೧೯೮೭, ಪು. ೫೭). ಅಂದರೆ ವೇದಗಳ ಕಾಲಕ್ಕಾಗಲೇ ನೇಗಿಲುಗಳ ಪರಿಚಯವಿತ್ತು. ಆರ್ಯರಿಗೂ ನೇಗಿಲಿನ ಬಳಕೆ ತಿಳಿದಿತ್ತೆಂಬುದು ತಿಳಿದು ಬರುತ್ತದೆ. ನೇಗಿಲಿನ ಬಳಕೆಯಾದಾಗಿನಿಂದ ಕೃಷಿಯಲ್ಲಿ ಪುರುಷನ ಪ್ರವೇಶವಾಗಿ ಮಹಿಳೆಯ ಪಾತ್ರ ಗೌಣವಾಯಿತೆಂಬ ಬಗ್ಗೆ ಅನೇಕ ಹೇಳಿಕೆಗಳು ಸಿಗುತ್ತವೆ. ಆದ್ದರಿಂದ ವೇದಗಳ ಕಾಲದ ಕೃಷಿಯಲ್ಲಿ ನೇಗಿಲಿನ ಬಳಕೆ ಕಂಡು ಬಂದದ್ದರಿಂದ, ವೇದಗಳ ಕಾಲಕ್ಕೆ ಕೃಷಿಯಲ್ಲಿ ಪುರುಷನ ಪ್ರವೇಶವಾಯಿತೆಂದು ಮತ್ತು ವೇದಕಾಲದ ನಂತರದಲ್ಲಿ ಸ್ತ್ರೀಯು ಕೃಷಿಯಲ್ಲಿ ಪ್ರಾಮುಖ್ಯತೆಯನ್ನು ಕಳೆದುಕೊಂಡಿರಬಹುದು. ಅಂದರೆ ವೇದ ಪೂರ್ವದ ಕಾಲಘಟ್ಟದಲ್ಲಿ ಸ್ತ್ರೀ ಕೃಷಿಯಲ್ಲಿ ಪ್ರಧಾನ ಪಾತ್ರವನ್ನು ವಹಿಸಿದ್ದಳೆಂದು ತಿಳಿದು ಬರುತ್ತದೆ.

**ಕೃಷಿ ಉಪಕರಣಗಳಲ್ಲಾದ ಬದಲಾವಣೆಗಳಿಂದ ಕೃಷಿಯಲ್ಲಾದ ಬೆಳವಣಿಗೆಗಳು**

ಕಾಡಿನಲ್ಲಿ ವಾಸವಾಗಿದ್ದ ಮನುಷ್ಯರು ಆಹಾರಕ್ಕಾಗಿ ಕಾಡು-ಮೇಡು ಅಲೆಯುತ್ತಿದ್ದರು. ಆಗ ಹಸಿವು ನೀಗಿಸಿಕೊಳ್ಳುವುದಕ್ಕಾಗಿ ಕಾಡುಗಳಲ್ಲಿ ದೊರೆಯುತ್ತಿದ್ದ ಗೆಡ್ಡೆ-ಗೆಣಸುಗಳನ್ನು ಅವಲಂಬಿಸಿದ್ದರು. ಇದನ್ನೇ ಆಹಾರ ಸಂಗ್ರಹಣೆಯ ಹಂತವೆಂದು ಗುರುತಿಸಲಾಗಿದ್ದು, ಈ ಹಂತದಲ್ಲಿ ಭೂಮಿಯಿಂದ ಗೆಡ್ಡೆ-ಗೆಣಸುಗಳನ್ನು ಅಗೆಯುವುದಕ್ಕಾಗಿ ಒರಟಾದ ಚೂಪುಗಲ್ಲುಗಳನ್ನು ಬಳಸುತ್ತಿದ್ದರು. ಮನುಷ್ಯ ಬೇಟೆ ಕಲೆಯನ್ನು ಕಲಿತ ನಂತರ ಬೇಟೆಯಾಡಲು ಭಲ್ಲೆ ಮತ್ತು ದೊಣ್ಣೆಯನ್ನು ತಯಾರಿಸುವುದನ್ನು ಕಲಿತ. ಕೃಷಿಯಲ್ಲಿ ಮೊದಲು ಕಲ್ಲಿನ ಆಯುಧಗಳನ್ನು ಬಳಸುತ್ತಿದ್ದರು. ಕ್ರಮೇಣ ಹೀಗೆ ಬಳಸುತ್ತಿದ್ದ ಕಲ್ಲಿನ ಆಯುಧಗಳನ್ನು ಹೆಚ್ಚು ಹರಿತ ಮತ್ತು ನಾಜೂಕುಗೊಳಿಸಿ ಅವುಗಳಿಂದ ವಿವಿಧ ಬಗೆಯ ಮರದ ಸಾಮಾನುಗಳನ್ನು ಮಾಡುವುದಕ್ಕೆ

ಆರಂಭಿಸಿದರು. ಜೊತೆಗೆ ಮಣ್ಣಿನ ಮಡಿಕೆ ಮಾಡುವುದನ್ನು ಕಲಿತರು. ಅದರಿಂದ ಆಹಾರ ಸಂಗ್ರಹಣೆಗೆ ಅನುಕೂಲವಾಯಿತು. ನಿಧಾನವಾಗಿ ಕೃಷಿಯಲ್ಲಿ ನೇಗಿಲಿನಿಂದ ಉಳುಮೆ ಮಾಡುವುದನ್ನು ರೂಢಿಸಿಕೊಂಡರು. ಮೊದಲು ಮರದ ನೇಗಿಲಿನ ಬಳಕೆಯಿತ್ತು. ಕ್ರಮೇಣ ಮನುಷ್ಯರಿಗೆ ಲೋಹದ ಪರಿಚಯವಾದಂತೆ ಕೃಷಿ ಚಟುವಟಿಕೆಗಳಲ್ಲಿ ಸಾಕಷ್ಟು ಬದಲಾವಣೆಗಳಾದವು. ಮನುಷ್ಯ ಕಬ್ಬಿಣದ ಬಳಕೆಯನ್ನು ಮಾಡುವುದಕ್ಕೆ ಪ್ರಾರಂಭಿಸಿದಾಗಿನಿಂದ ಕೃಷಿಯಲ್ಲಿ ಕಬ್ಬಿಣದ ನೇಗಿಲು ಮತ್ತು ಇತರ ಕೆಲವು ಉಪಕರಣಗಳನ್ನು ಬಳಸಲು ಪ್ರಾರಂಭಿಸಿದರು. ಹೀಗೆ ಕೃಷಿ ಸುಧಾರಿತ ಹಂತವನ್ನು ತಲುಪಿತು.

ಕೃಷಿ ಉಪಕರಣಗಳಲ್ಲಾದ ಈ ಬದಲಾವಣೆ ಉತ್ಪಾದನಾ ವಿಧಾನದಲ್ಲಿ ಸಾಕಷ್ಟು ಬದಲಾವಣೆಯನ್ನು ತಂದಿತು. ಸುಧಾರಿತ ಉಪಕರಣಗಳು ಬಳಕೆಗೊಳ್ಳಲು ಆರಂಭವಾದಾಗಿನಿಂದ ಕೃಷಿಯಲ್ಲಿ ಪಶುಗಳ ಬಳಕೆಯೂ ಅನಿವಾರ್ಯವಾಯಿತು. ಈ ಹಂತದಲ್ಲಿ ಪಶುಸಂಗೋಪನೆಯ ಮೇಲೆ ಅಧಿಕಾರಯುತ ಸ್ಥಾನವನ್ನು ಹೊಂದಿದ ಪುರುಷ ಪ್ರಾಣಿ ಬಳಕೆಯ ಜೊತೆಯಲ್ಲಿ ಕೃಷಿಯನ್ನು ಪ್ರವೇಶಿಸಿ ಅದರಲ್ಲಿ ತನ್ನ ಸ್ವಾಮ್ಯತೆ ಪಡೆಯುವುದಕ್ಕೆ ಸಾಧ್ಯವಾಗಿರಬಹುದು.

ಈ ರೀತಿ ಕೃಷಿಯಲ್ಲಾದ ಬದಲಾವಣೆ ಮತ್ತು ಕೃಷಿ ಬೆಳವಣಿಗೆಯಿಂದಾಗಿ ಗಂಡು-ಹೆಣ್ಣಿನ ಉತ್ಪಾದನೆಯಲ್ಲಿ ಉಳಿತಾಯವಾಗತೊಡಗಿತು. 'ಭೂಮಿ, ಶ್ರಮ, ಪಶು, ಸಲಕರಣೆ ಮುಂತಾದ ಉತ್ಪಾದನಾ ಸಾಧನಗಳು ಮತ್ತು ಅದರಿಂದ ಬಂದ ಉತ್ಪಾದನೆ ಹಾಗೂ ಹೆಚ್ಚುವರಿ ಈ ಎಲ್ಲದರ ಮೇಲಿನ ಒಡೆತನ ಮತ್ತು ನಿಯಂತ್ರಣ ನಿಧಾನವಾಗಿ ಕೆಲವೇ ಜನರ ಕೈ ಸೇರಿತು. ಅದು ಅವರ ಖಾಸಗಿ ಆಸ್ತಿಯಾಗಿ ಪರಿಗಣಿತವಾಗತೊಡಗಿತು. ಹೀಗೆ ಬಂದ ಖಾಸಗಿ ಆಸ್ತಿಯ ಪರಿಕಲ್ಪನೆ ಜನರ ಸಾಮೂಹಿಕ ಬದುಕಿನಲ್ಲಿ ವರ್ಗ ವಿಭಜನೆಯನ್ನು ಸೃಷ್ಟಿಸಿತಲ್ಲದೆ ವರ್ಗ ಸಮಾಜದ ನಿರ್ಮಾಣಕ್ಕೆ ಕಾರಣವಾಯಿತು. ವರ್ಗ ಸಮಾಜದಲ್ಲಿ ಶೋಷಕ ಮತ್ತು ಶೋಷಿತ ಎಂಬ ಎರಡು ಬಗೆಯ ಸಾಮಾಜಿಕ ವರ್ಗಗಳು ಏರ್ಪಟ್ಟವು. ಶೋಷಕ ವರ್ಗಗಳು ಸಾಮಾಜಿಕ ಶ್ರಮದಿಂದ ಬಂದ ಎಲ್ಲ ಉತ್ಪಾದನೆ ಮತ್ತು ಉತ್ಪಾದನಾ ಪ್ರಕ್ರಿಯೆಯ ಮೇಲೆ ಒಡೆತನವನ್ನು ಮತ್ತು ಹತೋಟಿಯನ್ನು ಹೊಂದಿದ್ದವು. ಅಲ್ಲದೆ ಇವರು ಆಳುವ ವರ್ಗದವರು ಕೂಡ ಆಗಿದ್ದರು. ಆದರೆ ಶೋಷಿತ ವರ್ಗಗಳಿಗೆ ಉತ್ಪಾದನೆಯ ಯಾವ ಪ್ರಕ್ರಿಯೆಯಲ್ಲೂ ಒಡೆತನವಿರಲಿಲ್ಲ. ಅಲ್ಲದೆ ಖಾಸಗಿ ಆಸ್ತಿಯ ತಳಹದಿಯ ಮೇಲೆ ನಿಂತಿರುವ ವರ್ಗ ಸಮಾಜವು ಪುರುಷಾಧಿಪತ್ಯವನ್ನು ಹುಟ್ಟು ಹಾಕುವುದಕ್ಕೆ ಕಾರಣವಾಯಿತು. ಶೋಷಕ ವರ್ಗದ ಹಿಡಿತದಲ್ಲಿರುವ ಆಸ್ತಿಯ 'ಖಾಸಗಿ'ತನವನ್ನು ಮುಂದುವರಿಸಬೇಕಾದರೆ ಅದನ್ನು ತಮ್ಮ ಮಕ್ಕಳಿಗೆ ವರ್ಗಾಯಿಸಬೇಕಾಗಿತ್ತು. ಆದರೆ ಸಾಮೂಹಿಕ ಜೀವನ ಪದ್ಧತಿಯಲ್ಲಿ ಮುಕ್ತ ಲೈಂಗಿಕತೆ ಇರುವ ಕಾರಣ ಮಕ್ಕಳು ತಾಯಿಯಿಂದಲೇ ಗುರುತಿಸಲ್ಪಡುತ್ತಿದ್ದರಿಂದ ಶೋಷಕ ವರ್ಗ ಮತ್ತು ಶೋಷಿತ ವರ್ಗದ ನಡುವೆ ಭಿನ್ನತೆಯನ್ನು ಗುರುತಿಸಲು ಸಾಧ್ಯವಾಗಲಿಲ್ಲ. ಹಾಗಾಗಿ ಆಸ್ತಿಯನ್ನು ಹೊಂದಿದ ಪುರುಷರು ತಮ್ಮ ಮಕ್ಕಳನ್ನು ಅವರು 'ತಮ್ಮ ಮಕ್ಕಳು' ಎಂದು ಗುರುತಿಸಲು ಹೆಂಗಸರ ಲೈಂಗಿಕ ನೀತಿ ನಿಯಮಾವಳಿಗಳ ಮೇಲೆ ಕೆಲವು ನಿರ್ಬಂಧಗಳನ್ನು ಹೇರಿದರಲ್ಲದೆ

ಅವರ ಸಾಮಾಜಿಕ ಪಾತ್ರ ಮತ್ತು ಚಟುವಟಿಕೆಗಳ ಮೇಲೆ ಕಡಿವಾಣ ಹಾಕಲಾಯಿತು. ಇದು ಸಮಾಜದಲ್ಲಿ ಏಕಪತ್ನಿತ್ವದ ಕುಟುಂಬವನ್ನು ಹುಟ್ಟು ಹಾಕುವುದಕ್ಕೆ ಕಾರಣವಾಯಿತು.

ಯಾವಾಗ ಸಮಾಜದಲ್ಲಿ ಕುಟುಂಬ ಪದ್ಧತಿ ಅಸ್ತಿತ್ವಕ್ಕೆ ಬಂದಿತೋ ಅಂದಿನಿಂದಲೇ ಸಮಾಜದಲ್ಲಿ ಪುರುಷಾಧಿಪತ್ಯದ ಸ್ಥಾಪನೆಯಾಯಿತು. ಆಗ ಮಹಿಳೆ ಪುರುಷನ ಅಡಿಯಾಳಾದಳು. ಅಲ್ಲದೆ ಸಾಮಾಜಿಕ ಉತ್ಪಾದನೆಯಲ್ಲಿ ಅವಳಿಗಿದ್ದ ಅಧಿಕಾರಿಯುತವಾದ ಹಕ್ಕು ಅವಳಿಗಿಲ್ಲದಾಯಿತು. ಅಂದರೆ ಉತ್ಪಾದನಾ ಪ್ರಕ್ರಿಯೆಯ ಮೇಲಿನ ಅವಳ ಹತೋಟಿಯನ್ನು ಕಿತ್ತುಕೊಳ್ಳಲಾಯಿತು ಅಥವಾ ಅದು ಮಹಿಳೆಯಿಂದ ಪುರುಷನಿಗೆ ಹಸ್ತಾಂತರವಾಯಿತು. ಆಗ ಮಹಿಳೆಯರ ಪಾತ್ರ ಮಕ್ಕಳನ್ನು ಹೊರುವ-ಹೆರುವ ಮತ್ತು ಪೋಷಿಸುವ ಕೆಲಸಗಳಿಗೆ, ಪುರುಷರ ಸೇವೆಗಳಿಗೆ, ಮನೆಗೆಲಸಗಳಿಗೆ ಮಾತ್ರ ಸೀಮಿತವಾಗುಳಿಯಿತು. ಅಲ್ಲದೆ ಉತ್ಪಾದನೆಯಲ್ಲಿ ತೊಡಗಲು ಸಾಧ್ಯವಾಗದ ಮುದುಕರು, ಮಕ್ಕಳು ಮತ್ತು ಅನಾರೋಗ್ಯದಿಂದ ಬಳಲುವವರನ್ನು ಸಾಕುವ ಹೊಣೆಗಾರಿಕೆಯೂ ಕೂಡಾ ಮಹಿಳೆಗೆ ಬಂದೊದಗಿತು. ಮಹಿಳೆಗೆ ವಿಧಿಸಿದ ಈ ಯಾವ ಕೆಲಸಗಳು ಸಾಮಾಜಿಕ ಜವಾಬ್ದಾರಿಗಳೆನಿಸದೆ ವ್ಯಕ್ತಿಗತ ಕೆಲಸಗಳಾಗತೊಡಗಿದವು. ಅಲ್ಲದೆ ಅವಳ ಈ ಕೆಲಸಗಳಿಗೆ ವಿನಿಯೋಗವಾಗುವ ಶ್ರಮಕ್ಕೆ ಸಾಮಾಜಿಕ ಕೆಲಸಗಳಿಗಿರುವ ಯಾವ ಬೆಲೆಯೂ ಸಿಗದಂತಾಯಿತು.

ಹೀಗೆ ಕೃಷಿ ಪೂರ್ವದ ಮತ್ತು ಕೃಷಿ ಆರಂಭದ ಸಮಾಜದಲ್ಲಿ ಮಹಿಳೆಯ ಮೂಲಕವೇ ವಂಶ ಗುರುತಿಸಲ್ಪಡುತ್ತಿದ್ದು, ಮಹಿಳೆಗೆ ಉತ್ಪಾದನಾ ಚಟುವಟಿಕೆಗಳ ಮೇಲೆ ಅಧಿಕಾರಯುತ ಹಕ್ಕು ಮತ್ತು ಒಡೆತನಗಳಿದ್ದವು. ಆದರೆ ಯಾವಾಗ ವರ್ಗ ಸಮಾಜ ನಿರ್ಮಾಣವಾಗಿ ಖಾಸಗಿ ಆಸ್ತಿಯ ಹಿನ್ನೆಲೆಯಲ್ಲಿ ಕುಟುಂಬಗಳು ಅಸ್ತಿತ್ವಕ್ಕೆ ಬಂದವೋ ಆಗ ಮಹಿಳೆಗಿದ್ದ ಅಧಿಕಾರಯುತ ಸ್ಥಾನಮಾನಗಳೆಲ್ಲ ಪುರುಷನ ವಶವಾಗಿರಬೇಕು. ಏಕೆಂದರೆ ವರ್ಗ ಸಮಾಜದಲ್ಲಿ ಪುರುಷನೇ ಮನೆಯ ಮುಖ್ಯಸ್ಥನಾಗಿದ್ದರಿಂದ ಮನೆಯ ಆಗುಹೋಗುಗಳು ಅವನಿಂದಲೇ ನಡೆಯುತ್ತಿದ್ದವು.

ಅಂದು ಮಹಿಳೆಯರಿಂದ ಆರಂಭವಾದ ಕೃಷಿ ಇಂದು ಬಹಳ ವೈವಿಧ್ಯಮಯವಾಗಿ ಬೆಳೆದು ನಿಂತಿರುವುದನ್ನು ನಾವು ಕಾಣುತ್ತೇವೆ. ಆದರೆ ಈ ಆಧುನಿಕ ದಿನಗಳಲ್ಲಿ ಮಹಿಳೆ ಕೃಷಿಯಿಂದ ಸಾಕಷ್ಟು ದೂರ ಸರಿಯುತ್ತಿದ್ದಾಳೆ ಎಂಬ ಜನಪ್ರಿಯ ಕೂಗು ನಮಗಿಂದು ಕೇಳಿ ಬರುತ್ತಿವೆ. `ಕೃಷಿಯಲ್ಲಿ ಹೆಚ್ಚು ಹೆಚ್ಚು ಯಂತ್ರೋಪಕರಣಗಳ ಬಳಕೆಯಾಗುತ್ತಿರುವುದರಿಂದ ಆ ಯಂತ್ರಗಳು ಮಹಿಳೆಯರ ದುಡಿಮೆಯ ಸ್ಥಾನವನ್ನು ಆಕ್ರಮಿಸಿಕೊಂಡಿರುವುದರಿಂದ ಕೃಷಿಯಲ್ಲಿನ ಮಹಿಳೆಯ ಪಾಲುದಾರಿಕೆಯನ್ನು ಕಡಿತಗೊಳಿಸುತ್ತವೆ. ಹತ್ತಾರು ಜನ ದಿನವಿಡಿ ಮಾಡುತ್ತಿದ್ದ ಕೆಲಸ ಕಾರ್ಯಗಳನ್ನು ಯಂತ್ರ ಒಂದೇ ಕೆಲವೇ ನಿಮಿಷಗಳಲ್ಲಿ ಮಾಡಿ ಮುಗಿಸುತ್ತದೆ. ಇದು ಅಭಿವೃದ್ಧಿಯ ಸಂಗತಿಯಾಗಿದ್ದರೂ, ಕೃಷಿಯನ್ನು ಅವಲಂಬಿಸಿ ಬದುಕು ಸಾಗಿಸುತ್ತಿದ್ದ ಮಧ್ಯಮ ಅಥವಾ ಬಡವರ್ಗದ ಕುಟುಂಬದ ಕೃಷಿ ಮಹಿಳೆಯರ ಉದ್ಯೋಗ ಅವಕಾಶಗಳಲ್ಲಿ

ಕಡಿಮೆಗೊಳಿಸುತ್ತಿವೆ. ಮಹಿಳೆ ಬಿತ್ತುವ, ಕಳೆ ತೆಗೆಯುವ, ಕೊಯ್ಯುವ, ಒಕ್ಕುವ, ಧಾನ್ಯಗಳನ್ನು ಕೇರುವ (ಹಸನಗೊಳಿಸುವ) ಇತ್ಯಾದಿ ಕೃಷಿ ಕೆಲಸಗಳಲ್ಲಿ ಸಕ್ರಿಯವಾಗಿ ಭಾಗಿಯಾಗುತ್ತಿದ್ದಳು. ಆದರೆ ಗೆರೆ ಹೊಡೆದು (ಹೊಲ ಉಳಿಸಿ) ಏಕಕಾಲದಲ್ಲಿ ಬಿತ್ತುವ ಯಂತ್ರಗಳ ಬಳಕೆಯಾಗುವುದರಿಂದ ಅಲ್ಲಿ ಬಿತ್ತುವ ಕ್ರಿಯೆಯಿಂದ ಹೆಣ್ಣು ದೂರ ಉಳಿಯುತ್ತಿದ್ದಾಳೆ. ತಂತ್ರಜ್ಞಾನ ಬೆಳೆದಂತೆ ಹೆಚ್ಚು ಹೆಚ್ಚು ತಿಳುವಳಿಕೆಯನ್ನು ಹೊಂದುತ್ತಿರುವ ಮನುಷ್ಯರು, ಮುಂಜಾಗ್ರತವಾಗಿ ಕೃಷಿಯಲ್ಲಿ ಹಲವು ತಂತ್ರಗಳನ್ನು ಉಪಯೋಗಿಸುತ್ತಿರುವರು. ಹೊಲದಲ್ಲಿ ಬೆಳೆಯುವ ಕಳೆಯ ನಿವಾರಣೆಗಾಗಿ ಬಳಸುವ ಕಳೆನಾಶಕ ರಾಸಾಯನಿಕಗಳು ಕೃಷಿ ಅಭಿವೃದ್ಧಿಯ ಸೂಚಕಗಳಾಗಿದ್ದರೂ ಕೂಡಾ ಅವು ಮಹಿಳೆಯ ಕೆಲಸವನ್ನು ಆಕ್ರಮಿಸಿಕೊಂಡಿವೆ. ಕೃಷಿಯಲ್ಲಿ ಕಳೆ ತೆಗೆಯುವ ಕೆಲಸ ಸಾಮಾನ್ಯವಾಗಿ ಮಹಿಳೆಯಿಂದಲೇ ನಿರ್ವಹಿಸಲ್ಪಡುತ್ತದೆ. ಆದರೆ ಇಂದು ಕಳೆನಾಶಕ ಔಷಧಿಗಳನ್ನು ಇಲ್ಲವೆ ಕಳೆ ತೆಗೆಯುವ ಯಂತ್ರ ಬಳಸುವುದರಿಂದ ಹತ್ತಾರು ಜನ ಮಹಿಳೆಯರು ಆ ಕೆಲಸದಿಂದ ವಂಚಿತರಾಗುತ್ತಿರುವುದನ್ನು ನಾವು ಗಮನಿಸಬಹುದು. ಅದೇ ರೀತಿ ಕೃಷಿಯಲ್ಲಿ ಬೆಳೆಯನ್ನು ಕಟಾವು ಮಾಡುವ ಅಥವಾ ಕೊಯ್ಯುವುದಕ್ಕೆ ಕೆಲವು ಯಂತ್ರಗಳು ಬಂದಿವೆ. ಇವು ಕೂಡಾ ಕೃಷಿ ಕಾರ್ಮಿಕರ ಕೆಲಸವನ್ನು ಕಬಳಿಸುತ್ತಿವೆ. ಕೃಷಿಯಲ್ಲಿ ಹೆಚ್ಚಾಗಿ ಮಹಿಳಾ ಕೂಲಿ ಕಾರ್ಮಿಕರಿರುವುದರಿಂದ ಅವರ ಕೆಲಸದ ಮೇಲೆ ಇದು ಹೆಚ್ಚು ಪರಿಣಾಮ ಬೀರುತ್ತಿದೆ.

ಹೀಗೆ ಆಧುನಿಕ ದಿನಗಳಲ್ಲಿ ಮಹಿಳೆಯರು ಕೃಷಿ ಚಟುವಟಿಕೆಗಳಿಂದ ದೂರ ಉಳಿಯಬೇಕಾದ ಸಂದರ್ಭಗಳು ಎದುರಾಗುತ್ತಿರುವುದು ನಿಜವಾದರೂ ಮಹಿಳೆ ಕೃಷಿಯಿಂದ ದೂರ ಸರಿಯುತ್ತಿದ್ದಾಳೆ ಎಂಬ ಮಾತನ್ನು ಸಾರ್ವತ್ರಿಕಗೊಳಿಸಿ ಹೇಳಲಿಕ್ಕಾಗದು. ಏಕೆಂದರೆ ಕೃಷಿಯಲ್ಲಿ ಮಹಿಳೆಯ ಪಾಲ್ಗೊಳ್ಳುವಿಕೆ ನಿಂತಿರುವುದಿಲ್ಲ. ಅಲ್ಲದೆ ಭಾರತವು ಅನೇಕ ಗ್ರಾಮೀಣ ಬಡಜನರನ್ನು ಹೊಂದಿರುವ ದೇಶವಾಗಿದ್ದರಿಂದ ಎಲ್ಲಾ ಪ್ರದೇಶದಲ್ಲಿ, ಎಲ್ಲ ಕೃಷಿಕರಿಗೂ ಯಂತ್ರೋಪಕರಣಗಳನ್ನು ಸಮರ್ಪಕವಾಗಿ ಬಳಸಿಕೊಳ್ಳಲಿಕ್ಕೆ ಸಾಧ್ಯವಾಗದು. ಎಲ್ಲೊ ಬೆರಳೆಣಿಕೆಯ ಮೇಲ್ವರ್ಗದ ಶ್ರೀಮಂತ ಕೃಷಿಕರು ಮಾತ್ರ ಕೃಷಿಯಲ್ಲಿ ಆಧುನಿಕ ಯಂತ್ರೋಪಕರಣಗಳನ್ನು ಒಳಪಡಿಸಬಹುದೇ ಹೊರತು ಸಾಮಾನ್ಯ ಬಡ ರೈತಾಪಿ ವರ್ಗದವರಿಗೆ ಇವು ನಿಲುಕದ ನಕ್ಷತ್ರಗಳಾಗಿವೆ. ಹಾಗಾಗಿ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಮಹಿಳೆ ಕೃಷಿಯಲ್ಲಿ ಪುರುಷನೊಟ್ಟಿಗೆ ಶ್ರಮವಹಿಸಿ ದುಡಿಯುತ್ತಿರುವುದನ್ನು ನಾವು ಕಾಣುತ್ತೇವೆ.

ಅಲ್ಲದೇ ವಾಸ್ತವವಾಗಿ ಕೆಳಮಧ್ಯಮ ಮತ್ತು ಕೆಳವರ್ಗದ ಜನ ತಮ್ಮ ಜೀವನ ನಿರ್ವಹಣೆಗಾಗಿ ಅಥವಾ ಕುಟುಂಬದ ನಿತ್ಯ ಖರ್ಚಿಗಾಗಿ ಕೆಲಸ ಮಾಡಲೇಬೇಕಾದ ಅನಿವಾರ್ಯತೆ ಇರುತ್ತದೆ. ಆದರೆ ಉನ್ನತ ಅಥವಾ ಮೇಲ್ವರ್ಗದ ಮಹಿಳೆಯರ ಸ್ಥಿತಿ ಇದಕ್ಕೆ ಹೊರತಾದುದಾಗಿರುತ್ತದೆ. ಇವರಿಗೆ ಕೆಲಸದ ಅನಿವಾರ್ಯತೆ ಇರದು. ಮೇಲ್ವರ್ಗದ ಪುರುಷ ತನ್ನ ಕುಟುಂಬದ ಹೆಣ್ಣನ್ನು ಹೊಲಕ್ಕೆ ಕಳುಹಿಸದಿರುವುದೇ ಒಂದು ಪ್ರತಿಷ್ಠೆಯ ಸಂಕೇತ ಎಂದು ಭಾವಿಸಿದ್ದಾನೆ. ತನ್ನ ಮನೆಯ ಹೆಣ್ಣುಮಕ್ಕಳನ್ನು ಹೊಲಕ್ಕೆ ಕಳುಹಿಸುವುದು ಎಂದರೆ ಅದೊಂದು ಅವಮಾನದ ಸಂಗತಿ ಎಂದು ಕೆಲವು ಕಡೆ ಜನ ಭಾವಿಸಿದ್ದರಿಂದ,

ಮೇಲ್ವರ್ಗದ ಮಹಿಳೆಯರು ಕೃಷಿಯಿಂದ ದೂರ ಉಳಿದಿದ್ದಾರೆ. ಇಂದಿಗೂ ಸಹಿತ ಕೆಲವು ಗ್ರಾಮೀಣ ಪ್ರದೇಶದ ಗೌಡ ಸಂಪ್ರದಾಯದ ಮನೆತನಗಳಲ್ಲಿ ಹೆಣ್ಣಿಗೆ ಮುಕ್ತವಾಗಿ ಓಡಾಡುವುದಕ್ಕೆ ಅವಕಾಶವಿಲ್ಲ. ಗೌಡರ ಮನೆಯ ಹೆಣ್ಣುಮಕ್ಕಳಿಗೆ ಕುಟುಂಬದ ಮಾನ, ಮಾರ್ಯದೆ ಎಂಬ ಹೆಸರಿನಲ್ಲಿ ಕೆಲವು ನಿರ್ಬಂಧಗಳು, ನಿಷೇಧಗಳು ಮತ್ತು ಮಿತಿಗಳಿವೆ.

ಮತ್ತೊಂದೆಡೆ ಸ್ವತಃ ಮಹಿಳೆಯರಿಗೆ (ಹೊಸ ತಲೆಮಾರಿನವರಿಗೆ) ಕೃಷಿಯ ಬಗೆಗೆ ನಿರ್ಲಕ್ಷ ಬೆಳೆಯುತ್ತಿದ್ದಂತೆ ಕಂಡು ಬರುತ್ತದೆ. ಇತ್ತೀಚಿಗೆ ಮಹಿಳೆಯರಲ್ಲಿ ಕೃಷಿಯನ್ನು ಲಘುವಾಗಿ ಕಾಣುವ ಮನೋಭಾವ ಬೆಳೆಯುತ್ತಿದೆ ಎಂಬುದನ್ನು ಈ ಒಂದು ನಿದರ್ಶನದಿಂದ ಸ್ಪಷ್ಟಪಡಿಸಬಹುದು. ಇಂದಿನ ದಿನಮಾನಗಳು ಹೆಣ್ಣುಮಕ್ಕಳು ಕೃಷಿಕರನ್ನು ಮದುವೆಯಾಗಲು ಹಿಂಜರಿಯುತ್ತಿದ್ದಾರೆ. ಅವನು ಎಷ್ಟೇ ಪ್ರಗತಿಪರವಾದ ರೈತನಾಗಿದ್ದರೂ ಆತನನ್ನು ಮದುವೆಯಾಗಲು ಈಗಿನ ಹೆಣ್ಣುಮಕ್ಕಳು ಹಿಂದೇಟು ಹಾಕುತ್ತಿದ್ದಾರೆ. ಈ ಸಂಗತಿಯು ಕೃಷಿ ಇಂದು ಅಷ್ಟು ಮನ್ನಣೆಯನ್ನು ಪಡೆದ ಕಸುಬಾಗಿ ಉಳಿದಿಲ್ಲ ಎಂಬುದನ್ನು ತಿಳಿಸುತ್ತದೆ. ಸಾಮಾಜಿಕವಾಗಿ ಕೃಷಿ ಇಂದು ಅವಗಣನೆಗೆ ಒಳಗಾಗುತ್ತಿದೆ.

ಬರಿ ಸ್ತ್ರೀಯರಷ್ಟೇ ಅಲ್ಲ, ಪುರುಷರು ಕೂಡಾ ಕೃಷಿಯ ಬಗೆಗೆ ನಿರಾಸಕ್ತಿಯನ್ನು ತೋರಿಸುತ್ತಿರುವ ಸಂಗತಿ ಆಧುನಿಕ ದಿನಮಾನಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಿದೆ. 'ವ್ಯವಸಾಯ ಉತ್ತಮ, ವ್ಯಾಪಾರ ಮಧ್ಯಮ, ನೌಕರಿ ಕನಿಷ್ಠ' ಎಂಬ ಗಾದೆ ಮಾತಿನಂತೆ ಹಿಂದೆ ವ್ಯವಸಾಯ ಬಹಳ ಗೌರವಯುತವಾದ ಪವಿತ್ರವಾದ ಕೆಲಸವಾಗಿತ್ತು. ಹಿಂದೆಲ್ಲಿ ಕೃಷಿ ಕುಟುಂಬದ ಸದಸ್ಯರಲ್ಲಿ ಯಾರಿಗಾದರೂ ಸರಕಾರಿ ನೌಕರಿ ಸಿಕ್ಕರೂ ಅವರನ್ನು ನೌಕರಿಗೆ ಕಳಿಸುತ್ತಿರಲಿಲ್ಲ. 'ನೌಕರಿ' ಎಂದರೆ ಬೇರೆಯವರ ಕೈಕೆಳಗೆ ಮಾಡುವ 'ಚಾಕರಿ' ಎಂಬುದು ಅವರ ಭಾವನೆಯಾಗಿತ್ತು. ಹಾಗಾಗಿ ಬೇರೆಯವರ ಕೈ ಕೆಳಗೆ ಕೆಲಸ ಮಾಡುವುದಕ್ಕಿಂತಲೂ ಸ್ವಂತ ಜಮೀನಲ್ಲಿ ದುಡಿದು ಬದುಕುವುದು ಶ್ರೇಷ್ಠ ಎಂದು ಭಾವಿಸುತ್ತಿದ್ದರು. ಆದರೆ ಇಂದು ಪರಿಸ್ಥಿತಿ ಹಾಗೆ ಉಳಿದಿಲ್ಲ. ಕೃಷಿಯ ಬಗೆಗೆ ಮೊದಲಿದ್ದ ಅಭಿಪ್ರಾಯಗಳು ಈಗಿಲ್ಲ. ಕಾರಣ ಸಮಾಜದಲ್ಲಿ ಮೊದಲ ಸ್ಥಾನವನ್ನು ಪಡೆದುಕೊಂಡಿದ್ದ ವ್ಯವಸಾಯ ಅಥವಾ ಕೃಷಿ ಈಗ ನಷ್ಟದಾಯಕ, ಶ್ರಮದಾಯಕ ವೃತ್ತಿಯಾಗಿ ಪರಿಣಮಿಸಿದ್ದು, ಅದರಿಂದ ಅಧಿಕ ಶ್ರಮ ವಿನಿಯೋಗ ಆಗುತ್ತದೆ ಹೊರತು ಹೆಚ್ಚು ಲಾಭ ಬರದು ಎಂದು ಭಾವನೆ ಬೆಳೆದುಬಿಟ್ಟಿದೆ. ಹಾಗಾಗಿ ಕೃಷಿಯೀತರ ಬೇರೆ ಉದ್ಯೋಗಗಳಿಗೆ ಅರಸಿ ಹೋಗುತ್ತಿರುವವರ ಸಂಖ್ಯೆ ಅಧಿಕವಾಗುತ್ತಿದೆ. ಇದಕ್ಕೆ ಒಂದು ಉತ್ತಮ ನಿದರ್ಶನ ಎಂದರೆ ಇವತ್ತಿನ ಬಹುಪಾಲು ಯುವಜನತೆ ಕೃಷಿಯತ್ತ ಆಸಕ್ತಿ ತೋರದೆ ಕೃಷಿಯೇತರ ಉದ್ಯೋಗಗಳಿಗಾಗಿ ಹಪಹಪಿಸುತ್ತಿರುವುದು. ಉದ್ಯೋಗ ಗಿಟ್ಟಿಸುವ ಉದ್ದೇಶದಿಂದ ಪಟ್ಟಣಗಳಿಗೆ ಮೊರೆ ಹೋಗುತ್ತಿರುವುದು ಕಂಡು ಬರುತ್ತಿದೆ.

ಪರಿಸ್ಥಿತಿ ಏಕೆ ಹೀಗಾಗುತ್ತಿದೆ? ಎಂಬುದನ್ನು ಈ ಒಂದು ಸಣ್ಣ ಸಂಗತಿಯಿಂದ ನಾವು ಅರ್ಥೈಸಿಕೊಳ್ಳಬಹುದು. ಅದೇನೆಂದರೆ, ಒಂದು ಗ್ರಾಮ ಇಲ್ಲವೆ ನಗರದಲ್ಲಿ ವಿವಿಧ ವೃತ್ತಿಗಳಲ್ಲಿ ತೊಡಗಿದ ಜನರನ್ನು ಗಮನಿಸಿದಾಗ ಸಾಮಾನ್ಯವಾಗಿ ಕಣ್ಣಿಗೆ ಕಾಣುವ ಸಂಗತಿಯೆಂದರೆ ವ್ಯವಸಾಯವನ್ನು ತನ್ನ ಕುಲಕಸುಬನ್ನಾಗಿಯೋ ಅಥವಾ ವೃತ್ತಿಯನ್ನಾಗಿಯೋ ಅವಲಂಬಿಸಿ ಕೃಷಿಯಲ್ಲಿ ತೊಡಗಿದ ಕುಟುಂಬಗಳ ಸ್ಥಿತಿಗತಿಗಳು ಆ ಊರಿನಲ್ಲಿ ಇತರ ವೃತ್ತಿಗಳನ್ನು ಅವಲಂಬಿಸಿದ ಜನರ ಸ್ಥಿತಿಗತಿಗಳಿಗಿಂತ ಕಡಿಮೆ ಸ್ತರದಲ್ಲಿರುವುದು ತಿಳಿದು ಬರುತ್ತವೆ. ಎಲ್ಲಿಂದಲೋ ಬಂದ ಜನ ವ್ಯಾಪಾರ ಉದ್ದಿಮೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಸಾಕಷ್ಟು ಸುಧಾರಣೆಗೊಂಡಿರುತ್ತಾರೆ. ಸಾಕಷ್ಟು ಅಭಿವೃದ್ಧಿ ಹೊಂದಿರುತ್ತಾರೆ. ಆದರೆ ಅದೇ ಊರಿನಲ್ಲಿ ಮೊದಲಿನಿಂದಲೂ ನೆಲೆಯೂರಿದ್ದ ಕೃಷಿ ಅವಲಂಬಿತ ಕುಟುಂಬಗಳು ಮಾತ್ರ ಯಾವ ರೀತಿಯಲ್ಲೂ ಅಭಿವೃದ್ಧಿಯನ್ನು ಸಾಧಿಸದೆ ಬೇರೆ ಉದ್ಯೋಗ ಅವಲಂಬಿಸಿದ ಜನರಿಗೆ ಹೋಲಿಸಿದರೆ ಇವರು ಸಾಕಷ್ಟು ಹಿಂದುಳಿದಿರುವುದು ಕಂಡು ಬರುತ್ತದೆ. ವರ್ಷವಿಡೀ ಮೈಮುರಿದು ದುಡಿದರೂ ಇವರಿಗೆ ಐಷಾರಾಮಿ ಜೀವನ ಎಂಬುದು ಕನಸಿನ ಮಾತೇ ಸರಿ. ಇವರು ಎಷ್ಟು ದುಡಿದರೂ ಅಷ್ಟೆ, ಮುಂದಿನ ವರುಷಕ್ಕೆ ಮತ್ತೆ ಬೇಸಾಯ ಮಾಡಬೇಕೆಂದರೆ ಸಾಲ ಮಾಡಿಯೇ ಬೀಜ, ಗೊಬ್ಬರ ತೆಗೆದುಕೊಳ್ಳುವ ಪರಿಸ್ಥಿತಿ ಮಾತ್ರ ರೈತಾಪಿಗಳಿಗೆ ತಪ್ಪುತ್ತಿಲ್ಲ. ಆದರೆ ರೈತನ ಪರಿಶ್ರಮದ ಫಲವನ್ನು ಮಧ್ಯವರ್ತಿಗಳು ಮತ್ತು ವ್ಯಾಪಾರಿಗಳು ಪಡೆದುಕೊಳ್ಳುತ್ತಾರೆ ಹೊರತು ರೈತರು ತಮ್ಮ ಶ್ರಮಕ್ಕೆ ತಕ್ಕ ಪ್ರತಿಫಲವನ್ನು ಪಡೆಯುವಲ್ಲಿ ವಂಚಿತರಾಗುತ್ತಿದ್ದಾರೆ. ಹಾಗಾಗಿ ಇವತ್ತು ಕೃಷಿಯ ಬಗೆಗೆ ಜನರಲ್ಲಿ ನಿರಾಶಕ್ತಿ ಕಂಡು ಬರುತ್ತದೆ.

ಅಲ್ಲದೆ ಅತಿವೃಷ್ಟಿ - ಅನಾವೃಷ್ಟಿಯಿಂದಾಗಿ ಕೃಷಿಕರಿಗೆ ತಮ್ಮ ಶ್ರಮದ ಲಾಭದ ಬಗೆಗೆ ಯಾವುದೇ ರೀತಿಯ ಖಾತರಿಗಳಿರುವುದಿಲ್ಲ. ಇತ್ತೀಚೆಗೆ ಕೃಷಿಕರು ಲಾಭಕ್ಕಿಂತ ನಷ್ಟವನ್ನೇ ಹೆಚ್ಚಾಗಿ ಅನುಭವಿಸುತ್ತಿರುವುದರಿಂದ ಕೆಲವರು ಆತ್ಮಹತ್ಯೆಗಳಿಗೆ ಮೊರೆ ಹೋದ ದುರಂತಗಳು ನಮ್ಮ ಮುಂದಿವೆ.

* * * * *

# ಅಧ್ಯಾಯ ೪

# ಭೂಮಿ ಮತ್ತು ಹೆಣ್ಣಿನ ಸಮೀಕರಣ

೪.೧ ಭೂಮಿಯನ್ನು ಹೆಣ್ಣಾಗಿ ಪರಿಭಾವಿಸುವ ಕ್ರಮ

೪.೨ ಹೆಣ್ಣನ್ನು ಭೂಮಿಯಂತೆ ಪರಿಭಾವಿಸುವ ಕ್ರಮ

## ಅಧ್ಯಾಯ ೪

# ಭೂಮಿ ಮತ್ತು ಹೆಣ್ಣಿನ ಸಮೀಕರಣ

**ಈ** ಅಧ್ಯಾಯವು ಭೂಮಿ ಮತ್ತು ಹೆಣ್ಣಿನ ಬಗೆಗೆ ಇರುವ ಸಾಮಾಜಿಕ ಗ್ರಹಿಕೆಗಳೇನು ಎನ್ನುವುದನ್ನು ತಿಳಿಯುವ ಉದ್ದೇಶದ ಹಿನ್ನೆಲೆಯಲ್ಲಿ ರೂಪುಗೊಂಡಿರುವುದು. ಭೂಮಿ ಮತ್ತು ಹೆಣ್ಣನ್ನು ಹೇಗೆ ಸಮೀಕರಿಸಿಕೊಂಡು ಬರಲಾಗಿದೆ ಎಂಬುದನ್ನು ಕೆಲವು ಪುರಾಣದ ಉಲ್ಲೇಖಗಳ ಮೂಲಕ, ಸಾಹಿತ್ಯ ಕೃತಿಗಳಲ್ಲಿನ ಉಲ್ಲೇಖಗಳ ಮೂಲಕ, ಜನಪದ ತ್ರಿಪದಿಗಳಲ್ಲಿನ ಉಲ್ಲೇಖಗಳ ಮತ್ತು ಆಚರಣೆಗಳ ಮೂಲಕ ಆಧಾರ ಸಮೇತವಾಗಿ ಸ್ಪಷ್ಟಪಡಿಸುತ್ತಾ, ಯಾಕಾಗಿ ಭೂಮಿ ಮತ್ತು ಹೆಣ್ಣನ್ನು ಸಮೀಕರಿಸಿಕೊಂಡು ಬರಲಾಗಿದೆ? ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಪೂಜಿಸುವ, ಆರಾಧಿಸುವ, ಗೌರವಿಸುವ ಕ್ರಮ ಮತ್ತು ಹೆಣ್ಣಿನ ಗುಣ ಸ್ವಭಾವಗಳಿಗೆ ಭೂಮಿಯ ಹೋಲಿಕೆ ಕೊಡುವ ಇಲ್ಲವೆ ಹೆಣ್ಣನ್ನು ಭೂಮಿಯಷ್ಟೆ ಶ್ರೇಷ್ಠ ಎಂದು ವೈಭವೀಕರಿಸುವುದರ ಹಿಂದಿರುವ ತಾತ್ವಿಕತೆ ಏನು ಎಂಬುದನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಪ್ರಾಚೀನ ಮಾನವರಿಗೆ ಪ್ರಕೃತಿಯ ಪ್ರಕ್ರಿಯೆಗಳು ರಹಸ್ಯಮಯವೂ, ನಿಗೂಢವೂ ಆಗಿ ತೋರುತ್ತಿದ್ದವು. ಹಾಗಾಗಿ ಅವುಗಳ ಬಗೆಗೆ ಅವರಿಗೆ ಭಯ, ಭೀತಿ, ಬೆರಗು ಅಚ್ಚರಿಯ ಭಾವಗಳಿದ್ದವು. ಜೊತೆಗೆ ಅವುಗಳ ಬಗೆಗೆ ಗೌರವದ ಭಾವನೆಯನ್ನು ಹೊಂದಿ ಪ್ರಕೃತಿಯನ್ನು ದೈವವಾಗಿ ಆರಾಧಿಸುತ್ತಿದ್ದರು. ಅದೇ ರೀತಿ ಹೆಣ್ಣಿನ ಋತುಸ್ರಾವ, ಗರ್ಭ ಧರಿಸುವಿಕೆ ಮತ್ತು ಮಗುವಿಗೆ ಜನ್ಮನೀಡುವ ಕ್ರಿಯೆಗಳು ಗಂಡಿನಲ್ಲಿ ವಿಸ್ಮಯ ಹುಟ್ಟಿಸಿದ ನಿಗೂಢ ಅಂಶಗಳಾಗಿದ್ದವು. ಹೊಸ ಜೀವಕ್ಕೆ ಜನ್ಮ ನೀಡುವ ಶಕ್ತಿ ಹೆಣ್ಣಿಗೆ ಮಾತ್ರವೇ ಇದ್ದುದು ಎಂದು ಭಾವಿಸಿದ ಅವರಿಗೆ ಸಂತಾನೋತ್ಪತ್ತಿಯಲ್ಲಿ ಗಂಡಿನ ಪಾತ್ರವೂ ಇರುತ್ತದೆ ಎಂಬುದು ತಿಳಿದಿರಲಿಲ್ಲ. ಹಾಗಾಗಿ ಆ ಕಾಲಕ್ಕೆ ಹೆಣ್ಣಿಗೆ ಮಕ್ಕಳನ್ನು ಹೆರುವ ವಿಶೇಷ ಶಕ್ತಿ ಇದೆ ಎಂದು ಭಾವಿಸಿ ಅವಳಿಗೆ ಹೆಚ್ಚಿನ ಗೌರವಾದರಗಳನ್ನು ಕೊಡುತ್ತಿದ್ದರು. ಒಟ್ಟಾರೆ ಪ್ರಾಚೀನ ಮಾನವರಿಗೆ ಹೆಣ್ಣು ಮತ್ತು ಪ್ರಕೃತಿ ಈ ಎರಡೂ ಅಂಶಗಳು ನಿಗೂಢವಾಗಿದ್ದವು. ಆ ಕಾರಣಕ್ಕಾಗಿ ಅವುಗಳ ಬಗೆಗೆ ಏಕಕಾಲಕ್ಕೆ ಭಯ ಮತ್ತು ಭಕ್ತಿಯ ಭಾವಗಳು ಬೆಳೆದಿರಬೇಕೆಂದು ಈಗಾಗಲೇ ಅನೇಕ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಹೀಗೆ "ಆಹಾರೋತ್ಪಾದನಾ ಸಾಮರ್ಥ್ಯ ಮತ್ತು ಸಂತಾನ ಸೃಷ್ಟಿ ಇವೆರಡೂ ಹೆಣ್ಣಿಗೆ ಇರುವಂಥ ಮಾಂತ್ರಿಕ ಶಕ್ತಿ ಎಂಬುದು ಪ್ರಾಚೀನ ಮಾನವರ ತಿಳುವಳಿಕೆಯಾಗಿತ್ತು. ಹೆಣ್ಣಿನ ಗರ್ಭದಿಂದ ಶಿಶುವೊಂದು ಹೊರಬರುವ ರೀತಿಗೂ ಭೂಮಿಯೊಳಗಿನಿಂದ ಸಸ್ಯವೊಂದು ಕಾಣಿಸಿಕೊಳ್ಳುವುದಕ್ಕೂ ಇರುವ ಹೋಲಿಕೆಯನ್ನು ಅವರು ಕಂಡುಕೊಂಡರು. ಬೇಸಾಯದ ಮೂಲಕ ಬದುಕಿನ ಅವಶ್ಯಕತೆಯಾಗಿದ್ದ ಆಹಾರ ಪೂರೈಕೆ ಚೆನ್ನಾಗಿ ಸಾಗುತ್ತಿದ್ದ ಪರಿಸರದಲ್ಲಿ ಫಸಲನ್ನು ನೀಡಬಲ್ಲ ನೆಲದ ಶಕ್ತಿಯೂ ಜೀವಿಗೆ ಜನ್ಮ ನೀಡುವ ಹೆಣ್ಣಿನ ಸೃಷ್ಟಿ ಸಾಮರ್ಥ್ಯವೂ ಒಂದೇ ರೀತಿಯಲ್ಲಿ ಕಂಡವು. ಅಂಥ ಫಲವಂತಿಕೆಯನ್ನು ಆರಾಧಿಸುವ ನಂಬಿಕೆ ಆಚರಣೆಗಳು ಹುಟ್ಟಿಕೊಂಡವು. ಹೀಗೆ ಭೂಮಿಯೂ, ತಾಯಿಯೂ ಒಂದೇ ಆಗಿ ಭೂಮಿ-ತಾಯಿಯ **(Earth-Mother)** ಪರಿಕಲ್ಪನೆ ಬೆಳೆಯಿತು" (ಬಿ.ಎನ್. ಸುಮಿತ್ರಾಬಾಯಿ, ೨೦೦೦, ಪು. ೪೯೫).

ವೇದಗಳ ಕಾಲದಲ್ಲಿ ಭೂಮಿಯು ಹೆಣ್ಣಿನ ರೂಪದಲ್ಲಿ ಗೌರವಕ್ಕೆ ಒಳಗಾಗುತಿತ್ತು. "ಋಗ್ವೇದಕಾಲೀನ ಕಲ್ಪನೆಯಲ್ಲಿ ಆಕಾಶವೇ ತಂದೆ ಭೂಮಿಯೇ ತಾಯಿ. ಇವರಿಬ್ಬರ ಮುಖಾಮುಖಿ ಸಮಾಗಮದಿಂದ ಭೂಮಿಯು ಗರ್ಭಧರಿಸಿ ಬಗೆಬಗೆಯ ಸೃಷ್ಟಿ ಜೀವಿಗಳಿಗೆ ಕಾರಣಳಾದಳು" (ಜ್ಯೋತ್ಸ್ನಾ ಕಾಮತ್, ೧೯೯೯, ಪು.೨೩) ಎಂಬ ನಂಬಿಕೆ ಜನರಲ್ಲಿರುವುದನ್ನು ಕಾಣುತ್ತೇವೆ. ಅಂದರೆ ಭೂಮಿಯೂ ಕೂಡಾ ಒಂದು ಹೆಣ್ಣು. ಅವಳು ಹೆಣ್ಣಿನಂತೆ ಗರ್ಭಧರಿಸಿ ಫಲ ನೀಡುತ್ತಾಳೆ ಎಂದು ಆ ಕಾಲಕ್ಕೆ ತಿಳಿಯಲಾಗಿತ್ತು.



ಮಕ್ಕಳನ್ನು ಹೆರುವ ತಾಯಿಯಂತೆಯೇ, ಪ್ರಕೃತಿಯೂ ಫಲವಂತಳಾಗಿದ್ದಾಳೆಂದೇ ಪ್ರಕೃತಿಯನ್ನು ದೇವರೆಂದು ಗುರುತಿಸಲಾಗಿದೆ. ಪ್ರಕೃತಿ ಅಥವಾ ಭೂಮಿಯನ್ನು ದೈವವಾಗಿ ಪರಿಭಾವಿಸಿಕೊಂಡು ಹೆಣ್ಣಿನಾಕೃತಿಯಲ್ಲಿ ಪೂಜಿಸಿದ ಬಗ್ಗೆ ಇತಿಹಾಸವೂ ದೊರೆಯುತ್ತದೆ.

"ಇತ್ತೀಚೆಗೆ ನಾಲ್ಕೈದು ದಶಕಗಳಲ್ಲಿ ಕರ್ನಾಟಕ, ಆಂಧ್ರ, ಮಹಾರಾಷ್ಟ್ರಗಳಲ್ಲಿ ಉತ್ಖನನದಿಂದ ದೊರೆತ ಕೆಲವು ಸ್ತ್ರೀ ವಿಗ್ರಹಗಳು ದೊರೆತಿವೆ. ಅವು ಶಿರೋಹೀನವಾಗಿದ್ದು ಕೈಯಲ್ಲಿ ಕಮಲ ಹಿಡಿದಂತಹವುಗಳಾಗಿದ್ದು ಕೇವಲ ದಿಡವಿದ್ದು, ಯೋನಿ ಹಾಗೂ ಸ್ತನ ಪ್ರದೇಶಗಳನ್ನು ಸ್ಫುಟವಾಗಿ ತೋರಿಸುವಂತವು. ಜೊತೆಗೆ ಸ್ತ್ರೀಯ ಸಂಭೋಗಾವಸ್ಥೆಯ ಭಂಗಿಯನ್ನು ಸೂಚಿಸುವಂತಹವುಗಳಾಗಿವೆ. ಅವುಗಳಲ್ಲಿ ಬಿಜಾಪುರ ಜಿಲ್ಲೆಯ ಮಹಾಕೂಟ, ಬಾದಾಮಿ, ಜಾಲಿಹಾಳ, ಸಿದ್ದನಕಲ್ಲು, ಬೀಳಗಿ, ನಾಗರಾಳಗಳಲ್ಲಿ ಗುಲ್ಬರ್ಗಾದ ಮಣ್ಣೂರು, ಸನ್ನತಿಗಳಲ್ಲಿ, ಬೆಳಗಾವಿಯ ಮಜತಿಯಲ್ಲಿ, ಶಿವಮೊಗ್ಗದ ಬಳ್ಳಿಗಾವೆಯಲ್ಲಿ, ಆಂಧ್ರದ ನಾಗರ್ಜುನಕೊಂಡ ಆಲಂಪುರಗಳಲ್ಲಿ, ಮಹಾರಾಷ್ಟ್ರದ ಜೋಕರ್ದನ, ನಾಂದೇಡ, ಮಾಹುರ ಮುಂತಾದ ಸ್ಥಳಗಳಲ್ಲಿ ದೊರೆತ ಸ್ತ್ರೀ ವಿಗ್ರಹಗಳು ವಿದ್ವಾಂಸರ ಕುತೂಹಲವನ್ನು ಕೆರಳಿಸಿದ್ದು, ಬಗೆಬಗೆಯ ವಿಶ್ಲೇಷಣೆ ವಿವೇಚನೆಗಳಿಗೆ ಒಳಗಾಗಿ ಅವುಗಳ ಬಗ್ಗೆ ವಿವಿಧ ಬಗೆಯ ಅಭಿಪ್ರಾಯಗಳು ವ್ಯಕ್ತವಾಗಿವೆ. ನದಿ ಕೊಳ್ಳಗಳಲ್ಲಿ ದೊರೆತ ಹೆಣ್ಣಿನ ಮೂರ್ತಿಗಳು ಬಹಳ ಪ್ರಾಚೀನವಾಗಿವೆ. ವೇದಕಾಲದಿಂದ

ಪ್ರಚಲಿತವಿದ್ದ ಉತ್ತಾನಪಾದ ಅದಿತಿ(ಭೂಮಿ)ಯ ಪ್ರತಿರೂಪವನ್ನು ಇವುಗಳಲ್ಲಿ ಕಾಣಬಹುದು ಎಂದು ಕೆಲವರು ಅಭಿಪ್ರಾಯಪಟ್ಟರೆ, ಕೆಲವರು ಒಳ್ಳೆ ಮಳೆ ಬೆಳೆ ನಿರೀಕ್ಷೆಯಲ್ಲಿ ಹಿಂದಿನವರು ಕೈಗೊಳ್ಳುತ್ತಿದ್ದ ಭೂಮಿ ಪೂಜೆಯ ಸಂಕೇತದ ವಿಗ್ರಹಗಳು ಎಂದಿರುವರು. ಪ್ರಾದೇಶಿಕ ಜಾನಪದ ದೇವತೆಯ ಕೃಷಿ ರೂಪಗಳು ಇದ್ದು, ಕಮಲದ ಹೂ, ಫಲಶಕ್ತಿ ಸೂಚಿಸುತ್ತದೆ ಎಂದು ಕೆಲವರು ಯೋಚಿಸಿದರು" (ಅದೇ, ಪು.೯-೧೦). ಈ ವಿವರಗಳಿಂದ ಭೂಮಿಯನ್ನು ಹೆಣ್ಣು ದೈವ ಎಂದು ಪೂಜಿಸಲಾಗುತ್ತಿದ್ದರೆಂದು ತಿಳಿದುಬರುತ್ತದೆ.

ಹೀಗೆ ಆದಿಮಾನವನು "ತಾನು ದಿನವೂ ನೋಡುತ್ತಿದ್ದ, ಅನುಭವಿಸುತ್ತಿದ್ದ ಸೃಷ್ಟಿಯ ವ್ಯಾಪಾರಗಳನ್ನು ತನಗೆ ಪರಿಚಿತವಿದ್ದ ವಾತಾವರಣದಲ್ಲಿ ಅರ್ಥೈಸಿಕೊಳ್ಳಲು ಯತ್ನಿಸಿದ. ಕ್ರಮೇಣ ಮಳೆ-ಬೆಳೆ ಸಮೃದ್ಧಿಯನ್ನು ಕೊಡಮಾಡುವ ಅದೃಶ್ಯ ಶಕ್ತಿಯನ್ನು ರೂಪಿಸಲು ಶ್ರಮಪಟ್ಟು, ಸಂತತಿ ಬರಲು, ಅದು ಆಹಾರಾದಿಗಳನ್ನು ಪಡೆದು ಬೆಳೆಯಲು ಕಾರಣಗಳಾದ ಜನನಿಯನ್ನೇ ಬೃಹತ್ ಸೃಷ್ಟಿರೂಪದಲ್ಲಿ ಕಂಡ, ಪೂಜಿಸಿದ. ಸಫಲತೆಗೆ ಅವುಗಳನ್ನು ಪ್ರಾರ್ಥಿಸಿದ. ಸೃಷ್ಟಿ-ಪುಷ್ಟಿ (ಜನನ ಹಾಗೂ ಪೋಷಣೆ)ಗೆ ಹೆಣ್ಣೇ ಕಾರಣ! ಅದರಂತೆ ಕಾಳು, ಹಣ್ಣು ಬೆಳೆಗೆ ಕಾರಣವಾದ ಭೂಮಿಯೂ ಹೆಣ್ಣು ದೇವತೆಯೇ! ಎಂಬ ಕಲ್ಪನೆ ಅವನಲ್ಲಿ ಸ್ಥಿರವಾಗಿ ಬೇರುಬಿಟ್ಟ ಯುಗದಲ್ಲಿ ಈ ವಿಗ್ರಹಗಳ ಮೂಲವನ್ನು ಹುಡುಕಬಹುದು. ಚರಿತ್ರೆ ಹಾಗೂ ಉತ್ಖನನಗಳ ದೃಷ್ಟಿಯಿಂದ ಪ್ರಾಗೈತಿಹಾಸ ಕಾಲದಿಂದಲೂ ಇಂಥ ವಿಗ್ರಹಗಳು ಕಂಡುಬರುತ್ತವೆ. ನಮ್ಮಲ್ಲಿ ಮೂರು ಸಹಸ್ರ ವರ್ಷಗಳಿಂದಲೂ ಸೃಷ್ಟಿಗೆ ಕಾರಣಗಳಾದ ಭೂಮಾತೆಯ ಪೂಜೆ ಬಳಕೆಯಲ್ಲಿರುವುದನ್ನು ಗುರುತಿಸಬಹುದು. ಯೋನಿ ಹಾಗೂ ಸ್ತನಗಳಿಗೆ ಪ್ರಾಧಾನ್ಯ ಕೊಟ್ಟ ಈ ವಿಗ್ರಹಗಳು ಸಫಲತೆ, ಸಮೃದ್ಧಿಗಳ ಆರಾಧ್ಯ ದೇವತೆಯ ರೂಪಗಳಾಗಿವೆ" (ಅದೇ, ಪು. ೧೧). ಹೀಗೆ ಪ್ರಾಚೀನ ಕಾಲದಿಂದಲೂ ಭೂಮಿಯನ್ನು ಹೆಣ್ಣು ಎಂದು ಮತ್ತು ಅದನ್ನು ದೈವವೆಂದು ಭಾವಿಸಿ ಪೂಜಿಸಲಾಗಿದೆ. ಈಗಲೂ ಭೂಮಿಯ ಬಗೆಗೆ ಜನರಲ್ಲಿ ಈ ಬಗೆಯ ಮನೋಭಾವವಿದ್ದು ಈಗಲೂ ಭೂಮಿಯು ಪೂಜಿಸಲ್ಪಡುವುದನ್ನು ನಾವು ಗಮನಿಸಬಹುದು.

ಹೀಗೆ ಭೂಮಿ ಮತ್ತು ಹೆಣ್ಣನ್ನು ಸಮೀಕರಿಸಿ ನೋಡಲಾಗುವ ಕ್ರಮದಲ್ಲಿ ಅಥವಾ ಭೂಮಿ-ಹೆಣ್ಣಿನ ಸಮೀಕರಣದಲ್ಲಿ ಈ ಕೆಳಗಿನ ಎರಡು ಬಗೆಗಳನ್ನು ಗುರುತಿಸಬಹುದು.

೧. ಭೂಮಿಯನ್ನು ಹೆಣ್ಣಾಗಿ ಪರಿಭಾವಿಸುವ ಕ್ರಮ

೨. ಹೆಣ್ಣನ್ನು ಭೂಮಿಯಂತೆ ಎಂದು ಪರಿಭಾವಿಸುವ ಕ್ರಮ

### ೪.೧ ಭೂಮಿಯನ್ನು ಹೆಣ್ಣಾಗಿ ಪರಿಭಾವಿಸುವ ಕ್ರಮ

ಭೂಮಿಯನ್ನು ಒಂದು ಹೆಣ್ಣು ಎಂದು ಪರಿಭಾವಿಸಿದ ಸಂಸ್ಕೃತಿ ನಮ್ಮದು. ಆ ಕಾರಣಕ್ಕಾಗಿಯೇ ಭೂಮಿಯನ್ನು ಧರಿತ್ರಿ, ಧರಣಿ, ಅವನಿ, ಅನಂತೆ, ಕುಂಬಿನಿ, ಗಹ್ವರಿ, ಧಾತ್ರಿ, ಪೃಥ್ವಿ, ಪೊಡವಿ, ಭುವಿ,

ಭೂದೇವಿ, ಭೂಮಿಕೆ, ಭೂಮಾತೆ, ಮಹಿ, ಮೇದಿನಿ, ವಸುಧೆ, ವಸುಂದರೆ, ವಸುಮತಿ, ವಿಪುಲೆ, ಕ್ಷಿತಿ, ಉರ್ವರೆ, ಇಳೆ ಎಂದೆಲ್ಲಾ ಸ್ತ್ರೀ ವಾಚಕ ಹೆಸರುಗಳಿಂದ ಕರೆದುಕೊಂಡು ಬರಲಾಗಿದೆ.

ಹೀಗೆ ಭೂಮಿಯನ್ನು ಹೆಣ್ಣೆಂದು ಪರಿಭಾವಿಸಿದ ಮನುಷ್ಯರ ಆಲೋಚನಾ ಕ್ರಮಕ್ಕೆ ಹಲವು ನಿದರ್ಶನಗಳು ಸಿಗುತ್ತವೆ. ಪ್ರಾಚೀನ ಶಾಸನಗಳಲ್ಲಿ, ಪುರಾಣಗಳಲ್ಲಿ, ಆಚರಣೆಗಳಲ್ಲಿ, ಸಾಹಿತ್ಯದಲ್ಲಿ ಇವುಗಳಲ್ಲೆಲ್ಲಾ ಭೂಮಿಯನ್ನು ಹೆಣ್ಣು ಎಂದು ಕಂಡ ಬಗೆಯನ್ನು ಗಮನಿಸಬಹುದು.

**ಅ. ಶಾಸನದ ಉಲ್ಲೇಖ**

ಪ್ರಾಚೀನ ಶಾಸನಗಳಲ್ಲಿ ಭೂಮಿಯನ್ನು ಹೆಣ್ಣೆಂದು ಪರಿಭಾವಿಸಿದ ಕುರಿತು ಸಾಕ್ಷಿಗಳಿವೆ. ಚಿದಾನಂದಮೂರ್ತಿಯವರು 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ' (ಸಂ.I) ಎಂಬ ಕೃತಿಯಲ್ಲಿ ವ್ಯವಸಾಯಕ್ಕೆ ಸಂಬಂಧಿಸಿದಂತೆ ಶಾಸನಗಳಲ್ಲಿರುವ ಮಾಹಿತಿಯ ಬಗೆಗೆ ಈ ರೀತಿ ಹೇಳಿದ್ದಾರೆ. 'ಇಂದಿನಂತೆಯೇ ಪ್ರಾಚೀನ ಕರ್ನಾಟಕದಲ್ಲಿಯೂ ವ್ಯವಸಾಯವೇ ಅತಿ ಪ್ರಮುಖವಾದ ಜೀವನೋಪಾಯವಾಗಿತ್ತು. ತನ್ನ ಗರ್ಭದಿಂದ ಹೊರಟ ಧಾನ್ಯಾದಿಗಳಿಂದ ಜನರನ್ನು ಸಾಕುವ ಭೂಮಿಯನ್ನು ತಾಯಿಯೆಂದು, ಬೆಳೆಗಳನ್ನು ಬೆಳೆಯುವ ರೈತರನ್ನು ಭೂದೇವಿಯ ಮಕ್ಕಳೆಂದು ಶಾಸನವೊಂದು ಕರೆದಿದೆ' ಎಂದು ಹೇಳಿ ಶಾಸನದ ಒಂದು ಉಲ್ಲೇಖವನ್ನು "ಅನ್ನದಾನ ಸಂಪೂರ್ಣರುಂ ಭೂಮಿ ಪುತ್ರಕರುಮಪ್ಪ ಚಂದಗೌಡ" ಎಂದು ಕೊಟ್ಟಿರುವರು. ಈ ವಿಚಾರಗಳಿಂದ ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಕಂಡ ಬಗೆಗೆ ಒಂದು ನಿರ್ದಿಷ್ಟ ದಾಖಲೆಯು ದೊರೆತಂತಾಗುತ್ತದೆ.

**ಆ. ಪುರಾಣದ ಉಲ್ಲೇಖ**

ಪುರಾಣಗಳಲ್ಲೂ ಸಹ ಭೂಮಿಯನ್ನು ಹೆಣ್ಣು ಎಂದು ಪರಿಭಾವಿಸಿರುವುದಕ್ಕೆ ಕೆಲವು ನಿದರ್ಶನಗಳು ಸಿಗುತ್ತವೆ.

**ಪುರಾಣ : ೧**

"ಭೂದೇವಿ ಮಹಾವಿಷ್ಣುವಿನ ಹೆಂಡತಿ ವರಾಹ (ಅವತಾರ)ದಲ್ಲಿ ಹಿರಣ್ಯಾಕ್ಷ ಭೂಮಿಯನ್ನು ಎತ್ತಿಕೊಂಡು ಹೋಗಿ ನೀರಿನಲ್ಲಿ ಮುಳುಗಿದನು. ಮಹಾವಿಷ್ಣುವು ವರಾಹ ರೂಪವನ್ನು ತಾಳಿ ನೀರಿಗಿಳಿದು ದಾಡೆಯ ಮೇಲೆ ಹೊತ್ತು ಭೂಮಿಯನ್ನು ಮೇಲೆ ತಂದನು. ಹೀಗೆ ಮೇಲೆ ಬಂದ ಭೂಮಿಯು ನೀರಿನ ಮೇಲೆ ಕಮಲದ ಹೂವಿನಂತೆ ತೇಲುತ್ತಿರುವುದನ್ನು ಕಂಡು ಭೂದೇವಿ ಸಂತೋಷಗೊಂಡು ಸುಂದರವಾದ ರೂಪದಿಂದ ಅಲ್ಲಿ ನಿಂತಳು. ಸೂರ್ಯನ ಕಾಂತಿಯನ್ನುಳ್ಳ ಭೂದೇವಿಯನ್ನು ಕಂಡು ಮಹಾವಿಷ್ಣು ಅವಳಲ್ಲಿ ಅನುರಕ್ತನಾಗಿ ದೇವ ವರ್ಷದವರೆಗೂ ಅವಳೊಡನೆ ಸಂಭೋಗ ಮಾಡಿದನು. ಆ ವೇಳೆಯಲ್ಲಿಯೇ ಭೂದೇವಿ ಮಹಾವಿಷ್ಣುವಿನ ಹೆಂಡತಿಯಾಗುವುದು ಇವರಿಬ್ಬರ ಸಂಬಂಧದಿಂದಾಗಿ ಮಂಗಲ ಎಂಬ ಮಗನೊಬ್ಬ ಹುಟ್ಟಿದನು.

ಹಿರಣ್ಯಾಕ್ಷ ಎಂಬ ಅಸುರನಿಂದ ಭೂದೇವಿಗೆ ನರಕಾಸುರ ಹುಟ್ಟಿದನು. ಹಿರಣ್ಯಾಕ್ಷನೇ ಹಂದಿಯ ರೂಪದಲ್ಲಿ ಭೂದೇವಿಯನ್ನು ತನ್ನ ದಾಡೆಯ ಮೇಲಿಟ್ಟುಕೊಂಡು ಪಾತಾಳಕ್ಕೆ ಹೋದನು. ಹೀಗೆ ಭೂಮಿಯು ಅವನ ಸ್ಪರ್ಶವನ್ನು ಪಡೆದ ಮೇಲೆ ಗರ್ಭಿಣಿಯಾದಳು. ನರಕಾಸುರ ಈ ರೀತಿಯ ಸ್ಪರ್ಶದಿಂದ ಹುಟ್ಟಿದನೆಂದು ಭಾಗವತದ ದಶಮಿ ಸ್ಕಂದದಲ್ಲಿ ಹೇಳಿರುವುದನ್ನು ಕಾಣಬಹುದು" (ಸಂಗ್ರಹ : ಹರಿಲಾಲ್ ಪವಾರ ೧೯೯೯, ಪು. ೪೩).

**ಪುರಾಣ : ೨**

ವಾಲ್ಮೀಕಿ ರಾಮಾಯಣದ ಬಾಲಕಾಂಡದಲ್ಲಿ ಪಾರ್ವತಿಯು ಭೂದೇವಿಗೆ ಶಾಪ ಹಾಕಿದ ಕಥೆಯನ್ನು ಹೇಳಲಾಗಿದೆ. ಒಮ್ಮೆ ಶಿವ ಮತ್ತು ಪಾರ್ವತಿಯರು ವರ್ಷಗಟ್ಟಲೆ ಲೈಂಗಿಕ ಸುಖದಲ್ಲಿ ನಿರತರಾಗಿದ್ದಾಗ ಭೂಮಿಯು ಅಡಿಯಿಂದ ನಡುಗಲಾರಂಭಿಸಿತು. ದೇವತೆಗಳೆಲ್ಲಾ ಶಿವನ ಬಳಿಗೆ ಹೋಗಿ ಭೋಗದಿಂದ ವಿಮುಖನಾಗುವಂತೆ ಬೇಡಿಕೊಂಡರು. ಶಿವನು ಒಪ್ಪಿಕೊಂಡನು. ಆದರೆ ಶಿವನಿಂದ ಹೊರಚೆಲ್ಲಿದ ವೀರ್ಯವು ಭೂಮಿಯ ಮೇಲೆ ಬಿದ್ದಿತು. ಇದರಿಂದ ಕೋಪಗೊಂಡ ಪಾರ್ವತಿಯು ಭೂಮಿದೇವಿಗೆ 'ಭೂಮಿದೇವಿ' ನೀನು ನಾನಾ ರೂಪಗಳನ್ನು ತಾಳಿ ಹಲವರ ಹೆಂಡತಿಯಾಗು ಒಬ್ಬ ಮಗನಿಗೆ ಜನ್ಮಕೊಡುವ ಕಾರ್ಯದಿಂದ ನನ್ನನ್ನು ತಡೆದದ್ದರಿಂದ ಮುಂದೆ ನಿನಗೂ ಮಕ್ಕಳು ಆಗದೆ ಇರಲಿ ಎಂದು ಶಾಪಕೊಟ್ಟಳು (ಸಂಗ್ರಹ : ಅದೇ, ಪು. ೪೩).

'ಪುರಾಣಗಳಲ್ಲಿ ಸತ್ಯಸಂಗತಿಗಳನ್ನು ಹೇಳುವುದು ಕಷ್ಟ ಸಾಧ್ಯವಾದರೂ ಈ ಪುರಾಣಗಳ ಹಿನ್ನೆಲೆಯಲ್ಲಿ ಎಷ್ಟೋ ವಾಸ್ತವ ಹುದುಗಿಕೊಂಡಿರುತ್ತವೆ ಎಂಬುದನ್ನು ಅಲ್ಲಗಳೆಯಲಾಗದು' (ಅದೇ, ಪು. ೪೩). ಕಾರಣ ಈ ಪುರಾಣಗಳು ಭೂಮಿಯ ಬಗೆಗೆ ಏನು ಹೇಳುತ್ತವೆ? ಭೂಮಿಯನ್ನು ಯಾವ ರೂಪದಲ್ಲಿ ಕಂಡಿವೆ? ಎಂಬುದನ್ನು ಇಲ್ಲಿ ಗಮನಿಸಲಾಗಿದೆ.

ಪುರಾಣ ಒಂದರಲ್ಲಿ ಮಹಾವಿಷ್ಣುವು ಭೂದೇವಿಯಲ್ಲಿ ಅನುರಕ್ತನಾಗುವನು. ಭೂಮಿಯೊಡನೆ ಸಂಭೋಗ ಮಾಡಿದನು ಎನ್ನುವ ವಿಚಾರ ಮತ್ತು ಭೂದೇವಿ ಮಹಾವಿಷ್ಣುವಿನ ಹೆಂಡತಿಯಾಗಿ, ಇವರಿಬ್ಬರ ಸಂಬಂಧದಿಂದ ಮಂಗಲ ಎಂಬ ಮಗ ಹುಟ್ಟುವನು ಎನ್ನುವ ಸಂಗತಿಗಳು ಹಿರಣ್ಯಾಕ್ಷನ ಸ್ಪರ್ಶದಿಂದ ಭೂದೇವಿ ಗರ್ಭಿಣಿಯಾಗಿ ನರಕಾಸುರನಿಗೆ ಜನ್ಮ ನೀಡಿದ ವಿಚಾರಗಳು ಹಾಗೂ ಪುರಾಣ ಎರಡರಲ್ಲಿ "ಪಾರ್ವತಿಯು ಭೂದೇವಿಗೆ ನೀನು ಹಲವರ ಹೆಂಡತಿಯಾಗು" ಎಂದು ಶಾಪ ನೀಡಿದ ಸಂಗತಿಗಳು ಪುರಾಣಗಳಲ್ಲಿ ಭೂಮಿಯನ್ನು ಹೆಣ್ಣು ರೂಪದಲ್ಲಿ ಕಾಣಲಾಗಿದೆ ಎಂಬುದು ಮನವರಿಕೆಯಾಗುತ್ತದೆ. ಭೂಮಿಗೂ ಹೆಣ್ಣಿನಂತೆ ಫಲ ನೀಡುವ, ಸೃಷ್ಟಿಸುವ ಶಕ್ತಿ ಇರುವುದು ತಿಳಿದುಬರುತ್ತದೆ. ಅಲ್ಲದೆ ಪುರಾಣದಲ್ಲಿ ಭೂಮಿ ಕುರಿತು ಹೇಳಿದ ಸಂಭೋಗದ ಕ್ರಿಯೆ, ಗರ್ಭ ಧರಿಸುವ ಕ್ರಿಯೆ, ಜನ್ಮ ನೀಡುವ ಕ್ರಿಯೆಗಳ ಬಗೆಗೆ ಹೇಳಿರುವ ಸಂಗತಿಗಳು ಹೆಣ್ಣಿನ ಜೈವಿಕ ಕ್ರಿಯೆಗಳೊಂದಿಗೆ ಸಾಮ್ಯತೆ ಪಡೆದಿವೆ. ಒಟ್ಟಿನಲ್ಲಿ

ಭೂಮಿಯೂ ಒಂದು ಹೆಣ್ಣಿನಂತೆ ಎಂದು ಭಾವಿಸಿಕೊಂಡಿರುವುದು ಈ ಪುರಾಣಗಳ ಕಥೆಯಿಂದ ತಿಳಿದು ಬರುತ್ತದೆ. ಹೀಗೆ ಭೂಮಿಯ ಉತ್ಪಾದನಾ ಕ್ರಿಯೆಗೂ ಹೆಣ್ಣಿನ ಜೈವಿಕ ಕ್ರಿಯೆಗಳಿಗೂ ಹೋಲಿಕೆ ಇರುವ ಕಾರಣಕ್ಕಾಗಿಯೇ ಭೂಮಿ ಮತ್ತು ಹೆಣ್ಣನ್ನು ಸಮೀಕರಿಸಿ ನೋಡುವ ಆಲೋಚನೆ ಬೆಳೆದು ಬಂದಿದೆ.

**ಇ. ಸಾಹಿತ್ಯ ಕೃತಿಗಳಲ್ಲಿನ ಉಲ್ಲೇಖ**

ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಕಾಣುತ್ತಿರುವ ರೀತಿ ಇಂದು ನಿನ್ನೆಯದಲ್ಲ. ಅದು ಬಹುಕಾಲದಿಂದಲೂ ಬೆಳೆದುಬಂದ ಪರಿಭಾವನೆ ಎಂಬುದಕ್ಕೆ ಕಶ್ಯಪರು ಸಂಸ್ಕೃತದಲ್ಲಿ ಬರೆದ ಕೃಷಿ ಪ್ರಕರಣ ಗ್ರಂಥದಿಂದ ಅನುವಾದಿಸಿದ ಶ್ಲೋಕದಲ್ಲಿ ಹೇಳಲಾದ ಈ ಕೆಳಗಿನ ವಿವರವನ್ನು ಗಮನಿಸಬಹುದು.

೨೩೧ನೇ ಶ್ಲೋಕದಲ್ಲಿ 'ನಿಷ್ಕಪಟ ಭಾವನೆಯಿಂದ ಭಕ್ತಿಪೂರ್ವಕವಾಗಿ ಭೂದೇವಿ ಮತ್ತು ಧಾನ್ಯ ಲಕ್ಷ್ಮಿಯರನ್ನು ನೆನೆದು ಪೂಜಿಸಬೇಕು. ಆ ಬಳಿಕ ಕೃಷಿ ಕಾರ್ಯಗಳಿಗೆ ಬೇಕಾದ ಅವಶ್ಯಕ ವಸ್ತುಗಳನ್ನು ಸಂಗ್ರಹಿಸಲು ಪ್ರಾರಂಭಿಸಬೇಕು' ಎಂಬ ವಿವರಗಳಿವೆ (ಉದ್ಧೃತ : ಪ್ರಾಚೀನ ಭಾರತದ ಬೇಸಾಯ, ಸಿ.ಕೆ. ಕುಮುದಿನಿ (ಅನು.), ೧೯೮೭; ೫೭) ಎಂದು ಹೇಳಲಾಗಿದೆ. ಅದೇ ಗ್ರಂಥದ ೨೩೧, ೨೩೮, ೨೩೯, ೨೪೦, ೨೫೨, ೨೫೪ ನೇ ಶ್ಲೋಕಗಳಲ್ಲಿ ಭೂದೇವಿ, ಧಾನ್ಯಲಕ್ಷ್ಮಿ ಎಂದಲ್ಲದೆ ಭೂಮಿಯನ್ನು ತಾಯಿ, ಮಾತೆ ಎಂದು ಕರೆದಿರುವುದು ಕಂಡುಬರುತ್ತದೆ.[1] ಅಂದರೆ ಇಲ್ಲಿ ಭೂಮಿಯನ್ನು ಧಾನ್ಯವನ್ನು ಹೆಣ್ಣಿನ ರೂಪದಲ್ಲಿ ಪರಿಭಾವಿಸಿದ ರೀತಿಗೆ ಇದೊಂದು ನಿದರ್ಶನವಾಗಿದೆ.

**ಈ. ಜನಪದ ತ್ರಿಪದಿಗಳಲ್ಲಿನ ಉಲ್ಲೇಖ**

ಏಳುತ ನಾನೆದ್ದು ಯಾರ್‍ಯಾರ ನೆನೆಯಲಿ
ಎಳ್ಳು ಜೀರಿಗೆ ಬೆಳೆಯೊಳ ಭೂಮಿತಾಯಿ
ಎದ್ದೊಂದು ಗಳಿಗಿ ನೆನದೇನ
ಬಿತ್ತುವ ತಮ್ಮಯ್ಯ ಎತ್ತಿಗೇನಂದಾನ
ಹತ್ತು ಖಂಡಗ ಬೆಳಿಲೆಂದ | ಭೂಮಿತಾಯಿ
ಮುತ್ತಿನುಡಿಯಕ್ಕಿ ನಿನಗೆಂದ
ಭೂದೇವಿ ನಿನ್ನ ಮಗಳೆಲ್ಲಿ ಹೋದಳು
ನೀನರಿಯದ ಸ್ಥಳವಿಲ್ಲ
ಹೋಗಬಹುದೇ ಜಗಜಗದಾ ಅಗ್ನಿಲಿ
ಹೋಗಬಹುದೇ ಗಗನವನು

ಹೋಗಬಹುದೇ ಗಗನದಗಲ ದಾರಿಯ ನರಿ
ಮೃಗ ಬೈಲಿಗಾಯ್ತಲ್ಲೋ ತಮ್ಮ
ಅಚ್ಚಂಬಲಿ ಅಳಿಯಂಬಲಿ
ಹಿತ್ತಲಾಗಳ ಧಾರಿಹೀರಿಕಾಯಿ
ಒಪ್ಪಿಕೊಳ್ಳ ಭೂಮಿತಾಯಿ ಹೂಲಿ ಹೂಲಿ ||

ಹೊಡೆದು ಹೊಸ ಎತ್ತು ಹೂಡ್ಯಾನು ಹೊಸಮಗ
ಕೂಗು ಕೇಳಮ್ಮ ಭೂದೇವಿ | ನಿನ ಮಗ
ಸೆರಗು ಕಟ್ಟಿವನೆ ದುಡಿಯೋಕೆ ||

ಹೊಸಬಂಡಿ ಮೇಲೆ ಹಸುವಿನ ಗೋತ್ರತಂದೆ
ಹಸಿದ ಭೂದೇವಿ ಹಾಕ್ತೀನೆ | ನನ್ನ ತಾಯವ್ವ
ಹಸಿದ ಕಂದವ್ನ ಕಾಯವ್ವ ||

ಮಾರುದ್ದ ಪೈರಾಗಲಿ ಮೊಳದುದ್ದ ತೆನೆಯಾಗಲಿ
ಬಡವನ ಮನಿಗೆ ಸಿರಿಬರಲಿ| ಭೂಮಿತಾಯಿ
ಕಂದಯ್ನ ಹಸಿದು ಇಂಗೋಗ್ಲಿ ||

ಭೂದೇವಿ ನೀಡವ್ವ ಭಾರಿ ಪೈರಾಗ್ಲವ್ವ
ಬಡವನ ಹರಕೆ ಕೇಳವ್ವ | ಭೂತಾಯಿ
ನಿನ್ಗೆ ಜೋಡ್ಯಾಯಿ ಹಣ್ಣು ಬಡಿಸೇನು ||

ಮೇಲಿನ ತ್ರಿಪದಿಗಳಲ್ಲಿ ಭೂಮಿಯನ್ನು `ಭೂಮಿತಾಯಿ, ಭೂದೇವಿ, ತಾಯವ್ವ, ಕಾಯವ್ವ, ಭೂತಾಯಿ` ಎಂದೆಲ್ಲಾ ಕರೆಯಲಾಗಿದೆ. ಇದರಿಂದ ಜನಪದರು ಸಹ ಭೂಮಿಯನ್ನು ತಾಯಿ ರೂಪದಲ್ಲಿ ಅಂದರೆ ಹೆಣ್ಣಿನ ರೂಪದಲ್ಲಿ ಕಂಡಿರುವುದು ತಿಳಿದುಬರುತ್ತದೆ.

**ಉ. ಆಚರಣೆಗಳ ಉಲ್ಲೇಖ**

ಕೃಷಿ ಸಂಬಂಧಿ ಆಚರಣೆಗಳಲ್ಲಿ ಕೂಡಾ ಭೂಮಿಯನ್ನು ಹೆಣ್ಣೆಂದೇ ಭಾವಿಸಿರುವುದನ್ನು ನಾವು ನೋಡುತ್ತೇವೆ. ಉದಾಹರಣೆಗೆ: ಬೆಳೆಯುವ ಭೂಮಿಗೆ ಕೃತಜ್ಞತಾ ಪೂರ್ವಕವಾಗಿ 'ಸೀಗೆ ಹುಣ್ಣಿಮೆ' ಎಂಬ ಹಬ್ಬವನ್ನು ಆಚರಿಸುವರು. ಈ ಆಚರಣೆಯಲ್ಲಿ ಬಗೆಬಗೆಯ ತಿಂಡಿ-ತಿನಿಸುಗಳನ್ನು ಮಾಡಿಕೊಂಡು ಹೊಲಕ್ಕೆ ಹೋಗುವರು. ಆ ದಿನ ಬೆಳೆ ಬೆಳೆದ ಹೊಲದ ಪೂಜೆಯನ್ನು ಮಾಡಿ ತಾವು ತಂದ ಎಲ್ಲಾ

ತಿಂಡಿತಿನಿಸುಗಳನ್ನು ಸೇರಿಸಿ ಹೊಲದ ತುಂಬೆಲ್ಲಾ ಎರಚುವರು. ಇದನ್ನು ಚರಗ ಚಲ್ಲುವುದು ಎಂದು ಕರೆಯಲಾಗುತ್ತದೆ. ಗರ್ಭಿಣಿ ಸ್ತ್ರೀಗೆ ಬಯಕೆ ಊಟವನ್ನು ಒಯ್ಯುವಂತೆ ಬೆಳೆ ಬೆಳೆದು ಫಲ ಕೊಡಲು ಸಿದ್ಧವಾಗಿ ನಿಂತ ಭೂಮಿಗೆ ಚರಗ ಚೆಲ್ಲುವ ಕ್ರಿಯೆ ಭೂಮಿಗೆ ಸಲ್ಲಿಸುವ ಬಯಕೆ ಊಟವೇ ಆಗಿರುತ್ತದೆ. ಹೀಗೆ ಫಲ ನೀಡುವ ಆ ಭೂಮಿಗೆ ವಿವಿಧ ನಮೂನೆಯ ತಿಂಡಿ-ತಿನಿಸುಗಳನ್ನು ಮಾಡಿ ಭೂಮಿಗೆ ಉಣಬಡಿಸುವ ಈ ಆಚರಣೆಯಿಂದ ಭೂಮಿಯನ್ನು ಫಲ ನೀಡುವ ಹೆಣ್ಣಿನಂತೆಯೇ ಪರಿಭಾವಿಸಿರುವುದು ತಿಳಿದುಬರುತ್ತದೆ (ಹೆಚ್ಚಿನ ವಿವರಗಳಿಗಾಗಿ 'ಕೃಷಿ ಸಂಬಂಧಿ ನಂಬಿಕೆ, ಆಚರಣೆಗಳು ಮತ್ತು ಮಹಿಳೆ' ಈ ಅಧ್ಯಾಯವನ್ನು ಗಮನಿಸಿ).

ಹೀಗೆ ಭೂಮಿ ಮತ್ತು ಹೆಣ್ಣನ್ನು ಸಮೀಕರಿಸಿ ನೋಡುವ ಕ್ರಮ ನಮ್ಮಲ್ಲಿ ರೂಢಿಯಲ್ಲಿರುವುದನ್ನು ಕಾಣುತ್ತೇವೆ. ಭೂಮಿ ಮತ್ತು ಹೆಣ್ಣು ಇವೆರಡರ ನಡುವೆ ಕೆಲವಾರು ಹೋಲಿಕೆಗಳಿವೆ. ಆ ಕಾರಣಕ್ಕಾಗಿಯೇ ಹೆಣ್ಣನ್ನು ಭೂಮಿಯನ್ನು ಸಮೀಕರಿಸಿ ನೋಡಲಾಗುತ್ತದೆ. ಭೂಮಿ ಮತ್ತು ಹೆಣ್ಣು ಇವೆರಡು ಫಲ ನೀಡುವಂತವುಗಳು ಎನ್ನುವ ಕಾರಣಕ್ಕೆ ಮುಖ್ಯವಾಗಿ ಭೂಮಿ ಮತ್ತು ಹೆಣ್ಣನ್ನು ಸಮೀಕರಿಸಿ ನೋಡುವ ಕ್ರಮ ಬೆಳೆದು ಬಂದಿದೆ. ಹೆಣ್ಣು; ಮಗುವನ್ನು ಹೊತ್ತು ಹೆತ್ತು ಪಾಲಿಸುವಂತೆ, ಭೂಮಿ; ಮನುಷ್ಯ ಜೀವಿಗಳಿಗೆ ಆಹಾರವನ್ನು ನೀಡಿ ಅವರನ್ನು ಸಲಹುತ್ತದೆ. ಹೀಗೆ ಹೆಣ್ಣು ಮತ್ತು ಭೂಮಿಗಳೆರಡೂ ಪಾಲಿಸುವ-ಪೋಷಿಸುವ ಗುಣವನ್ನು ಪಡೆದಿವೆ. ಅಲ್ಲದೆ ಭೂಮಿ ಒಂದು ಅಭೌತಿಕ ಘಟಕವಾಗಿದ್ದು ತನ್ನ ಮೇಲೆ ಮನುಷ್ಯ ಏನೇ ಕೃತ್ಯಗಳನ್ನು ಎಸಗಿದರೂ ಸಹಿಸಿಕೊಳ್ಳುತ್ತಿದೆ. ಅಂತೆಯೇ ಮಹಿಳೆಯು ಸ್ವಾಭಾವಿಕವಾಗಿ ಸಹನೆಯ ಗುಣ ಹೊಂದಿರುವುದರಿಂದ ಭೂಮಿ ಮತ್ತು ಹೆಣ್ಣನ್ನು ಸಮೀಕರಿಸಲಾಗುತ್ತದೆ. ವಂಶ ಬೆಳೆಸದ ಸ್ತ್ರೀಯನ್ನು ಬಂಜೆ ಎಂದು ಕರೆಯುವರು. ಅಂತೆಯೇ ಫಲ ನೀಡದ ಭೂಮಿಯನ್ನು ಬಂಜರು ಭೂಮಿ (ಬಂಜೆಭೂಮಿ) ಎಂದು ಕರೆಯಲಾಗುತ್ತದೆ. ಹೀಗೆ ಬಂಜೆತನವನ್ನು ಗುರುತಿಸುವಲ್ಲಿಯೂ ಹೆಣ್ಣು ಮತ್ತು ಭೂಮಿಯ ನಡುವೆ ಸಾದೃಶ್ಯತೆಯನ್ನು ಕಲ್ಪಿಸಿಕೊಂಡಿರುವುದನ್ನು ತಿಳಿಯುತ್ತೇವೆ.

ಮೇಲಿನ ಈ ಎಲ್ಲಾ ಕಾರಣಗಳಿಂದ ಭೂಮಿ ಮತ್ತು ಹೆಣ್ಣನ್ನು ಸಮೀಕರಿಸಿ ನೋಡಲಾಗುತ್ತದೆ.

## ೪.೨ ಹೆಣ್ಣನ್ನು ಭೂಮಿಯಂತೆ ಪರಿಭಾವಿಸುವ ಕ್ರಮ

ಹೆಣ್ಣನ್ನು ಭೂಮಿಗೆ ಹೋಲಿಸಿದ ಮತ್ತು ಹೋಲಿಸುವ ನಿದರ್ಶನಗಳು ನಮ್ಮಲ್ಲಿ ಸಾಕಷ್ಟು ದೊರೆಯುತ್ತವೆ. ಪ್ರಾಚೀನ ಕಾಲದ ಜನ ಹೆಣ್ಣನ್ನು ಬೀಜ ಬಿತ್ತುವ ಹೊಲವೆಂದು ಭಾವಿಸಿದ್ದರು. "ಭೂಮಿಯನ್ನು ಸ್ತ್ರೀಯರೊಡನೆ ಹೋಲಿಸುವುದನ್ನು ಸಂತತಿಯ ಬೇರೆ ಬೇರೆ ಹಂತದ ಚಿಂತನೆಯಲ್ಲಿ ಕಾಣಬಹುದು. ರೋಮನ್ ಕಾನೂನಿನ ಪ್ರಕಾರ ತಾಯಿ ಮತ್ತು ಮಣ್ಣು ಸಮಾನರು. ಪ್ರಾಚೀನ ಭಾರತದಲ್ಲಿ ಮದುವೆಯ ಆಚರಣೆಯಲ್ಲಿ ಸ್ತ್ರೀಯನ್ನು ಬೀಜ ಬಿತ್ತುವ ಹೊಲವೆಂದು ಕರೆಯಲಾಗುತ್ತಿತ್ತು. ಮತ್ತು ಅರ್ಚಕನು ಮದುಮಗಳಿಗೆ 'ಅವಳ ಮೇಲೆ ನಿನ್ನ ಬೀಜವನ್ನು ಬಿತ್ತು' ಎಂದು ಹಾರೈಸುತ್ತಿದ್ದನು. ಖುರಾನಿನ

ಪ್ರಕಾರ "ನಿಮ್ಮ ಹೆಂಗಸರು ನಿಮ್ಮ ಹೊಲ ...." (ಉದ್ಧೃತ : ಸಿದ್ದಲಿಂಗಯ್ಯ, ೧೯೯೭, ಪು. ೩೦) ಎಂದು ಭಾವಿಸಿರುವುದನ್ನು ನೋಡಬಹುದು.

ಸಮಾಜ ಪುರುಷರಿಗೆ ಹೆಣ್ಣನ್ನು ಹೇಗೆ ಬೇಕಾದರೂ ಬಳಸಿಕೊಳ್ಳುವ ಅಧಿಕಾರವನ್ನು ಕೊಡಮಾಡಿದೆ. ಹೆಣ್ಣನ್ನು ಒಂದು ಹೊಲದಂತೆ ಕಂಡ ಈ ಮನೋಭಾವದ ಹಿಂದೆ ಸಂಸ್ಕೃತಿಯಲ್ಲಿ ಹೆಣ್ಣನ್ನು ವಸ್ತುವಿನಂತೆ ಬಳಸಿಕೊಂಡು ಬಂದ ಮತ್ತು ವಸ್ತುವಿನಂತೆ ನಡೆಸಿಕೊಂಡು ಬಂದಿರುವುದು ಸ್ಪಷ್ಟವಾಗುತ್ತದೆ.

'ಹೆಣ್ಣಿಗೆ ಭೂಮಿಯಷ್ಟೇ ಸಹನೆ ತಾಳ್ಮೆ ಇದೆ' ಎಂದು ಹೇಳಲಾಗುತ್ತದೆ. ಹೀಗೆ ಹೆಣ್ಣನ್ನು ಭೂಮಿಗೆ ಹೋಲಿಸುವ ಮತ್ತು ಕೆಲವೊಮ್ಮೆ ಹೆಣ್ಣನ್ನು ಭೂಮಿಯಷ್ಟೇ ಶ್ರೇಷ್ಠ ಎಂದು ಹೊಗಳುವ ಸಂಗತಿಗಳನ್ನು ನಾವು ನೋಡುತ್ತೇವೆ. ಬಹುಶಃ ಈ ರೀತಿಯ ಹೊಗಳಿಕೆಯ ಹುನ್ನಾರದ ಹಿಂದೆ ಪುರುಷ ಪ್ರಧಾನ ವ್ಯವಸ್ಥೆಯ ಜಾಣತನವು ಕೆಲಸ ಮಾಡಿರುವ ಸಾಧ್ಯತೆಗಳಿವೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಸ್ವತಂತ್ರ್ಯವಾದ ಒಂದು ಜೈವಿಕ ಘಟಕವಲ್ಲ. ಅವಳು ವ್ಯವಸ್ಥೆಯ ಭಾಗವಾಗಿರುವುದರಿಂದ ಆ ವ್ಯವಸ್ಥೆಯ ಅಭಿರುಚಿಗನುಗುಣವಾಗಿ ನಡೆಯಬೇಕಾಗಿರುತ್ತದೆ. ಹೆಣ್ಣು ಹೇಗಿರಬೇಕು, ಹೇಗಿರಬಾರದು ಎನ್ನುವ ಸಂಗತಿಯೂ ಅಷ್ಟೆ ಅದು ಆಕೆಯೊಬ್ಬಳ ನಿರ್ಧಾರವಾಗಿರದೆ ಒಟ್ಟು ವ್ಯವಸ್ಥೆಯ ನಿರ್ಧಾರವಾಗಿರುತ್ತದೆ. ಅಂದರೆ ಹೆಣ್ಣಿನಲ್ಲಿ ಯಾವ ಯಾವ ಗುಣಗಳಿರಬೇಕು, ಯಾವ ಯಾವ ಗುಣಗಳಿರಬಾರದು ಎಂಬುದನ್ನು ಅವಳನ್ನೊಳಗೊಂಡ ವ್ಯವಸ್ಥೆಯೇ ಅಂದರೆ ಪುರುಷ ಪ್ರಧಾನ ವ್ಯವಸ್ಥೆಯೇ ನಿರ್ಧರಿಸುತ್ತದೆ. ಹೀಗೆ ಹೆಣ್ಣು ಭೂಮಿಯಂತೆ ಎಂದು ಪರಿಭಾವಿಸಿರುವ ಹಿಂದೆ ಹೆಣ್ಣು ಭೂಮಿಯ ಹಾಗೆ ಇರಬೇಕು ಎನ್ನುವ ಉದ್ದೇಶವೂ ಇರುತ್ತದೆ. ಈಗಾಗಲೇ ಹೇಳಿದಂತೆ ಭೂಮಿ ಒಂದು ಅಭೌತಿಕ ಘಟಕ. ಅದಕ್ಕೆ ಜೀವವಿಲ್ಲ. ಈ ಭೂಮಿ ಎಷ್ಟೆಲ್ಲ ಜನರನ್ನು ಸಸ್ಯ ಸಂಪತ್ತನ್ನು, ಪ್ರಾಣಿಗಳನ್ನು ಇನ್ನೂ ಅನೇಕ ಮಾನವ ನಿರ್ಮಿತ ಮತ್ತು ಪ್ರಕೃತಿ ನಿರ್ಮಿತ ವಸ್ತು ವೈವಿಧ್ಯಗಳನ್ನು ಹೊಂದಿದ್ದು ಆ ಎಲ್ಲ ಭಾರಗಳನ್ನು ಹೊತ್ತು ನಿಂತಿದೆ. ಅಲ್ಲದೆ ಭೂಮಿಯ ಮಡಿಲಲ್ಲಿರುವ ಅನೇಕ ರೀತಿಯ ಉಪಯುಕ್ತ ಸಂಪನ್ಮೂಲಗಳನ್ನು, ನಿಕ್ಷೇಪಗಳನ್ನು ಹೊರತೆಗೆಯುವುದಕ್ಕಾಗಿ ಭೂಮಿಯನ್ನು ಆಳವಾಗಿ ಅಗಿಯಲಾಗುತ್ತದೆ. ಬೀಜ ಬಿತ್ತಿ ಬೆಳೆ ಬೆಳೆಯುವುದಕ್ಕಾಗಿ ಭೂಮಿಯನ್ನು ರಂಟೆ, ಕುಂಟೆಗಳಿಂದ ಹರಗಲಾಗುತ್ತದೆ. ಹೀಗೆ ಮನುಷ್ಯರು ತಮ್ಮ ಅನುಕೂಲಕ್ಕೆ ಭೂಮಿಯನ್ನು ಹಲವು ಬಗೆಯಲ್ಲಿ ಬಳಸಿಕೊಂಡು ಭೂಮಿಯನ್ನು ಹಲವು ರೀತಿ ಹಿಂಸಿಸಿದರೂ ಅದು ತಾಳ್ಮೆ ಮತ್ತು ಸಹನೆಗಳಿಂದ ಎಲ್ಲವನ್ನೂ ಸಹಿಸಿಕೊಳ್ಳುತ್ತದೆ.

ಅಂತೆಯೇ ಹೆಣ್ಣು ಕೂಡಾ ಭೂಮಿಯಂತೆ ಏನೇ ಕಷ್ಟ ಕಾರ್ಪಣ್ಯಗಳು ಬಂದರೂ ಸಹಿಸಿಕೊಳ್ಳಬೇಕು ಎನ್ನುವ ಉದ್ದೇಶದಿಂದ ಹೆಣ್ಣನ್ನು ಸಹನಾಮೂರ್ತಿ ಎನ್ನಲಾಗಿದೆ. ಹೆಣ್ಣಿನ ಸಹನೆಯನ್ನು ಭೂಮಿಯ ಸಹನೆಯೊಂದಿಗೆ ಹೋಲಿಸಿ ನೋಡಲಾಗಿದೆ. ಹೆಣ್ಣು ಯಾವ ರೀತಿ ಇರಬೇಕು ಎಂಬುದನ್ನು ಪೂರ್ವದಲ್ಲಿಯೇ ನಿರ್ಧರಿಸಿ ಆ ರೀತಿಯ ಸಾಮಾಜೀಕರಣ ಪ್ರಕ್ರಿಯೆಗೆ ಅವಳನ್ನು ಒಳಪಡಿಸಲಾಗುತ್ತದೆ.

ಇದಕ್ಕೆ ವ್ಯತಿರಿಕ್ತವೆಂಬಂತೆ ಕೆಲವು ಸಂದರ್ಭದಲ್ಲಿ ಸ್ವತಃ ಹೆಣ್ಣೇ ಹೆಣ್ಣಾಗಿ ಹುಟ್ಟುವುದಕ್ಕಿಂತ ಮಣ್ಣಾಗಿ ಹುಟ್ಟುವುದು ಲೇಸು ಎಂದು ಹೇಳಿಕೊಂಡಿರುವುದನ್ನು ಈ ಕೆಳಗಿನ ತ್ರಿಪದಿಯಲ್ಲಿ ನೋಡಬಹುದು.

ಹೆಣ್ಣು ಆಗುವುದಕ್ಕಿಂತ ಮಣ್ಣು ಆಗುವುದು ಲೇಸು ||

ಮಣ್ಣೀನ ಮ್ಯಾಲ ಮರವಾಗಿ | ಇದ್ದರ |

ಬಂದವರಿಗೆಲ್ಲ ನೆರಳವ್ವ ||

(ಸಂಗ್ರಹ: ಹಲಸಂಗಿ ಗೆಳೆಯರು (ಸಂ.), ಪು. ೭೧)

ಇದು ಹೆಣ್ಣೊಂದು ಹೇಳಿದಂತೆ ಕಂಡುಬಂದರೂ, ಇದು ಕೇವಲ ಹೆಣ್ಣೊಬ್ಬಳ ಅಭಿವ್ಯಕ್ತಿಯಾಗಿರುವುದಿಲ್ಲ. ಈ ರೀತಿಯ ಅಭಿವ್ಯಕ್ತಿಗೆ ಆಕೆ ಬದುಕಿದ ಅಥವಾ ಬದುಕುತ್ತಿರುವ ವ್ಯವಸ್ಥೆಯೂ ಕಾರಣವಾಗಿದೆ. ನಮ್ಮ ಪುರುಷ ಪ್ರಧಾನ ಸಮಾಜ ಹೆಣ್ಣಿನ ಬಗೆಗೆ ಕೆಲವು ನಿರೀಕ್ಷೆ ಮತ್ತು ಅಪೇಕ್ಷೆಗಳನ್ನು ಇಟ್ಟುಕೊಂಡಿದೆ. ಮತ್ತು ಅವುಗಳನ್ನು ಆಕೆಯ ಮೌಲ್ಯವನ್ನಾಗಿಸಿ ಬಿಟ್ಟಿರುತ್ತದೆ. ಹಾಗೊಂದು ವೇಳೆ ಅವುಗಳನ್ನು ಆಕೆಯಿಂದ ಪೂರೈಸದಾಗದಿದ್ದಾಗ ಆಕೆಯನ್ನು ಸಮಾಜ ತಿರಸ್ಕಾರ ಮನೋಭಾವದಿಂದ ಕಾಣುತ್ತದೆ. ಅಲ್ಲದೆ ಆ ವ್ಯವಸ್ಥೆಯೊಳಗಿನ ಹೆಣ್ಣು ಪಿತೃಪ್ರಧಾನ ವ್ಯವಸ್ಥೆಯ ಮೌಲ್ಯಗಳಿಗೆ ವಿಧೇಯವಾಗಿರುವ ಮತ್ತು ಆ ಮೌಲ್ಯಗಳನ್ನು ಸತ್ಯವೆಂದು ನಂಬಿಕೊಂಡಿರುವ ಮನೋಭಾವ ಹೊಂದಿರುವುದನ್ನು ನಾವು ಕಾಣುತ್ತೇವೆ. ಈ ಮೇಲಿನ ತ್ರಿಪದಿಯಲ್ಲಿ ಅಷ್ಟೇ, ಸಾಮಾಜಿಕ ಅಪೇಕ್ಷೆಯನ್ನು ಪೂರೈಸಲಾಗದೆ ತಿರಸ್ಕಾರಕ್ಕೆ ಒಳಗಾದ ಹೆಣ್ಣೊಂದು ನೊಂದು ಅಭಿವ್ಯಕ್ತಿಸಿದ ಸಾಲುಗಳಾಗಿವೆ. ಹೆಣ್ಣು ಆಗುವುದಕ್ಕಿಂತ ಮಣ್ಣು ಆಗುವುದು ಲೇಸು ಎಂದು ಹೇಳಿರುವ ಆ ಹೆಣ್ಣಿನ ಧ್ವನಿಯಲ್ಲಿ ಜೀವನದ ಬಗೆಗೆ ವೈರಾಗ್ಯ ತಳೆದು ಇಲ್ಲವೆ ವ್ಯವಸ್ಥೆಯ ಬಗೆಗೆ ರೋಸಿಹೋಗಿ ಆ ರೀತಿ ಅಭಿವ್ಯಕ್ತಿಸಿದಂತೆ ಕಾಣುತ್ತದೆ.

**ಕೃಷಿ ಸಮುದಾಯವು ಹೆಣ್ಣೆಂದು ಪರಿಭಾವಿಸುವ ಇತರ ಸಂಗತಿಗಳು**

ಕೇವಲ ಭೂಮಿಯನ್ನು ಹೆಣ್ಣೆಂದು ಪರಿಭಾವಿಸದೇ ಕೃಷಿ ಸಮುದಾಯದೊಳಗಿನ ಇನ್ನೂ ಅನೇಕ ಸಂಗತಿಗಳನ್ನು ಹೆಣ್ಣು ರೂಪದಲ್ಲಿಯೇ ನೋಡಲಾಗುತ್ತದೆ, ಆರಾಧಿಸಲಾಗುತ್ತದೆ. ಕೃಷಿಕರು ತಾವು ಬಳಸುವ ಎಲ್ಲ ವಸ್ತುಗಳನ್ನು ಪ್ರಾಣಿಗಳನ್ನು ಮತ್ತವರು ಬೆಳೆದ ಬೆಳೆಗಳನ್ನು ದೈವ ಭಾವನೆಯಿಂದ ಕಾಣುವುದಲ್ಲದೆ ಅವುಗಳಲ್ಲಿ ಸ್ತ್ರೀ ರೂಪವನ್ನು ಕಾಣುವುದನ್ನು ಗಮನಿಸಬಹುದು.

ರೈತರು ಬಿತ್ತುವ ಮೊದಲು ಕೂರಿಗೆ ಪೂಜೆ ಮಾಡುವರು. ಆಗ ಕೂರಿಗೆಯನ್ನು ಅವರು ಹೆಣ್ಣಿನ ರೂಪದಲ್ಲಿ ಪೂಜಿಸುವುದನ್ನು ಆ ಪೂಜೆಯ ವಿಧಾನದಿಂದ ತಿಳಿದು ಬರುತ್ತದೆ.

ಬಿತ್ತುವ ದಿನ ಬಂತು ತಯ್ಯಾರು ಮಾಡ

ಮುತ್ತಿನ ಕೂರಿಗಿ ಹೊರಗಿಡು| ನನ ತಮ್ಮ

ಮುತ್ತೈದೆಯರು ಬಂದು ಉಡಿತುಂಬಿ ...

ಕೂರಿಗಿ ಪೂಜಕ ಏನೇನು ಇಡಬೇಕ

ಜರತಾರೆ ಮಡಿಬೇಕ ಉಡಿಸೋದಕ

ಕುಂಬಳಕಾಯಿ ಬೇಕ ಒಡೆಯೋದಕ

ಕೂರಿಗೆ ಪೂಜೆಯ ಸ್ವರೂಪವನ್ನು ತಿಳಿಸುವ ಮೇಲಿನ ತ್ರಿಪದಿಯಲ್ಲಿ ಕೃಷಿ ಉಪಕರಣವಾದ ಕೂರಿಗೆಯನ್ನು ಸ್ತ್ರೀ ರೂಪವಾಗಿ ಕಂಡಿದ್ದಾರೆಂಬುದು ತಿಳಿದುಬರುತ್ತದೆ. 'ಕೂರಿಗೆಗೆ ಉಡಿಸುವುದಕ್ಕೆ ಜರತಾರೆ ಸೀರೆ ಬೇಕು' ಎನ್ನುವ ವಿಚಾರ ಮತ್ತು 'ಮುತ್ತೈದೆಯರು ಕೂರಿಗೆಗೆ ಉಡಿ ತುಂಬುತ್ತಾರೆ' ಎನ್ನುವ ವಿಚಾರ ಕೃಷಿಕರು ಕೂರಿಗೆಯನ್ನು ಹೆಣ್ಣು ರೂಪದಲ್ಲಿ ಪೂಜಿಸುತ್ತಿರುವುದನ್ನು ಸ್ಪಷ್ಟಪಡಿಸುತ್ತದೆ. ಏಕೆಂದರೆ ಸೀರೆ ಉಡಿಸುವ ಮತ್ತು ಉಡಿ ತುಂಬುವ ಕ್ರಿಯೆಗಳು ಹೆಣ್ಣಿಗೆ ಮಾಡುವಂತ ಕ್ರಿಯೆಗಳಾಗಿದ್ದರಿಂದ ಇಲ್ಲಿ ಕೂರಿಗೆಗೆ ಆ ಕ್ರಿಯೆಗಳನ್ನು ಮಾಡುವುದರಿಂದ ಕೃಷಿ ಉಪಕರಣವಾದ ಕೂರಿಗೆಯನ್ನು ಹೆಣ್ಣು ರೂಪದಲ್ಲಿ ಪರಿಭಾವಿಸಿದ್ದಾರೆ ಎಂಬುದು ನಿಸ್ಸಂದೇಹ.

ಕೃಷಿಕರು ಮೊದಲು ಬಿತ್ತನೆ ಮಾಡುವ ಸಂದರ್ಭದಲ್ಲಿ ಮನೆಯನ್ನೆಲ್ಲ ಸಾರಿಸಿ ಮಡಿ ಮಾಡಿ ಅವತ್ತು 'ಕೂರಿಗೆ' ಪೂಜೆ ಮಾಡುವರು. ಕೂರಿಗೆಯನ್ನು ಮನೆಯ ಕಟ್ಟೆಯ ಮೇಲೋ, ನಡುಮನೆಯಲ್ಲೋ (ಪಡಸಾಲೆ) ಕೆಲವು ಕಡೆ ಮನೆಯ ಮುಂದಿನ ಅಂಗಳದಲ್ಲೋ ಪೂರ್ವ ಅಥವಾ ಉತ್ತರ ದಿಕ್ಕಿಗೆ ಮುಖಮಾಡಿ ಇಡುವರು.

ಕರಿಯ ಕಂಬಳಿಯ ಮರಿದು ಟೊಪ್ಪಿಗಿ ಮಾಡಿ

ಹೊತ್ತಾನ ಒಕ್ಕಲಿಗ ಹೆಗಲಿಗೆ | ಕೂರಿಗಿ ದಿಂಡ

ಇಟ್ಟಾನ ತನ್ನ ಮನಿಮುಂದ

ಹೀಗೆ ಇಟ್ಟ ಕೂರಿಗೆಗೆ ಹೊಸ ಸೀರೆ ಉಡಿಸುವರು. ಕೂರಿಗೆ ಬಟ್ಟಲ ಮೇಲೆ ತೆಂಗಿನಕಾಯಿ ಇಟ್ಟು ಅದಕ್ಕೆ ಗುಂಡಗಡಿಗೆ ತಾಳಿ ಸಾಮಾನು, ಗುಂಡಿನ ಸರದಂತಹ ಆಭರಣಗಳನ್ನು ಹಾಕಿ ಶೃಂಗರಿಸುವರು. ಹೀಗೆ ಶೃಂಗಾರಗೊಂಡ ಕೂರಿಗೆ ನೋಡಲು ಮನುಷ್ಯನಾಕೃತಿಯಂತೆ ಕಾಣುತ್ತಿರುತ್ತದೆ. ನಂತರ ಕೂರಿಗೆಗೆ ಅರಿಸಿಣ, ಕುಂಕುಮ ಹಚ್ಚಿ ಪೂಜೆ ಮಾಡುವರು. ಮನೆಯ ಮುತ್ತೈದೆಯರೆಲ್ಲಾ ಕೂರಿಗೆಗೆ ಆರುತಿ ಬೆಳಗುವರು. ಕೂರಿಗೆಯ ಮುಂದೆ ಬಿತ್ತುವ ಧಾನ್ಯಗಳನ್ನು ಐದು ಮುಟ್ಟಿಗೆ ನಿಧಿ ಹಾಕಿರುತ್ತಾರೆ. ಆ ದಿನ ಕೂರಿಗೆಗೆ ಏನಾದರೂ ಸಿಹಿ ಅಡುಗೆ ಮಾಡಿ ನೈವೇದ್ಯ ಮಾಡುವರು. ಕೆಲವು ಕಡೆ ಐದು ಜನ ಮುತ್ತೈದೆಯರು ಅಥವಾ ಬಾಲ ಮುತ್ತೈದೆಯರನ್ನು ಕೂರಿಗೆ ಮುಂದೆ ಕೂಡಿಸುವರು. ಅವರಿಗೆ ತಲೆಗೆ ದಂಡಿಕಟ್ಟಿ, ಉಡಿತುಂಬಿ, ಊಟ ಮಾಡಿಸುವರು.

ಒಟ್ಟು ಈ ಆಚರಣಾ ವಿಧಾನವನ್ನು ನೋಡಿದಾಗ ಕೂರಿಗೆಗೆ ಸೀರೆಯನ್ನು ಉಡಿಸುವ, ಸ್ತ್ರೀಯರ ಆಭರಣಗಳನ್ನು ಹಾಕುವ ವಿಧಾನ, ರೈತಾಪಿಗಳು ಕೃಷಿ ಸಲಕರಣೆಯಾದ ಕೂರಿಗೆಯನ್ನು ಹೆಣ್ಣು ರೂಪದಲ್ಲಿ ಕಾಣುತ್ತಾರೆಂಬುದು ಸ್ಪಷ್ಟವಾಗುತ್ತದೆ. ಒಟ್ಟಲ್ಲಿ ಬಿತ್ತುವ ಕ್ರಿಯೆಯಲ್ಲಿ ಹೆಣ್ಣಿಗೆ ಪ್ರಥಮ ಆದ್ಯತೆ ನೀಡಿದಂತೆ ಕಂಡುಬರುತ್ತದೆ.

ಅಂತೆಯೇ ಕೃಷಿಕರು ಕೃಷಿ ಕುಟುಂಬಗಳಲ್ಲಿ ಬಳಕೆಯಾಗುವ ಮಡಿಕೆಗಳನ್ನು ಕೂಡಾ ಸ್ತ್ರೀ ರೂಪದಲ್ಲಿಯೇ ಪರಿಭಾವಿಸುವರು. ಹೀಗೆ ಮಡಿಕೆಗಳನ್ನು ಸ್ತ್ರೀ ಸಾಂಕೇತಿಕವಾಗಿ ಬಳಸಿಕೊಂಡು ಬಂದ ಪ್ರವೃತ್ತಿ ತುಂಬಾ ಆದಿಮವಾದದ್ದು. 'ಮಡಿಕೆಗಳು ಮಾತೃ ದೇವತೆಗಳ ಆರಾಧನಾ ವಿಧಿಗಳಲ್ಲಿ ಪ್ರಧಾನ ಪಾತ್ರವನ್ನು ಪಡೆಯುತ್ತವಷ್ಟೇ ಅಲ್ಲದೆ, ಎಷ್ಟೋ ವೇಳೆ ಸ್ವತಃ ಅವು ಮಾತೃದೇವತೆಗಳ ಪ್ರತಿರೂಪಗಳಾಗಿ ನೇರವಾಗಿ ಪೂಜೆಗಳಿಗೊಳಗಾಗುತ್ತವೆ. ಪ್ರಾಚೀನ ಕಾಲದಿಂದ ಈವರೆಗೂ ಮಡಿಕೆಗಳನ್ನು ತಯಾರಿಸುವ ಕುಂಬಾರರು ಮಡಿಕೆಯ ಕತ್ತಿನ ಭಾಗದಲ್ಲಿ ಅಲಂಕಾರದ ಕುಸುರಿ ಕೆಲಸವನ್ನು ಮಾಡುತ್ತಾರೆ. ಅದು ಸ್ಪಷ್ಟವಾಗಿ ಸ್ತ್ರೀತ್ವವನ್ನು ಸೂಚಿಸುವಂತದ್ದಾಗಿರುತ್ತದೆ. ಸತ್ತವರು ಮತ್ತೆ ತಾಯಿಯ ಗರ್ಭವನ್ನು ಸೇರಿಕೊಳ್ಳುತ್ತಾರೆ ಎಂಬ ನಂಬಿಕೆಯಿಂದಾಗಿ ಬಹು ಪ್ರಾಚೀನ ಸಮಾಜಗಳಲ್ಲಿ ಸತ್ತವರ ದೇಹಗಳನ್ನು ತಾಯಿಯ ಗರ್ಭದ ಸಂಕೇತವಾದ ಮಡಿಕೆಗಳಲ್ಲಿಟ್ಟು ಹೂಳುತ್ತಿದ್ದರು (ಉದ್ಧೃತ : ಬಾಲಗೋಪಾಲ್ ಕೆ., ೧೯೯೮, ಪು. ೩೬). ಮಡಿಕೆಗಳನ್ನು ಹೆಣ್ಣು ಅಥವಾ ತಾಯಿ ರೂಪದಲ್ಲಿ ಕಂಡ ರೀತಿಯು ಈ ಮೇಲಿನ ವಿವರಗಳಿಂದ ತಿಳಿಯುತ್ತದೆ.

ಅದೇ ರೀತಿಯಲ್ಲಿ ಕೃಷಿ ಕುಟುಂಬಗಳಲ್ಲಿ ಬಳಕೆಯಾಗುವ ಕುಟ್ಟುವ-ಬೀಸುವ ಕಲ್ಲುಗಳನ್ನು ಹೆಣ್ಣೆಂಬ ಭಾವನೆಯಿಂದ ಅವುಗಳನ್ನು ಪೂಜ್ಯಭಾವನೆಯಿಂದ ಕಾಣಲಾಗುತ್ತದೆ. ಈಗಲೂ ಒರಳುಕಲ್ಲು ಬೀಸುಕಲ್ಲುಗಳನ್ನು ತುಳಿಯಗೊಡುವುದಿಲ್ಲ. ಬೀಸಕಲ್ಲಿನ ಮೇಲೆ ಕೂಡಲು ಬಿಡುವುದಿಲ್ಲ. ಬೀಸಕಲ್ಲು ಮೇಲೆ ಕೂಡಬಾರದು ಎನ್ನುವ ಕಾರಣಕ್ಕೇನೇ 'ಬೀಸಕಲ್ಲ ಮೇಲೆ ಕುಳಿತರೆ ಕುರುವಾಗುತ್ತದೆ' ಎಂಬ ನಂಬಿಕೆಯನ್ನು ಹುಟ್ಟುಹಾಕಿರಬೇಕು. ಈ ನಂಬಿಕೆಗೆ ಅವುಗಳ ಬಗ್ಗೆ ಇದ್ದ ದೈವಿಕ ಭಾವನೆಯೇ ಕಾರಣವಾಗಿದೆ. ಅಲ್ಲದೆ ಗೌರಿಹುಣ್ಣಿಮೆಯ ಸಂದರ್ಭದಲ್ಲಿ ಬೀಸುವ ಕಲ್ಲನ್ನು ಗೌರಿ ಎಂದು ಭಾವಿಸಿ ಅದಕ್ಕೆ ಸೀರೆ ಉಡಿಸಿ, ಪೂಜಿಸಿ, ಸಕ್ಕರೆಯ ಆರುತಿಯಿಂದ ಹೆಣ್ಣುಮಕ್ಕಳು ಆರುತಿ ಬೆಳಗುವರು.

ಪ್ರಾಚೀನ ಕಾಲದಿಂದಲೂ ಈ ವಸ್ತುಗಳನ್ನು ಹೆಣ್ಣಿನ ರೂಪದಲ್ಲಿ ಕಾಣಲಾಗಿದೆ ಎನ್ನುವುದಕ್ಕೆ ಉಲ್ಲೇಖಗಳು ಸಿಗುತ್ತವೆ. ಶಿಲಾಯುಗದ ಅರಣ್ಯವಾಸಿಗಳು ತಮ್ಮ ಆಹಾರ ಸಂಗ್ರಹಣೆಯಲ್ಲಿ ಗಟ್ಟಿ ಆಹಾರವನ್ನು ಕುಟ್ಟಿ ಮೆತ್ತಗಾಗಿಸಿಕೊಳ್ಳುವ ಕಲ್ಲಿನ ಸಲಕರಣೆಗಳನ್ನು ತಯಾರಿಸಿಕೊಂಡಿದ್ದರು. ಅದೇ ಒರಳು, ರುಬ್ಬುಗುಂಡುಗಳ ರೂಪದಲ್ಲಿ ಬಳಕೆಯಲ್ಲಿ ಹಲವು ಬದಲಾವಣೆಗಳು ಬಂದಿವೆಯಾದರೂ ಇವುಗಳನ್ನು ಈಗಲೂ ಕಲ್ಲಿನಲ್ಲಿ ತಯಾರಿಸುತ್ತಾರೆ. ಮಡಿಕೆಯಂತೆಯೇ ಇವುಗಳನ್ನು ಸಹಾ ಮಾತೃದೇವತೆಯ ಪ್ರತಿರೂಪಗಳೆಂದು ಭಾವಿಸಿ ಪೂಜಿಸಲಾಗುತ್ತದೆ (ಅದೇ, ಪು. ೩೯-೪೦).

ಕೃಷಿಕರು ಹಾಲು ಕೊಡುವ ಹಸುವನ್ನು ಗೋಮಾತೆಯೆಂದು ಪೂಜಿಸುತ್ತಾರೆ. ಮತ್ತವರು ಬೆಳೆದ ಬೆಳೆಗಳಲ್ಲಿ ಹೆಣ್ಣನ್ನು ಕಾಣುವುದನ್ನು ನಾವು ಗಮನಿಸಬಹುದು. 'ಫ್ರೇಜರ್ ಅವರು ಗೋಲ್ಡನ್ ಬೋ ಸಂಪುಟವೊಂದರಲ್ಲಿ ಕುತೂಹಲಕರವಾದ ಅಂಶಗಳನ್ನು ಸಂಗ್ರಹಿಸಿ ಚರ್ಚಿಸಿದ್ದಾರೆ. ಗ್ರೀಕ್ ಪುರಾಣಗಳಲ್ಲಿ ಧಾನ್ಯವನ್ನು ಸ್ತ್ರೀ ದೇವತೆಯೆಂದು ಮೂರ್ತೀಕರಿಸಲಾಗಿದೆ. ಹಾಗೆ ಕರೆಯಲು ಕಾರಣ ವ್ಯವಸಾಯವು ಸ್ತ್ರೀಯರಿಂದ ಪ್ರಾರಂಭವಾದುದು ಎಂದು ನಂಬಲಾಗಿದೆ. ಭಾರತೀಯ ಪುರಾಣಗಳಲ್ಲಿ ಅಷ್ಟಲಕ್ಷ್ಮಿಯರಲ್ಲಿ ಧಾನ್ಯಲಕ್ಷ್ಮಿಯೂ ಒಬ್ಬಳಾಗಿದ್ದಾಳೆ. ಕರ್ನಾಟಕದ ಬಹುಪಾಲು ಪ್ರದೇಶಗಳಲ್ಲಿ ಸುಗ್ಗಿಯ ನಂತರ ಆಚರಿಸುವ 'ಕಾಳವ್ವನ ಹಬ್ಬ'ವು ಧಾನ್ಯವನ್ನು ಸ್ತ್ರೀದೇವತೆಯೆಂದು ಪರಿಗಣಿಸಿರುವುದಕ್ಕೆ ಸಂಕೇತವಾಗಿದೆ' (ಎಂ.ಜಿ. ಈಶ್ವರಪ್ಪ ೧೯೯೫, ಪು. ೧೭). ಹೀಗೆ ಧಾನ್ಯವನ್ನು ಧಾನ್ಯದೇವತೆ ಮತ್ತು ಧಾನ್ಯಲಕ್ಷ್ಮಿ ಎಂದು ಪರಿಭಾವಿಸಿರುವ ಹಿನ್ನೆಲೆಯಲ್ಲಿ ಧಾನ್ಯವನ್ನು ಸ್ತ್ರೀ ರೂಪವಾಗಿ ಕಾಣಲಾಗಿದೆ ಎಂಬುದು ತಿಳಿದುಬರುತ್ತದೆ. ಈಗಲೂ ರೈತರು ತಾವು ಬೆಳೆದ ಮುಂಗಾರು ಇಲ್ಲವೆ ಹಿಂಗಾರು ಬೆಳೆ ಬಂದಾಗ ಸುಗ್ಗಿಕಾಲದಲ್ಲಿ ಕಣದ ಹಬ್ಬ ಮಾಡುವರು. 'ಕಣ'ದಲ್ಲಿ ತಾವು ಬೆಳೆದ ಬೆಳೆಗಳನ್ನು ರಾಶಿ ಹಾಕಿ ಆ ರಾಶಿಗೆ ಸೀರೆ ರವಿಕೆ ಏರಿಸಿ ಎಲೆ, ಅಡಿಕೆ, ಬಾಳೆಹಣ್ಣು, ಕಡ್ಡಿಕಾಳು, ಪಾಲದೌಡು, ಇವೆಲ್ಲವುಗಳನ್ನು ಸೇರಿಸಿ ರಾಶಿಗೆ ಉಡಿ ಇಡುವರು (ಇವು ಮುತ್ತೈದೆ ಹೆಣ್ಣಿಗೆ ಉಡಿ ತುಂಬುವಾಗ ಬಳಸುವ ವಸ್ತುಗಳೇ ಆಗಿವೆ). ನಂತರ ರಾಶಿ ಪೂಜೆ ಮಾಡಿ ರಾಶಿಗೆ ಹಣ್ಣು, ಕಾಯಿ ಮತ್ತು ಅವತ್ತಿನ ವಿಶೇಷ ಅಡುಗೆಯನ್ನು ನೈವೇದ್ಯ ಮಾಡುವರು.

ಬೆಳೆದ ಬೆಳೆಯ ರಾಶಿಗೆ ಸೀರೆ ಏರಿಸುವುದು ಎಂದರೆ, ರಾಶಿಯನ್ನು ಬೆಳೆದ ಬೆಳೆಯನ್ನು ಹೆಣ್ಣು ರೂಪವಾಗಿ ಪರಿಭಾವಿಸಿದ್ದು ತಿಳಿದುಬರುತ್ತದೆ. ರಾಶಿಗೆ ಉಡಿ ಇಡುವುದು ಕೂಡಾ ಸ್ತ್ರೀ ಸಾಂಕೇತಿಕವೇ ಆಗಿದೆ. ಏಕೆಂದರೆ ಸೀರೆ ಕೊಡುವುದು ಉಡಿ ತುಂಬುವುದು ಇವೆಲ್ಲಾ ಹೆಂಗಸರಿಗೆ ಹೊರತು ಗಂಡಸರಿಗಲ್ಲ. ಹಾಗಾಗಿ ರಾಶಿಗೆ ಇಲ್ಲಿ ಸೀರೆ ಮತ್ತು ಉಡಿಯನ್ನು ಅರ್ಪಿಸುವುದರ ಹಿಂದೆ ಧಾನ್ಯದ ರಾಶಿಯನ್ನು ಹೆಣ್ಣು ರೂಪವಾಗಿ ಕಂಡಿರುವುದು ತಿಳಿದುಬರುತ್ತದೆ.

ರೈತರು ಈಗಲೂ ತಾವು ಬೆಳೆದ ಹತ್ತಿಯನ್ನು ಲಕ್ಷ್ಮೀ ಎಂದು ಕರೆಯುತ್ತಾರೆ. ಮತ್ತು ಲಕ್ಷ್ಮೀ ಪೂಜೆ ಎಂದು ಮಾಡುವ ಸಂದರ್ಭದಲ್ಲಿ ಹತ್ತಿಯನ್ನಿಟ್ಟು ಪೂಜಿಸಲಾಗುತ್ತದೆ. ಅಂದರೆ ಹತ್ತಿಯನ್ನೇ ಲಕ್ಷ್ಮಿಯೆಂದು ಪರಿಭಾವಿಸುವುದನ್ನು ನಾವೆಲ್ಲ ನೋಡಬಹುದು. ಲಕ್ಷ್ಮೀ ಎಂದರೆ ಇಲ್ಲಿ ಸ್ತ್ರೀ ರೂಪ. ಹಾಗಾಗಿ ಹತ್ತಿಗೆ ಲಕ್ಷ್ಮಿ ಎನ್ನುತ್ತಾರೆ ಎನ್ನುವುದಾದರೆ ಹತ್ತಿ ಬೆಳೆಯನ್ನು ಹೆಣ್ಣು ಎಂದು ಗ್ರಹಿಸಿರುವುದನ್ನು ನೋಡಬಹುದು.

ದೀಪಾವಳಿಯ ಸಂದರ್ಭದಲ್ಲಿ ಖಂಡೆಪೂಜೆಯ ದಿನ ರೈತರು ತಮ್ಮ ಕೃಷಿ ಬಳಕೆಯ ಸಲಕರಣೆಗಳನ್ನೆಲ್ಲಾ ತೊಳೆದು ಶುಚಿಗೊಳಿಸಿ ಅವುಗಳಿಗೆ ಆ ದಿನ ವಿಶೇಷವಾಗಿ ಪೂಜಿಸುವರು. ಕೃಷಿ ಉಪಕರಣಗಳನ್ನು ಪೂಜಿಸುವ ಈ ಪದ್ಧತಿ ಆ ಉಪಕರಣಗಳಲ್ಲೂ ರೈತರಿಗೆ ದೈವ ಭಾವನೆ ಇರುವುದನ್ನು ತಿಳಿಸುತ್ತದೆ. ಅಂತೆಯೇ ಟ್ರಾಕ್ಟರಿನಂತಹ ಆಧುನಿಕ ಯಂತ್ರೋಪಕರಣ ಹೊಂದಿದ ರೈತರು ಆ ಉಪಕರಣಗಳಿಗೆ

ಪೂಜೆ ಮಾಡಿ ಅದನ್ನು ತಮ್ಮ ಪಾಲಿಗೆ ಲಕ್ಷ್ಮೀ ಎಂದು ಭಾವಿಸಿ ಅದಕ್ಕೆ ಆ ದಿನ ಸೀರೆ, ರವಿಕೆ ಏರಿಸುವರು. ಇಲ್ಲೂ ಕೂಡಾ ಟ್ರ್ಯಾಕ್ಟರಿಗೆ ಸೀರೆ, ರವಿಕೆ ಏರಿಸಿದ ಈ ಕ್ರಮ ಟ್ರ್ಯಾಕ್ಟರನ್ನು ಹೆಣ್ಣು ರೂಪದಲ್ಲಿ ಕಂಡಿದ್ದನ್ನು ಗಮನಿಸಬಹುದು. ಅಲ್ಲದೆ, ಆಧುನಿಕ ಯಂತ್ರೋಪಕರಣಗಳು ಪೂಜೆಯ ಭಾಗವಾಗುತ್ತಿರುವ ಸಂಗತಿ ರೈತ ಆಧುನಿಕನಾದರೂ ಆತನಲ್ಲಿ ಮೂಲದಿಂದಲೂ ಬೆಳೆದುಕೊಂಡು ಬಂದ ಆರಾಧನೆಯ ಮನೋಭಾವ ಈಗಲೂ ಉಳಿದುಕೊಂಡು ಬಂದಿರುವುದಕ್ಕೆ ಇದು ನಿದರ್ಶನವೂ ಆಗಿದೆ.

ದೀಪಾವಳಿಯ ಸಂದರ್ಭದಲ್ಲಿಯೇ ಮಾಡಲಾಗುವ ಇನ್ನೊಂದು ಆಚರಣೆ ಎಂದರೆ ಹಟ್ಟಿಹಬ್ಬ. ರೈತಾಪಿಗಳು ದೀಪಾವಳಿಯನ್ನೇ 'ಹಟ್ಟಿಯ ಹಬ್ಬ' ಎಂದು ಕರೆಯುವರು. ಈ ಹಟ್ಟಿ ಹಬ್ಬದ ದಿನ ರೈತರು ದನದ ಕೊಟ್ಟಿಗೆಯಲ್ಲೋ ಅಥವಾ ಮನೆಯ ಹುಸಿ ಇಲ್ಲವೆ ಪಡಸಾಲೆ (ನಡುಮನೆ)ಯಲ್ಲಿ ಸಗಣಿಯಿಂದ ಹಟ್ಟಿಯನ್ನು ಇಟ್ಟು ಅದಕ್ಕೆ ಪೂಜೆ ಮಾಡುವರು. ಈ ಹಟ್ಟಿಯನ್ನು ಹಟ್ಟೆವ್ವ ಎಂದು ಕರೆಯುವರು. ಇದನ್ನು ಹಸುಗಳ ಸಗಣಿಯಿಂದ ಮಾಡಲಾಗಿರುತ್ತದೆ. ಅಂದರೆ ಇದು ಹಸುಗಳ ಸಗಣಿಯಲ್ಲೂ ಸ್ತ್ರೀ ರೂಪವನ್ನು ಸಾಂಕೇತಿಕರಿಸಿಕೊಂಡಿದ್ದು ತಿಳಿದುಬರುತ್ತದೆ. ಹೀಗೆ ಕೃಷಿಯ ಬಹುಪಾಲು ಮಹಿಳೆಯರನ್ನು ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ಒಳಗೊಂಡಿರುವುದನ್ನು ಕಾಣಬಹುದು.

ಹೀಗೆ ಒಟ್ಟು ಕೃಷಿ ಕ್ರಮದಲ್ಲಿಯೇ ಬಹುಪಾಲು ಸಂಗತಿಗಳನ್ನು ಸ್ತ್ರೀ ರೂಪವಾಗಿ ಕಂಡುಕೊಂಡುಬಂದ ಬಗೆಯನ್ನು, ಆರಾಧಿಸಿಕೊಂಡು ಬಂದ ಮನೋಭಾವನೆಯು ಕೃಷಿಯಲ್ಲಿ ಸ್ತ್ರೀ ಪ್ರಾಮುಖ್ಯತೆಯನ್ನು ಸೂಚಿಸುವಂತಹದ್ದು. ಇಂತಹ ಸಂಗತಿಗಳು ಕೃಷಿ ಸಮುದಾಯಕ್ಕೆ ಸ್ತ್ರೀಯ ಬಗೆಗಿದ್ದ ಗೌರವದ ಭಾವನೆಯನ್ನು ಪ್ರತಿನಿಧಿಸುತ್ತದೆ. ಬಹುಶಃ ಆ ಗೌರವ, ಭಯದ ಹಿನ್ನೆಲೆಯಲ್ಲೂ ಹುಟ್ಟಿಕೊಂಡಿರುವ ಸಾಧ್ಯತೆಯೂ ಇದೆ. ಇಲ್ಲವೆ ಇವೆಲ್ಲಾ ಸಂಗತಿಗಳು ಕೃಷಿಗೆ ಮಹಿಳೆ ಸಲ್ಲಿಸಿದ ಕೊಡುಗೆಯನ್ನು ಸ್ಮರಿಸುವ ಹಿನ್ನೆಲೆಯಲ್ಲೂ ಒಂದು ಕಾಲಘಟ್ಟದಲ್ಲಿ ಹುಟ್ಟಿ ಇಂದಿಗೂ ಬೆಳೆದು ಬಂದಿರುವ ಸಾಧ್ಯತೆಗಳೂ ಇವೆ. ಹೀಗೆ ರೂಢಿಗೆ ಬಂದ ಆಚರಣೆಗಳು ಪ್ರಜ್ಞಾಪೂರ್ವಕವಾಗಿಯೋ ಅಥವಾ ಅಪ್ರಜ್ಞಾಪೂರ್ವಕವಾಗಿಯೇ ಆಚರಿಸಲ್ಪಡುತ್ತಿರುವುದನ್ನು ನಾವು ನೋಡಬಹುದು. ಆದರೆ ಈ ಹಿಂದೆ ಚರ್ಚಿಸಲಾದಂತೆ ಕೃಷಿ ಸಮುದಾಯದಲ್ಲಿ ಸ್ತ್ರೀ ವಿರೋಧಿಯಾದ ಮತ್ತು ಅವಳನ್ನು ನಿಯಂತ್ರಣದಲ್ಲಿಡುವಂತೆ ಕಾಣುವ ಕೆಲವು ನಂಬಿಕೆ-ನಿಷೇಧಗಳು ಕಂಡುಬರುತ್ತವೆ. ಹಾಗಾಗಿ ಕೃಷಿ ಸಂಸ್ಕೃತಿಯಲ್ಲಿ ಹೆಣ್ಣನ್ನು ಗೌರವದ ಭಾವನೆಯಿಂದ ಕಾಣುವಂತಹ ಮತ್ತು ಅವಳನ್ನು ನಿಯಂತ್ರಣದಲ್ಲಿಡುವಂತಹ ಇಲ್ಲವೆ ನಿರ್ಲಕ್ಷಿಸುವಂತಹ ಈ ಎರಡು ಬಗೆಯ ವೈರುಧ್ಯಗಳು ಕಂಡುಬರುತ್ತವೆ. ಬಹುಶಃ ಈ ರೀತಿಯ ವೈರುಧ್ಯಗಳು ಕಂಡುಬರುತ್ತಿರುವುದಕ್ಕೆ ಮಾತೃಪ್ರಧಾನತೆಯಿಂದ ಪುರುಷ ಪ್ರಧಾನತೆಗೆ ಹಸ್ತಾಂತರಗೊಂಡಿದ್ದರ ಪರಿಣಾಮವಾಗಿ ಕ್ರಮೇಣ ಸ್ತ್ರೀಯನ್ನು ನಿರ್ಲಕ್ಷಿಸುವಂತಹ, ನಿಯಂತ್ರಣದಲ್ಲಿಡುವಂತಹ ಮನೋಭಾವ ಬೆಳೆದಿರುವ ಸಾಧ್ಯತೆಗಳಿವೆ. ಹಾಗಾಗಿ ಹೆಣ್ಣಿನ ಬಗೆಗೆ ಸಕಾರಾತ್ಮಕ ಮತ್ತು ನಕಾರಾತ್ಮಕ ವಿಚಾರಗಳು ಕೃಷಿ ಸಂಸ್ಕೃತಿಯಲ್ಲಿ ಕಂಡುಬರುತ್ತವೆ.

**ಕೊನೆಟಿಪ್ಪಣಿ**

೧. 'ಪ್ರಾಚೀನ ಭಾರತದಲ್ಲಿ ಬೇಸಾಯ' (ಅನು : ಸಿ.ಕೆ. ಕುಮುದಿನಿ) ಎಂಬ ಕೃತಿಯಲ್ಲಿ ಆ ಶ್ಲೋಕಗಳ ವಿವರ ದೊರೆಯುತ್ತದೆ.

೨. ಕಣ : ಕಣ ಎಂದರೆ ಹೊಲದಲ್ಲಿ ಒಂದಿಷ್ಟು ನಿರ್ದಿಷ್ಟ ಜಾಗವನ್ನು ಸ್ವಚ್ಛಗೊಳಿಸಿ ಅದಕ್ಕೆ ಸಗಣಿ ರಾಡಿಯಿಂದ ಸಾರಿಸಿ ಮಣ್ಣು, ಕಲ್ಲು ಆ ಸ್ಥಳದಲ್ಲಿ ಸೇರಿಕೊಳ್ಳದಂತೆ ಸ್ವಚ್ಛಗೊಳಿಸಿಕೊಂಡು ಆ ಜಾಗದ ಸುತ್ತಲೂ ಸ್ವಲ್ಪ ಎತ್ತರವಾಗಿ ಒಡ್ಡು ಕಟ್ಟಿಕೊಂಡಿರುವರು. ತಾವು ಬೆಳೆದ ಬೆಳೆಗಳನ್ನು ಅಲ್ಲಿ ಒಕ್ಕುವರು. ಹೀಗೆ ರೈತರು ಒಕ್ಕಲು ಮಾಡುವುದಕ್ಕಾಗಿ ಹೊಲದಲ್ಲಿ ಸಿದ್ಧಪಡಿಸಿಕೊಂಡ ನಿರ್ದಿಷ್ಟ ಸ್ಥಳಕ್ಕೆ 'ಕಣ' ಎನ್ನುವರು.

* * * * *

## ಅಧ್ಯಾಯ ೫

# ಕೃಷಿ ಸಂಬಂಧಿ ನಂಬಿಕೆ-ಆಚರಣೆಗಳು ಮತ್ತು ಮಹಿಳೆ

೫.೧ ಸ್ತ್ರೀತ್ವದ ಬಗೆಗಿನ ಕೃಷಿಕರ ಪರಿಭಾವನೆ

೫.೨ ಕೃಷಿ ಆಚರಣೆಗಳ ಹಿಂದಿರುವ ಆದಿಮ ಪ್ರವೃತ್ತಿ

೫.೩ ಕೃಷಿಯ ಸಾಂಸ್ಕೃತಿಕ ಸ್ಥಿತ್ಯಂತರಗಳು

ಅಧ್ಯಾಯ ೫

## ಕೃಷಿ ಸಂಬಂಧಿ ನಂಬಿಕೆ-ಆಚರಣೆಗಳು ಮತ್ತು ಮಹಿಳೆ

ಮನುಷ್ಯರು ಭಾವಜೀವಿಗಳಾದುದರಿಂದ ತಾವು ಕಂಡುಂಡ ಅನುಭವಗಳನ್ನು ವಿವಿಧ ಬಗೆಯಲ್ಲಿ ಅಭಿವ್ಯಕ್ತಿಸುತ್ತಲೇ ಬಂದಿದ್ದಾರೆ. ತಮಗಾದ ಸುಖ-ದುಃಖ, ನೋವು-ನಲಿವು, ಆಸೆ-ನಿರಾಸೆ, ಹರ್ಷ, ಆತಂಕ-ತಲ್ಲಣ, ಮನೋಭಿಲಾಷೆ ಮೊದಲಾದವುಗಳನ್ನು ಹೊರಹಾಕುತ್ತಲೇ ಬಂದಿರುವರು. ಯಾವುದೇ ಸಂಸ್ಕೃತಿಯಲ್ಲಿ ಕಂಡುಬರುವ ನಂಬಿಕೆ-ಆಚರಣೆಗಳು ಒಂದು ರೀತಿಯಲ್ಲಿ ಆ ಸಂಸ್ಕೃತಿಯ ಅಭಿವ್ಯಕ್ತಿಯ ಮಾಧ್ಯಮಗಳೇ ಆಗಿವೆ. ಮನುಷ್ಯರ ಅಭಿವ್ಯಕ್ತಿ ಮಾಧ್ಯಮಗಳಾದ ನಂಬಿಕೆ ಆಚರಣೆಗಳಿಂದ ಸಂಸ್ಕೃತಿಯ ಶೋಧವು ಸಾಧ್ಯ. ಏಕೆಂದರೆ ಅವು ಸಂಸ್ಕೃತಿಯ ಹೊಳಹುಗಳನ್ನು ಒಳಗೊಂಡಿರುವುದರಿಂದ ಸಂಸ್ಕೃತಿಯೊಂದರ ಇತಿಹಾಸವನ್ನು ಅರಿಯುವಲ್ಲಿ ನಂಬಿಕೆ-ಆಚರಣೆಗಳು ಮಹತ್ವದ ಪಾತ್ರವಹಿಸುತ್ತವೆ. ಸಂಸ್ಕೃತಿ ಹೀಗೆ ಇತ್ತು ಅಥವಾ ಹೀಗೆ ಇದೆ ಎಂದು ಹೇಳುವಲ್ಲಿ ಆಯಾ ಸಮುದಾಯದ ಸಾಂಸ್ಕೃತಿಕ ಆಚರಣೆಗಳು ಮಹತ್ವದ ಆಕರಗಳಾಗಬಲ್ಲವು. ಹಾಗಾಗಿ ಮಾನವಿಕ ವಿಜ್ಞಾನಗಳಲ್ಲಿ ಸಮುದಾಯ ಒಂದರ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ಆ ಸಮುದಾಯದ ಸಂಸ್ಕೃತಿಯಲ್ಲಿ ರೂಢಿಸಿಕೊಂಡಿರುವ ನಂಬಿಕೆ ಆಚರಣೆಗಳನ್ನು ಮೊರೆ ಹೋಗಲಾಗುತ್ತಿದೆ. ಅಥವಾ ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುತ್ತಿದೆ.

ಯಾವುದೇ ಒಂದು ಸಮುದಾಯದ ನಂಬಿಕೆ-ಆಚರಣೆಗಳು ಆ ಸಮುದಾಯದ ಪ್ರತಿಬಿಂಬಗಳೇ ಆಗಿವೆ. ಏಕೆಂದರೆ ಆ ಸಮುದಾಯ ಏನನ್ನು ಸತ್ಯ ಎಂದು ಭಾವಿಸಿರುತ್ತದೆಯೋ, ಏನನ್ನು ಒಪ್ಪಿರುತ್ತದೆಯೋ ಅವೇ ನಂಬಿಕೆಗಳಾಗಿ ಆಚರಣೆಗಳಾಗಿ ರೂಪ ತಳೆದಿರುತ್ತವೆ. ಅಲ್ಲದೆ ಈ ನಂಬಿಕೆ ಆಚರಣೆಗಳು ಇದ್ದಕ್ಕಿದ್ದಂತೆ ಧಿಡೀರನೆ ಹುಟ್ಟಿದಂತವುಗಳಲ್ಲ. ಜೀವನಕ್ಕೂ ಮತ್ತು ನಂಬಿಕೆಗೂ ನಿಕಟವಾದ ಸಂಬಂಧವಿದೆ. ಅವು ಆ ಸಮುದಾಯದ ಅನುಭವದ ಹಿನ್ನೆಲೆಯಲ್ಲಿ ರೂಪ ತಳೆದಂತವುಗಳಾಗಿರುತ್ತವೆ.

"ಜನಪದ ನಂಬಿಕೆಗಳು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಹೀಗೆ ಅಂಗೀಕೃತವಾಗುವಲ್ಲಿ ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷಣೆಗಳು ಮುಖ್ಯವಾಗುತ್ತವೆ. ನಂಬಿಕೆಗಳು ಜನಪದರ ಜೀವನಾನುಭವದ ಉತ್ಪನ್ನಗಳು ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ

ಸಂಬಂಧ. ಅದು ಸೂಚನೆ, ನಿಯಮ, ವಿಧಿ-ನಿಷೇಧ, ನಿರ್ದೇಶನ, ಆಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಕಂಡುಕೊಂಡಿದೆ. ಜನಪದರ ಕೆಲಸ, ಆಲೋಚನೆ, ರೂಢಿ, ಜೀವನಕ್ರಮ, ಸಂಪ್ರದಾಯ, ಆಚರಣೆಗಳೆಲ್ಲವೂ ಮೂಲಭೂತವಾಗಿ ನಂಬಿಕೆಗಳಿಂದ ಪ್ರೇರಿತವಾದವುಗಳು. ನಂಬಿಕೆಯು ಸಂಪ್ರದಾಯ ಆಚರಣೆಗಳೊಂದಿಗೆ ಅಂತರ್ ಸಂಬಂಧವನ್ನು ಹೊಂದಿದ್ದು, ಆ ಮೂಲಕ ಕ್ರಿಯಾ ರೂಪಗಳನ್ನು ತಾಳುತ್ತದೆ" (ಪ್ರೊ.ಎ.ವಿ.ನಾವಡ, ೧೯೯೯, ಪು.೧೪೦). ಹೀಗೆ ಒಂದು ಸಂಸ್ಕೃತಿಯನ್ನು ರೂಪಿಸುವಲ್ಲಿ ಅನೇಕ ಅಂಶಗಳಲ್ಲಿ ಒಂದಾಗಿದ್ದ ನಂಬಿಕೆಗಳು ಮಾನವ ಬದುಕಿನೊಂದಿಗೆ ನಿಕಟವಾದ ಸಂಬಂಧವನ್ನು ಹೊಂದಿದ್ದರಿಂದ ಮತ್ತು ಇವುಗಳು ಜನಪದರ ಅನುಭವಗಳ ಮೂಲಕ ಸೃಷ್ಟಿಗೊಂಡಿದ್ದರಿಂದ ಇವುಗಳನ್ನು ಅಧ್ಯಯನಕ್ಕೊಳಪಡಿಸುವ ಮೂಲಕ ಜನಜೀವನವನ್ನು ಅರಿಯಬಹುದಾಗಿದೆ. ಅಂತಹ ಒಂದು ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ಕೃಷಿ, ಮನುಕುಲ ಒಂದೆಡೆ ನೆಲೆನಿಂತು ವಾಸಿಸಲು ಪ್ರಾರಂಭಿಸಿದಾಗಿನಿಂದಲೂ ನಿರಂತರವಾಗಿ ನಡೆದುಕೊಂಡು ಬಂದ ಚಟುವಟಿಕೆ. ತಲೆಮಾರಿನಿಂದ ತಲೆಮಾರಿಗೆ ಸಾಗಿ ಬಂದ ಸಂಸ್ಕೃತಿಯ ಈ ನಿರಂತರ ಚಟುವಟಿಕೆ ಕೇವಲ ಶ್ರಮ ಹೂಡಿಕೆಯ ಮತ್ತು ಲಾಭಗಳಿಕೆಯ ವ್ಯವಹಾರವಾಗದೆ ಹತ್ತಾರು ನಂಬಿಕೆಗಳನ್ನು ತನ್ನ ಸುತ್ತ ಸೃಷ್ಟಿಸಿಕೊಂಡಿದೆ. ತನ್ನದೆ ಮನೋಭೂಮಿಕೆಯಲ್ಲಿ ಸಾಂಸ್ಕೃತಿಕ ವಲಯವನ್ನು ರೂಪಿಸಿಕೊಂಡಿದೆ. ಈ ಸಾಂಸ್ಕೃತಿಕ ವಲಯದಲ್ಲಿ ಅನೇಕ ದೈವಗಳಿವೆ, ನಂಬಿಕೆಗಳಿವೆ, ಆಚರಣೆಗಳಿವೆ. ಏಕೆಂದರೆ ಜೀವನ ನಿರ್ವಹಣೆಗಾಗಿ ಕೃಷಿಯನ್ನು ಅವಲಂಬಿಸಿ ಬದುಕುತ್ತಿದ್ದ ಮನುಷ್ಯರಿಗೆ ಭೂಮಿ ಮತ್ತು ಭೂಮಿಯ ಮೇಲೆ ಬೆಳೆಯುವ ಬೆಳೆ ಮುಖ್ಯವಾಗುತ್ತದೆ. ತಾನು ಬಿತ್ತಿದ ಬೆಳೆ ಸುರಕ್ಷಿತವಾಗಿ ತನ್ನ ಕೈ ಸೇರಬೇಕೆಂಬ ಅಭಿಲಾಷೆಯನ್ನು ಹೊಂದಿರುವ ಕೃಷಿಕರು ಪ್ರಕೃತಿಯ ಬಗೆಗೆ ನಿರಂತರವಾಗಿ ಆತಂಕವನ್ನು ಹೊಂದಿದವರಾಗಿರುತ್ತಾರೆ. ಏಕೆಂದರೆ ಮನುಷ್ಯ ಎಷ್ಟೇ ವೈಚಾರಿಕವಾಗಿ ಮುಂದುವರೆದರೂ ನಿಸರ್ಗದ ಕೆಲವು ಕ್ರಿಯೆಗಳು ಅವರ ಕೈ ಮೀರಿದವುಗಳಾಗಿವೆ. ಹಾಗಾಗಿ ಕೃಷಿಕರು ಮಳೆಗಾಗಿ, ಬೆಳೆದ ಬೆಳೆಯ ರಕ್ಷಣೆಗಾಗಿ ಅಥವಾ ಸಮೃದ್ಧವಾದ ಉತ್ತಮ ಫಸಲು ಬೆಳೆಯಲೆಂದು ನಿಸರ್ಗವನ್ನು ವಿವಿಧ ಬಗೆಯಲ್ಲಿ ಭಯ ಭಕ್ತಿಯಿಂದ ಆರಾಧಿಸಿಕೊಂಡು ಬಂದಿರುವರು. ಈ ಆರಾಧನೆಯ ಮನೋಭಾವದಿಂದಲೇ ನಮ್ಮಲ್ಲಿ ಇಂದು ಅನೇಕ ಕೃಷಿ ಸಂಬಂಧಿ ದೈವಗಳಿರುವುದು ಕಂಡು ಬರುತ್ತದೆ. ಅಲ್ಲದೆ ಅವುಗಳಿಗೆ ಸಂಬಂಧಿಸಿದಂತೆ ನಡೆಯುವ ಅನೇಕ ನಂಬಿಕೆ ಆಚರಣೆಗಳು ಕಂಡು ಬರುತ್ತವೆ. 'ನಂಬಿಕೆ ಆಚರಣೆ ಸಾಮಾನ್ಯವಾಗಿ ಒಂದೇ ನಾಣ್ಯದ ಎರಡು ಮುಖಗಳು ಅಂದರೆ ನಂಬಿಕೆಯ ವ್ಯಕ್ತರೂಪ ಆಚರಣೆ. ಆಚರಣೆಯ ಅವ್ಯಕ್ತರೂಪ ನಂಬಿಕೆ. ಹೀಗಾಗಿ ನಂಬಿಕೆಯ ವಿವೇಚನೆಯಲ್ಲಿ ಕೆಲವೊಮ್ಮೆ ಆಚರಣೆಯೂ ಸೇರಿಕೊಳ್ಳುತ್ತದೆ. ನಂಬಿಕೆಗಳಲ್ಲಿ ಮುಖ್ಯವಾಗಿ ಎರಡು ಶಾಖೆಗಳು ಕಂಡು ಬರುತ್ತವೆ. ಒಂದು ವಿಧಿ ಇನ್ನೊಂದು ನಿಷೇಧ. ನಂಬಿಕೆ ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಕೆಲವೊಮ್ಮೆ ವ್ಯತ್ಯಾಸವಾಗಬಹುದು' (ಮಧುವೆಂಕಾರೆಡ್ಡಿ, ೧೯೯೯, ಪು. ೭೯). ಕೆಲವೊಮ್ಮೆ ನಂಬಿಕೆಗಳ ನಡುವೆ ಸಾಮ್ಯತೆಗಳೂ ಇರುವುದನ್ನು

ಕಾಣುತ್ತೇವೆ. ಒಟ್ಟಾರೆ ನಂಬಿಕೆ ಆಚರಣೆಗಳು ಪೂರಕವಾದ ಸಂಬಂಧವನ್ನು ಹೊಂದಿದವುಗಳೇ ಆಗಿವೆ. ನಂಬಿಕೆಗಳನ್ನು ಹೊರತು ಪಡಿಸಿದ ಆಚರಣೆಗಳಿರುವುದಿಲ್ಲ. ಏಕೆಂದರೆ ಯಾವುದೇ ಒಂದು ನಂಬಿಕೆ ಇದ್ದಾಗಲೇ ಅದು ಆಚರಣೆಯ ರೂಪ ಪಡೆಯಲು ಸಾಧ್ಯವಾಗುವುದು.

ಪ್ರಸ್ತುತ ಅಧ್ಯಾಯದಲ್ಲಿ ಕೃಷಿಗೆ ಸಂಬಂಧಿಸಿದಂತಹ ಆಚರಣೆಗಳ ವಿವರ, ಅವು ಆಚರಿಸಲ್ಪಡುವ ರೀತಿ, ಅವುಗಳ ಹಿಂದಿರುವ ತಾತ್ವಿಕತೆ ಮತ್ತು ಬಹುಮುಖ್ಯವಾಗಿ ಆ ಆಚರಣೆಗಳಲ್ಲಿ ಮಹಿಳೆಯ ಪಾಲುದಾರಿಕೆ ಯಾವ ರೀತಿಯದು? ಎಂಬುದನ್ನು ಗಮನಿಸುತ್ತಲೇ ಕೃಷಿ ಸಂಸ್ಕೃತಿಯಲ್ಲಿ ಮಹಿಳೆಯನ್ನು ಹೇಗೆ ಕಾಣಲಾಗಿದೆ ಎಂಬುದನ್ನು ಕೃಷಿ ಪರಿಸರದ ಅಥವಾ ಕೃಷಿ ಸಮುದಾಯದ ನಂಬಿಕೆ ಆಚರಣೆಗಳ ಮೂಲಕ ನೋಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕೃಷಿ ಆಚರಣೆಯ ಸ್ವರೂಪವನ್ನು ಗಮನಿಸಿದಾಗ ಸಾಮಾನ್ಯವಾಗಿ ಕೃಷಿಕರು ತಾವು ಬಿತ್ತಿ ಬೆಳೆದ ಭೂಮಿಗೆ ಕೃತಜ್ಞತೆಯನ್ನು ಸಲ್ಲಿಸುವಂತಹ ಮನೋಭಾವ, ಬೆಳೆ ಬಂದ ಕಾಲಕ್ಕೆ ತಮ್ಮ ಸಂತಸವನ್ನು ಅಭಿವ್ಯಕ್ತಿಸುವಂತಹದ್ದು, ಕೃಷಿಗೆ ಮುಖ್ಯವಾಗಿ ಬೇಕಾದ 'ಮಳೆ' ಬಾರದೆ ಇದ್ದಾಗ ಮಳೆಗಾಗಿ ದೈವವನ್ನು ಪ್ರಾರ್ಥಿಸಿರುವಂತಹದ್ದು, ಬೆಳೆ ಮತ್ತು ಜಾನುವಾರುಗಳಿಗೆ ರೋಗ-ರುಜಿನುಗಳು ಬಂದಾಗ ಅವುಗಳ ನಿವಾರಣೆಗಾಗಿ ದೈವದ ಮೊರೆ ಹೋಗಿರುವಂತಹದ್ದು, ತನ್ನ ದುಡಿಮೆಗೆ ಹೆಗಲ ಕೊಟ್ಟು ದಣಿಯುವ ಮೂಕ ಪ್ರಾಣಿ ಬಸವಣ್ಣ (ಎತ್ತುಗಳಿಗೆ)ನಿಗೆ ಕೃತಜ್ಞತೆಯನ್ನು ತೋರುವಂತಹದ್ದು ಇತ್ಯಾದಿ ಈ ರೀತಿಯ ಸಂಗತಿಗಳು ಕೃಷಿ ಸಂಬಂಧಿ ಆಚರಣೆಗಳಲ್ಲಿರುವುದು ಕಂಡು ಬರುತ್ತದೆ.

### ೫.೧ ಸ್ತ್ರೀತ್ವದ ಬಗೆಗಿನ ಕೃಷಿಕರ ಪರಿಭಾವನೆ

ಕೃಷಿಕರು ದೈವ ರೂಪದಲ್ಲಿ ಆರಾಧಿಸುವ ಬಹುಪಾಲು ದೈವಗಳು ಹೆಣ್ಣು ದೈವಗಳಾಗಿವೆ. ಏಕೆಂದರೆ ಆದಿಮ ಮಾನವರು ಹೆಣ್ಣಿನಲ್ಲಿರುವ ಜೈವಿಕ ಶಕ್ತಿಯೇ ಪ್ರಕೃತಿಯ ಪ್ರಕ್ರಿಯೆಗಳಿಗೂ ಕಾರಣ ಎಂದು ಭಾವಿಸಿರುವ ಕಾರಣಕ್ಕಾಗಿ ಹೆಣ್ಣಿನ ಸ್ವರೂಪದಲ್ಲಿ ದೈವವನ್ನು ಪೂಜಿಸುವ ಆರಾಧಿಸುವ ರೂಢಿ ಬೆಳೆದು ಬಂದಿದೆ. ಆ ಕಾರಣಕ್ಕಾಗಿಯೇ ಈಗಲೂ ಕೃಷಿಕರು ಹೊಲದಲ್ಲಿ ಪತ್ರಿಗಿಡದ ಅಥವಾ ಬೇವಿನ ಮರದ ನೆರಳಿಗೆ ದೊಡ್ಡ ಕಲ್ಲನಿಟ್ಟು ಅದನ್ನು ತಮ್ಮ ಹೊಲ ಕಾಯುವ ಲಕ್ಷ್ಮಿ ಎಂದು ಪೂಜಿಸುತ್ತಾರೆ. ಕೆಲವು ಕೃಷಿಕರು ತಮ್ಮ ಹೊಲದಲ್ಲಿರುವ ಬನ್ನಿ ಮರವನ್ನು ಲಕ್ಷ್ಮಿ ಸ್ವರೂಪದಲ್ಲಿ ಭಾವಿಸಿ ಪೂಜಿಸುತ್ತಾರೆ. ರೈತಾಪಿಗಳು ತಮ್ಮ ದನಕರುಗಳನ್ನು ರೋಗರುಜಿನುಗಳಿಂದ ರಕ್ಷಿಸುವಳೆಂಬ ನಂಬಿಕೆಯಿಂದ ತಮ್ಮ ದನದ ಕೊಟ್ಟಿಗೆಯ ಒಂದು ಗೂಣೆನಲ್ಲಿ (ಮಾಡಿನಲ್ಲಿ) ಒಂದು ಸಣ್ಣ ಗುಂಡಕಲ್ಲನ್ನಿಟ್ಟು ಇಲ್ಲವೆ ಒಂದು ತೆಂಗಿನ ಕಾಯಿ ಇಟ್ಟು ಅದನ್ನು ಕರಿಯವ್ವ ಎಂದು ಪೂಜಿಸುವರು.

ಅಲ್ಲದೆ ಮಳೆ ಬಾರದಿದ್ದರೆ ಹೆಣ್ಣು ದೈವವಾದ ಊರಿನ ಗ್ರಾಮದೇವತೆಗೆ ಮೊರೆ ಹೋಗಿ ಬೇಡಿಕೊಳ್ಳುವ ಮತ್ತು ದೇವಿಗೆ ಉಡಿ ತುಂಬುವಂತಹದ್ದು, ಗ್ರಾಮದೇವತೆಯ ಅಥವಾ ಊರಮ್ಮನ

ಜಾತ್ರೆಯನ್ನು ಮಾಡುವಂತಹದ್ದು, ಕೆಲವು ಊರುಗಳಲ್ಲಿ ಈಗಲೂ ಸರಕಾರ ಬಲಿಯನ್ನು ನಿಷೇಧಿಸಿದರೂ ಕೂಡ ಊರದೇವಿಯು ಸಂತೃಪ್ತಳಾಗಲೆಂದು ಕದ್ದು ಮುಚ್ಚಿಯಾದರೂ ಕುರಿ, ಕೋಣ, ಕೋಳಿಯಂತಹ ಪ್ರಾಣಿಗಳನ್ನು ಬಲಿಕೊಡುವಂತಹ ಆಚರಣೆಗಳು ನಡೆಯುತ್ತವೆ.

ಅಂತೆಯೇ ಕೃಷಿಕರು ಭೂಮಿಯ ಬಗೆಗಿರುವ ಕೃತಜ್ಞತಾ ಮನೋಭಾವದಿಂದ ಆಚರಿಸುವ ಶೀಗಿ ಹುಣ್ಣಿಮೆಯ ಆಚರಣೆಯಲ್ಲಿ ಭೂಮಿಯನ್ನು ಒಂದು ಹೆಣ್ಣು ಎನ್ನುವ ಪರಿಕಲ್ಪನೆಯಲ್ಲಿಯೇ ಪೂಜಿಸಲಾಗುತ್ತದೆ. ಕೃಷಿಕರು ಮಾನವ ಸಹಜವಾದ ಗರ್ಭಿಣಿ ಸ್ತ್ರೀಯ ಬಯಕೆ ಊಟವನ್ನು ಭೂಮಿಗೂ ಉಣಬಡಿಸುವ ರೀತಿಯನ್ನು ಚರಗ ಚಲ್ಲುವ ಕ್ರಿಯೆಯಲ್ಲಿ ನೋಡಬಹುದು. ಆ ದಿನ ವೈವಿಧ್ಯಮಯವಾಗಿ ಮಾಡಿದ ಎಳ್ಳು ಹಚ್ಚಿದ ಜೋಳದ ರೊಟ್ಟಿ, ಸಜ್ಜಿರೊಟ್ಟಿ, ಗೋದಿಯ ಹುಗ್ಗಿ, ಅಕ್ಕಿಹುಗ್ಗಿ, ಕುಂಬಳಕಾಯಿ ಪಲ್ಯ, ಪುಂಡಿಪಲ್ಯ, ಎಣ್ಣೆಗಾಯಿ, ಹುರಕ್ಕಿ ಹೋಳಿಗೆ, ಕರ್ಚಿಕಾಯಿ, ಉಂಡಗಡಬು, ಕುಚ್ಚಿದ ಕಾರಾ, ಕರಿಗಡಬು, ಚಕ್ಕುಲಿ, ಕೋಡಬಳೆ, ಬಜಿ, ಗಾರ್ಗಿ, ಕರೆದ ಮೆಣಸಿನ ಕಾಯಿ, ಸಂಡಿಗೆ, ಕೋಸಂಬರಿ ಈ ಎಲ್ಲ ಪದಾರ್ಥಗಳನ್ನು ಸ್ವಲ್ಪ ಸ್ವಲ್ಪ ತೆಗೆದುಕೊಂಡು ಎಲ್ಲವನ್ನು ಸೇರಿಸಿ ಹೊಲದ ತುಂಬೆಲ್ಲ 'ಹುಲಿಗೋ...' 'ಹುಲಿಗೋ' ಎಂದು ಎರಚುವರು. ಇದನ್ನು ಚರಗ ಚೆಲ್ಲುವುದು ಎನ್ನುವರು. ಒಟ್ಟಲ್ಲಿ ಈ ಆಚರಣೆಯಿಂದ ರೈತರಿಗೆ ಭೂಮಿಯ ಬಗೆಗೆ ದೈವಿಭಾವನೆ ಇರುವುದು ಮತ್ತು ಭೂಮಿಯನ್ನು ಹೆಣ್ಣು ರೂಪದಲ್ಲಿ ಆರಾಧಿಸುವುದು ತಿಳಿದು ಬರುತ್ತದೆ.

ಕೃಷಿಕರು ತಾವು ಬೆಳೆದ ಬೆಳೆಯನ್ನು ಉಪಯೋಗಿಸುತ್ತಿದ್ದ ಕೃಷಿ ಉಪಕರಣಗಳನ್ನು ಕೂಡ ಹೆಣ್ಣಿನ ಸ್ವರೂಪದಲ್ಲಿ ಕಾಣುತ್ತಾರೆ. ಮತ್ತು ಅವುಗಳನ್ನು ಹೆಣ್ಣು ರೂಪದಲ್ಲಿ ಪೂಜಿಸುತ್ತಾರೆ. 'ರಾಶಿ ಪೂಜೆಯ ಸಂದರ್ಭದಲ್ಲಿ ರಾಶಿಗೆ ಸೀರೆ ಏರಿಸುವ ಕ್ರಿಯೆ ಬೆಳೆದ ಬೆಳೆಯನ್ನು ಹೆಣ್ಣಾಗಿ ಪರಿಭಾವಿಸಿರುವುದನ್ನು ತಿಳಿಸುತ್ತದೆ.'[೧] ಗಣೇಶ ಚತುರ್ಥಿಯ ಸಂದರ್ಭದಲ್ಲಿ ಮಾಡುವ ಅಷ್ಟಮಿ ಎನ್ನುವ ಆಚರಣೆಯಲ್ಲಿ ಕುಂಬಳ ಅಥವಾ ಬಾಳೆ ಎಲೆಯ ಮೇಲೆ ತಾವು ಬೆಳೆದ ಹತ್ತಿಯನ್ನಿಟ್ಟು 'ಎಳಲಕ್ಷ್ಮಿ' ಎಂದು ಪೂಜಿಸುವರು. ಅಂತೆಯೇ ವೀಳ್ಯದೆಲೆಯನ್ನು ತುಳಿಯಬಾರದು, ವೀಳ್ಯದೆಲೆಯನ್ನು ಆರಿಸಿಕೊಂಡು ಹಾಕಿಕೊಳ್ಳಬಾರದು; ಅದು ಲಕ್ಷ್ಮಿಗೆ ಸಮಾನ ಎಂದು ಭಾವಿಸಿರುವರು. ಇಲ್ಲಿ ತಾವು ಬೆಳೆದ ಬೆಳೆಯನ್ನು ಹೆಣ್ಣು ರೂಪದಲ್ಲಿ ಕಂಡಿರುವುದು ತಿಳಿದು ಬರುತ್ತದೆ. ಅಲ್ಲದೆ ಮೊದಲ ಬಿತ್ತನೆಯ ಸಂದರ್ಭದಲ್ಲಿ ಬಿತ್ತುವ ಕೂರಿಗೆಗೆ ಸೀರೆ ಉಡಿಸಿ ಅಲಂಕರಿಸಿ ಪೂಜಿಸಿ ನಂತರ ಹೊಲ ಬಿತ್ತುವ ಕ್ರಿಯೆಯಲ್ಲಿ ತೊಡಗುವರು. ಇಲ್ಲಿ ಕೃಷಿಕರು ಕೃಷಿ ಉಪಕರಣಗಳಲ್ಲಿ ಕೂಡ ಹೆಣ್ಣು ರೂಪದಲ್ಲಿಯೇ ಕಾಣುವ ರೀತಿಯನ್ನು ಗಮನಿಸಬಹುದು.

ಈ ಎಲ್ಲ ಆಚರಣೆಗಳಿಂದ ತಿಳಿದು ಬರುವ ಸಂಗತಿ ಎಂದರೆ ಮಳೆ ಬೀಳುವ, ಬೆಳೆ ಬೆಳೆಯುವ, ಬಂದ ಬೆಳೆಯನ್ನು ಸಂರಕ್ಷಿಸುವ, ತಮ್ಮ ದನಕರುಗಳನ್ನು ರೋಗರುಜಿನುಗಳಿಂದ ಕಾಪಾಡುವ ಮಾಂತ್ರಿಕತೆಗೂ ಹೆಣ್ಣಿನ ಸೃಷ್ಟಿ ಕ್ರಿಯೆಗೂ ಸಂಬಂಧವಿದೆ ಎಂದು ಭಾವಿಸಿದ್ದರಿಂದ ಹೆಣ್ಣಿನ ಸ್ವರೂಪವನ್ನು ಸಾಂಕೇತಿಸಿಕೊಂಡು,

ಇಲ್ಲವೆ ಸ್ವತಃ ಹೆಣ್ಣನ್ನೆ ಭಾಗಿಯಾಗಿಸಿಕೊಂಡು ಆಚರಣೆಗಳು ನಡೆದುಕೊಂಡು ಬಂದಿವೆ. ಅಲ್ಲದೆ ಕೃಷಿಕರು ದೈವವನ್ನು ಹೆಣ್ಣು ರೂಪದಲ್ಲಿ ಪೂಜಿಸುತ್ತಿರುವುದು ಮತ್ತು ತಮ್ಮ ಸುತ್ತಲಿನ ವಸ್ತುಗಳಲ್ಲಿ ಹೆಣ್ಣು ರೂಪವನ್ನು ಕಾಣುವುದಕ್ಕೂ ಕೂಡ ಹೆಣ್ಣು ಒಂದು ಅದ್ಭುತ ಶಕ್ತಿ ಎಂದು ಭಾವಿಸಿರುವ ಮನೋಭಾವವೇ ಕಾರಣವಾಗಿದೆ.

ಅದೇ ರೀತಿಯಾಗಿ ನೆಲದ ಫಲಶಕ್ತಿಯನ್ನು ಹೆಚ್ಚಿಸಲು, ಖಾತರಿಗೊಳಿಸಲು, ಹಲವಾರು ರೀತಿಯ ಧಾರ್ಮಿಕ ವಿಧಿಗಳು ಹುಟ್ಟಿಕೊಂಡಿದ್ದವು. ಇವೇ ಮುಖ್ಯವಾಗಿ ಹೆಣ್ಣಿನಲ್ಲಿ ಹುದುಗಿದೆ ಎಂದು ನಂಬಲಾಗುತ್ತಿದ್ದ ನಿಗೂಢ ಮಾಂತ್ರಿಕ ಶಕ್ತಿಯನ್ನು ಗೌರವದಿಂದ ಆರಾಧಿಸುವಂಥವು. ಭಿನ್ನ ಭಿನ್ನ ಬುಡಕಟ್ಟು ಜನರಲ್ಲಿ ರೂಢಿಯಲ್ಲಿ ಇಂದಿಗೂ ಕಂಡು ಬರುವ ಧಾನ್ಯ-ನೃತ್ಯ ಸುಗ್ಗಿ ಕುಣಿತಗಳಲ್ಲದೆ ಮಳೆ ಬರಿಸಲೆಂದು ನಡೆಯುವ ಮಾಂತ್ರಿಕ ವಿಧಿಗಳಲ್ಲೂ ಹೆಂಗಸರೇ ಮುಖ್ಯ ಪಾತ್ರ ವಹಿಸುತ್ತಾರೆ. ಈ ಕ್ರಿಯಾವಿಧಿಗಳಲ್ಲಿ ಹೆಣ್ಣಿನ ಬತ್ತಲೆ ಮೈಯನ್ನು ಅಥವಾ ಆಕೆಯ ಜನನೇಂದ್ರಿಯವನ್ನು ಹೊಲಗದ್ದೆಗಳಿಗೆ ತೋರಿಸುವುದು, ಬೆತ್ತಲು ಹೆಣ್ಣಿನ ಹೆಗಲಿಗೆ ನೇಗಿಲು ಹೂಡಿ ಉಳುವಂತೆ ವಿಧಿಯನ್ನು ಆಚರಿಸುವುದು ಸೇರಿರುತ್ತವೆ. ಇವುಗಳೊಂದಿಗೆ ಹಾಡು ಕುಣಿತಗಳೂ ಪ್ರಾಚೀನ ಕಾಲದ ಫಲವಂತಿಕೆಯ ಆರಾಧನಾ ವಿಧಿಗಳಾಗಿದ್ದವು (ಉದ್ಧೃತ: ಡಾ.ಬಿ.ಎನ್.ಸುಮಿತ್ರಾಬಾಯಿ, ೨೦೦೪, ಪು-೪೯೪).

ಅದೇ ರೀತಿಯಾಗಿ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲೂಕಿನ ವ್ಯಾಪ್ತಿಯಲ್ಲಿ ಬರುವ ಆದಿವಾಸಿಗಳಲ್ಲಿ ಇಂದಿಗೂ ರೂಢಿಯಲ್ಲಿದ್ದ ವಿಶಿಷ್ಟವಾಗಿ ಆಚರಿಸಲ್ಪಡುತ್ತ ಬಂದಿರುವ ಮಳೆ ಸಂಬಂಧಿ ಆಚರಣೆಯೊಂದನ್ನು ಗಮನಿಸಬಹುದು. ಬೇಸಿಗೆ ಕಾಲ ಆರಂಭವಾಗಿ ಕೆರೆ, ಹಳ್ಳ-ಕೊಳ್ಳದಲ್ಲಿನ ನೀರು ಬತ್ತಿ ಹೋಗಿ ಭೂಮಿಯ ಮೇಲೆ ನೀರು ಕಡಿಮೆಯಾದಾಗ ಮನುಷ್ಯರಿಗೆ, ಪ್ರಾಣಿಗಳಿಗೆ ತೊಂದರೆಯಾಗುತ್ತದೆ ಎಂದು ಮಳೆ ಆಚರಣೆಯನ್ನು ಮಾಡಬೇಕೆಂದು ಗ್ರಾಮದಲ್ಲಿ ನಿರ್ಧರಿಸಿ ಆಸಕ್ತರೆಲ್ಲರೂ ಸೇರಿ ಮನೆ ಮನೆಗೆ ಹೋಗಿ ರಾಗಿಹಿಟ್ಟು ಪಲ್ಯದ ಕಾಳು ಮತ್ತು ಅವರು ಕೊಟ್ಟಷ್ಟು ಹಣವನ್ನು ಸಂಗ್ರಹಿಸುತ್ತಾರೆ. ರಾಗಿಹಿಟ್ಟು ಮತ್ತು ಕಾಳನ್ನು ಒಂದು ಕಡೆ ಕೂಡಿಟ್ಟು ಸಂಗ್ರಹವಾದ ಹಣವನ್ನು ಅಗತ್ಯ ಪೂಜಾ ಸಾಮಗ್ರಿಗಳನ್ನು ಕೊಳ್ಳಲು ಬಳಸುತ್ತಾರೆ.

ಆಚರಣೆ ಮಾಡುವ ದಿನದಂದು ಇಡೀ ಗ್ರಾಮದ ವಿವಿಧ ಸಮುದಾಯಗಳ ವಿವಾಹಿತ ಮಹಿಳೆಯರೆಲ್ಲರೂ ಒಂದೆಡೆ ಸೇರುವರು. ಅದರಲ್ಲೆ ಓರ್ವ ಹಿರಿಯ ಹೆಣ್ಣು ಮಗಳು ಮುಖಂಡತ್ವವನ್ನು ವಹಿಸುವಳು. ತಮಟೆಯನ್ನು ಬಾರಿಸುವ ಕೆಲಸವನ್ನು ಮಾದಿಗ ಸಮುದಾಯದ ಓರ್ವ ಹೆಣ್ಣುಮಗಳು ನಿರ್ವಹಿಸುವಳು. ಎಲ್ಲರೂ ಕೂಡಿ ಮಳೆ ಆಚರಣೆಗೆ ಬೇಕಾದ ಪೂಜಾ ಸಾಮಗ್ರಿಗಳೊಂದಿಗೆ ಮಳೆ ಗುಡ್ಡದ ಕಡೆಗೆ ಬೆಳಿಗ್ಗೆ ಹತ್ತು ಹನ್ನೊಂದು ಗಂಟೆ ಸುಮಾರಿಗೆ ಹೊರಡುವರು.

ಆಚರಣೆಗಾಗಿ ಊರಿನಿಂದ ಒಂದು ಕಿಲೊಮೀಟರ್ ದೂರದಲ್ಲಿರುವ ಒಂದು ಗುಡ್ಡದಲ್ಲಿನ ಸಮತಟ್ಟಾದ ಜಾಗವನ್ನು ಗುರುತಿಸಿ ಚಿತ್ರದಲ್ಲಿ ತೋರಿಸಿರುವಂತೆ ಕಲ್ಲುಗಳಿಂದ ಎರಡು ಕಟ್ಟೆಯನ್ನು ಕಟ್ಟುತ್ತಾರೆ. ಕಟ್ಟೆಯ ಒಳಗೆ ಕಾಡುಜಾತಿಯ ಮರಗಳು ಬೆಳೆದಿರುತ್ತವೆ. ಮರದ ಬುಡದಲ್ಲಿ ದೇವರ ಸಂಕೇತವಾಗಿ ಐದು ಅಥವಾ ಮೂರು ಕಲ್ಲುಗಳನ್ನು ಇಟ್ಟಿರುವರು. (ಐದು ಕಲ್ಲುಗಳು ಪಂಚಭೂತಗಳ ಸಂಕೇತವಾದರೆ, ಮೂರು ಕಲ್ಲುಗಳು ಬ್ರಹ್ಮ, ವಿಷ್ಣು, ಮಹೇಶ್ವರರ ಸಂಕೇತವಾಗಿರುತ್ತವೆ.) ಆಚರಣೆಯ ಹಿಂದಿನ ದಿನವೇ ಗಿಡ ಗಂಟೆಗಳನ್ನೆಲ್ಲ ಕಿತ್ತು ನೀರು ಹಾಕುವುದರ ಮೂಲಕ ಪೂಜೆಗೆ ಅಣಿಗೊಳಿಸುತ್ತಾರೆ.

ಆ ಆಚರಣೆಯನ್ನು ಸೋಮವಾರದಂದು ಮಾಡಲಾಗುತ್ತದೆ. ಮಾದಿಗರ ಜಾತಿಗೆ ಸೇರಿದ ಒಬ್ಬ ಹೆಂಗಸು ತಮಟೆಯನ್ನು ಬಡಿಯುವಳು. ಈ ಹೆಂಗಸಿನ ತಂಬಡಿಯ ಹಿಂದೆ ಅಂದಿನ ಪೂಜಾಕಾರ್ಯಕ್ಕೆ ನೇಮಕವಾದ ಕುರುಬ, ಹಾಲುಕುರುಬ, ತೆಲುಗುಶೆಟ್ಟಿ, ಒಕ್ಕಕುರುಬ ಸಮುದಾಯದ ಹಿರಿಯ ಹೆಂಗಸರೆಲ್ಲ ಹೊರಡುತ್ತಾರೆ. ಇವರೆಲ್ಲ ಸ್ನಾನ ಮಾಡಿ, ಬಿಳಿ ಉಡುಗೆ ತೊಟ್ಟು ಆಚರಣೆಯಲ್ಲಿ ಭಾಗಿಯಾಗುತ್ತಾರೆ.



ತಂಬಡಿಯ ಮುಂದಾಳತ್ವದಲ್ಲಿ ಪೂಜಾ ಕಾರ್ಯ ನೆರವೇರಿದ ಬಳಿಕ ಉಳಿದ ಎಲ್ಲ ಹೆಂಗಸರು ಪೂಜೆ ಮಾಡುವರು. ಅನಂತರ ಎಲ್ಲರೂ ಕಕ್ಕೆಯ ಸೊಪ್ಪನ್ನು ಮುರಿದು ಎರಡು ಕೈಗಳಲ್ಲೂ ಹಿಡಿದುಕೊಳ್ಳುವರು. ತಮಟೆಯ ನಾದಕ್ಕೆ ಹೆಜ್ಜೆ ಹಾಕುತ್ತ ಕಲ್ಲು ಗುಡ್ಡೆಗಳ ಸುತ್ತ ಕುಣಿಯಲು ಆರಂಭಿಸುವರು. ಆರಂಭದಲ್ಲಿ ಸೀರೆಯನ್ನು ಮಂಡಿಯವರೆಗೆ ಎತ್ತಿ ಕಟ್ಟುವರು. ತಮಟೆನಾದ ಏರುತ್ತಿದ್ದಂತೆಲ್ಲ ಕುಣಿತದ ಗತಿಯು ಏರುವುದು. ಆರಂಭದಲ್ಲಿ ಕೆಲವರು ಸೀರೆಯನ್ನಷ್ಟೆ ಬಿಚ್ಚಿಡುವರು. ವಯಸ್ಸಾದ ಹೆಂಗಸರು ಬಟ್ಟೆಯನ್ನೆಲ್ಲ ಬಿಚ್ಚಿಟ್ಟು ತಮಟೆಯ ನಾದಕ್ಕೆ ತಕ್ಕಂತೆ ಹಾಡುತ್ತ ಕುಣಿಯುವರು. "ಮಕ್ಕಳು ಮರಿಗೆ ಹಿಟ್ಟಿಲ್ಲ, ಸಾಯುತ್ತಿದ್ದಾರೆ ಮಳೆ ಹುಯ್ಯೋ ದೇವೇಂದ್ರ" ಎಂದು ಅಳುತ್ತಾ ಕುಣಿಯುವರು. ತಮಟೆಗತಿ ಕುಣಿತ, ಮಿಳಿತಗೊಂಡು ಆವೇಶಗೊಂಡು ಉಳಿದವರು ಬಟ್ಟೆಯನ್ನು ಸಂಪೂರ್ಣ ತೆಗೆದು ಕುಣಿಯುವರು. ಅವರು ದಣಿಯುವಷ್ಟು ಕುಣಿದು ಕೊನೆಯ ಪೂಜೆ ಮಾಡುವರು.

ಈ ಪೂಜಾ ಕಾರ್ಯ ಮತ್ತು ಬೆತ್ತಲೆ ಕುಣಿತವು ಸುಮಾರು ಎರಡು ಮೂರು ಗಂಟೆಗಳು ನಡೆಯುತ್ತದೆ. ನಂತರ ಕೊನೆಯಲ್ಲಿ ಪೂಜೆಯನ್ನು ಸಲ್ಲಿಸಿದ ಬಳಿಕ ತಮ್ಮ ತಮ್ಮ ಬಟ್ಟೆಗಳನ್ನು ಧರಿಸಿಕೊಳ್ಳುವರು

ಹಾಗೂ ತೆಗೆದುಕೊಂಡು ಹೋಗಿರುವ ಕಡಲೆಪುರಿ ಮಂಡಾಳು, ತೆಂಗಿನಕಾಯಿ, ಬಾಳೆಹಣ್ಣನ್ನು ಎಲ್ಲರೂ ಪ್ರಸಾದವಾಗಿ ಸ್ವೀಕರಿಸುವರು. ಅನಂತರ ಮಳೆ ಗುಡ್ಡದಿಂದ ಊರಿನ ಕಡೆಗೆ ಇಳಿದು ಬರುವರು (ಈವರೆಗೂ ನಡೆದ ಆಚರಣೆಯ ವಿಧಿಕ್ರಿಯೆಗಳಲ್ಲಿ ಕೇವಲ ಮಹಿಳೆಯರು ಮಾತ್ರ ಭಾಗವಹಿಸುವರು. ಯಾವುದೇ ಕಾರಣಕ್ಕೂ ಗಂಡುಮಕ್ಕಳು ಹತ್ತಿರ ಸುಳಿಯುವ ಹಾಗಿಲ್ಲ ಎಂಬ ನಿಷೇಧವಿದೆ. ಹಾಗೊಂದು ವೇಳೆ ಗಂಡು ಮಕ್ಕಳು ಆಚರಣೆ ನಡೆವ ಸ್ಥಳಕ್ಕೆ ಹೋದರೆ ಕಲ್ಲಾಗುತ್ತಾರೆ ಎಂಬ ನಂಬಿಕೆ ಇದೆ.). ಇವರು ಬರುವುದನ್ನು ನಿರೀಕ್ಷಿಸುತ್ತಿದ್ದ ಗ್ರಾಮದ ಜನರೆಲ್ಲಾ ಇವರನ್ನು ಬರಮಾಡಿಕೊಳ್ಳುವರು. ಪೂಜಾ ಆಚರಣೆಯನ್ನು ಮುಗಿಸಿ ಹೋದ ಬಳಿಕ ಹಿಂದಿನ ದಿನ ಮನೆ ಮನೆಯಲ್ಲಿ ಸಂಗ್ರಹಿಸಿರುವ ರಾಗಿಹಿಟ್ಟು, ಅಂಬಲಿಯನ್ನು ಮತ್ತು ಕಾಳಿನಿಂದ ಸೊಪ್ಪು ಸೇರಿಸಿ ಪಲ್ಯವನ್ನು ಸಿದ್ಧಪಡಿಸಿರುತ್ತಾರೆ. ಮಣ್ಣಿನ ಮಡಿಕೆಯಲ್ಲಿ ಅಂಬಲಿಯನ್ನು ಮತ್ತು ಬಿದಿರ ಬುಟ್ಟಿಯಲ್ಲಿ ಕಾಳುಸೊಪ್ಪು ಪಲ್ಯವನ್ನು ತುಂಬಿಸಿಕೊಂಡು ಊರಿನ ಸಣ್ಣ ಮಕ್ಕಳೆಲ್ಲರನ್ನು ಕೂಡಿಸಿಕೊಂಡು ಊರಿನ ಹೊರಗೆ ಪ್ರಯಾಣ ಮಾಡುತ್ತಾರೆ. ಹೋಗುವಾಗ "ಊರಲ್ಲಿ ಮಳೆ ಇಲ್ಲ ಬೆಳೆಯಿಲ್ಲ, ದನಕರುಗಳಿಗೆ ನೀರಿಲ್ಲ, ಮಕ್ಕಳಿಗೆ ಹಿಟ್ಟಿಲ್ಲ, ಅದಕ್ಕೆ ಊರು ಬಿಟ್ಟು ದೇಶಾಂತ್ರ ಹೋಗ್ತೇವೆ" ಎಂದು ಹೇಳುವರು. ಮಕ್ಕಳೆಲ್ಲ ಅಳುತ್ತಾ ಅವ್ವ ಅಂಬಲಿ, ಅವ್ವ ಅಂಬಲಿ ಎಂದು ಅಳುತ್ತಿರುತ್ತಾರೆ. ಆಗ ಅಂಬಲಿ ಹೊತ್ತವಳು ಸೌಟಿನಿಂದ ಮಕ್ಕಳ ತಲೆಯ ಮೇಲೆ ಹೊಡೆಯುವಳು. ಆಗ ಊರಿನ ಯಜಮಾನರು ಹೋಗಿ "ಅಯ್ಯೋ ಊರು ಬಿಟ್ಟು ಹೋಗಬೇಡಿ ಮಳೆ ಬೆಳೆ ಆಗುತ್ತೆ ದನಕರುಗಳಿಗೆ ನೀರು ಮಕ್ಕಳಿಗೆ ಹಿಟ್ಟು ಸಿಗುತ್ತೆ ಬನ್ನಿ" ಎಂದು ಮನ ಒಲಿಸುತ್ತಾರೆ. ಇದೇ ರೀತಿ ನಾಟಕೀಯವಾಗಿ ಬಹಳಷ್ಟು ದೂರದವರೆಗೆ ಸಂಭಾಷಣೆ ನಡೆಯುತ್ತದೆ. ಕೊನೆಗೆ 'ಯಜಮಾನರು ಮಳೆ ಆಗುತ್ತೆ ಮಕ್ಕಳು ಮರಿಗೆ ಹಿಟ್ಟು ಸಿಗುತ್ತೆ' ಎಂದು ಹೇಳ್ತಾ ಇದ್ದಾರೆ. "ಬನ್ನಿ ಹಾಗಾದ್ರೆ ವಾಪಸ್ಸು ಊರಿಗೆ ಹೋಗೋಣ" ಎಂದು ಎಲ್ಲರೂ ವಾಪಾಸಾಗುತ್ತಾರೆ. ಕೊನೆಯದಾಗಿ ಅಂದು ಗ್ರಾಮದ ಜನರೆಲ್ಲರೂ ಊರಿನ ಗುಡಿಗೆ ಹೋಗಿ ಪೂಜೆ ಸಲ್ಲಿಸಿ ತಮ್ಮ ತಮ್ಮ ಮನೆಗೆ ಹೋಗುತ್ತಾರೆ. ಜನರೆಲ್ಲ ಮನೆ ಸೇರುತ್ತಿದ್ದಂತೆ ಆಕಸ್ಮಿಕವೊ, ಅನಿರೀಕ್ಷಿತವೊ, ಆಚರಣೆಯ ಫಲವೊ ಒಟ್ಟಲ್ಲಿ ಮಳೆಯು ಬರುತ್ತದೆ (ಸಂ. ಕೇಶವನ್ ಪ್ರಸಾದ್, ೨೦೦೫, ಪು. ೨೨೦-೨೨೫).

ಈ ಆಚರಣೆಯಿಂದ ಹೆಣ್ಣು ಮಕ್ಕಳು ಬೆತ್ತಲಾಗಿ ಕುಣಿದರೆ ಮಳೆ ಬರುತ್ತದೆಂಬ ನಂಬಿಕೆ ಬುಡಕಟ್ಟು ಮಹಿಳೆಯರಲ್ಲಿದೆ ಎಂಬುದು ತಿಳಿದು ಬರುತ್ತದೆ. ಅಂತೆಯೇ ದಕ್ಷಿಣ ಕನ್ನಡ ಜಿಲ್ಲೆಯ ಹಾಲಕ್ಕಿ ಒಕ್ಕಲಿಗರ ಹೆಣ್ಣು ಮಕ್ಕಳು ಮಳೆಗಾಗಿ ಪ್ರಾರ್ಥಿಸುತ್ತ 'ತಾರಲೆ ಬಾರಲೆ' ಎಂದು ಆಹ್ವಾನಿಸುತ್ತ ಗುಂಪು ಗುಂಪಾಗಿ ನರ್ತಿಸುತ್ತಾರೆ (ಸಂ. ಎಂ.ಜಿ. ಈಶ್ವರಪ್ಪ, ೧೯೯೯, ಪು.೫೭).

ಇದೇ ರೀತಿ ನೆರೆಯ ರಾಜ್ಯವಾದ ತಮಿಳುನಾಡಿನಲ್ಲಿಯೂ ಇಂತಹ ಆಚರಣೆ ರೂಢಿಯಲ್ಲಿರುವುದು ಕಂಡುಬರುತ್ತದೆ. ತಮಿಳುನಾಡಿನ ಸೇಲಂ ಜಿಲ್ಲೆಯ ಅತ್ತೂರಿನ ಬಳಿಯಿರುವ ಪೇಳೂರಿನಲ್ಲಿ ಮಳೆಯನ್ನು

ಭಯಸಿ ಕನ್ಯೆಯರು ಮತ್ತು ಮಕ್ಕಳನ್ನು ಸುತ್ತುಗಟ್ಟಿ ಏಳು ಜನ ಹಿರಿಯ ಮುತ್ತೈದೆಯರು ಸೇರಿ ವೃತ್ತಾಕಾರದಲ್ಲಿ ನಗ್ನರಾಗಿ ನಿಂತು ತಮ್ಮ ಹಿಂಬದಿಯಲ್ಲಿ ಕೊಡವನ್ನು ತಟ್ಟುತ್ತಾ ನರ್ತನ ಮಾಡುತ್ತಾರೆ. ಈ ವಿಧಿ ನಡೆಯುವ ಪ್ರದೇಶಕ್ಕೆ ಗಂಡಸರಿಗೆ ಪ್ರವೇಶವಿಲ್ಲ. ಹೆಂಗಸರು ಮತ್ತು ಚಿಕ್ಕಮಕ್ಕಳು ಭಾಗವಹಿಸಬಹುದು. ಹೆಣ್ಣಿನ ಲಿಂಗ, ಕುಲವೃದ್ಧಿಯ ಮತ್ತು ಸಮೃದ್ಧಿಯ ಚಿಹ್ನೆ ಅದನ್ನು ನೆಲಕ್ಕೆ ಕಾಣಿಸಿದರೆ ನೆಲವು ಸಮೃದ್ಧಿಯ ಶಕ್ತಿಯನ್ನು ಪಡೆದು ಮಳೆಯನ್ನು ಆಕರ್ಷಿಸುತ್ತದೆ ಎಂಬ ನಂಬಿಕೆ ಇದರಲ್ಲಿದ್ದಂತೆ ಕಾಣುತ್ತದೆ (ಸಂ. ಪಾ.ಶ. ಶ್ರೀನಿವಾಸ, ೧೯೮೫, ಪು-೧೪೦).

ಹೀಗೆ ಬೇಸಾಯವೇ ಪ್ರಧಾನ ಉತ್ಪಾದನಾ ವಿಧಾನವಾಗಿದ್ದ ಜನಾಂಗಗಳು ಮನುಷ್ಯರ ಫಲವಂತಿಕೆ, ಹೆಣ್ಣಿನ ಫಲವಂತಿಕೆ ಮತ್ತು ನಿಸರ್ಗದ ಸೃಷ್ಟಿ ಶಕ್ತಿಗಳನ್ನೆಲ್ಲ ಒಂದು ದೊಡ್ಡ ಸ್ತ್ರೀ ಶಕ್ತಿಗೆ ಅಧೀನವೆಂದು ಗಾಢವಾಗಿ ನಂಬಲಾಗುತ್ತಿತ್ತು. ಬೇಸಾಯದ ಯಶಸ್ಸು, ಶಿಶುವಿಗೆ ಜನ್ಮಕೊಡುವ ಶಕ್ತಿಯ ಹಾಗೆ ಹೆಣ್ಣಿನ ಮಾಂತ್ರಿಕ ಶಕ್ತಿಯನ್ನೆ ಆಧರಿಸಿದೆ ಎಂದು ನಂಬಿದ್ದ ಜನರು ಕೃಷಿ ಸಂಬಂಧಿತ ಮಾಂತ್ರಿಕ ಆರಾಧನಾ ವಿಧಿಗಳನ್ನು ಬೆಳೆಸಿದರು. ಇಂಥ ಆರಾಧನೆಗಾಗಿ ಮಾತೆ, ಹೆಣ್ಣು-ಭೂಮಿಗಳ ಸಾಂಕೇತಿಕ ಶಕ್ತಿಯ ರೂಪದಲ್ಲಿ ಹೆಣ್ಣಿನ ಆಕಾಶದ ಮೂರ್ತಿಗಳನ್ನು ಬಳಸುತ್ತಿದ್ದರು. ಪ್ರಾಚೀನ ನಾಗರೀಕತೆಗಳ ಪುರಾತತ್ವ ಉತ್ಖನನಗಳಲ್ಲಿ ಜಗತ್ತಿನ ಅನೇಕ ಭಾಗಗಳಲ್ಲಿ ಇಂಥ ನಗ್ನ ಸ್ತ್ರೀ ಮೂರ್ತಿಗಳು ದೊರೆತಿವೆ. ಭಾರತದ ಹರಪ್ಪ-ಮೆಹೆಂಜೋದಾರೋಗಳಲ್ಲಿ ಇಂಥ ನಗ್ನ ಸ್ತ್ರೀ ಮೂರ್ತಿಗಳು ದೊರೆತಿವೆ. ಅವುಗಳಲ್ಲಿ ಹೆಣ್ಣಿನ ಜೀವದಾಯಕ, ಜೀವ ಪೋಷಕ ಶಕ್ತಿಯನ್ನು ಎತ್ತಿ ತೋರಿಸುವಂತೆ ದಪ್ಪ ಸ್ತನಗಳು, ದೊಡ್ಡ ನಿತಂಬಗಳು, ದಪ್ಪ ತೊಡೆಗಳು, ಉಬ್ಬಿದ ಹೊಟ್ಟೆಗಳೇ ಢಾಳಾಗಿ ರೂಪಗೊಂಡಿವೆ. ಆಸ್ಟ್ರೀಯಾ ಮತ್ತು ಫ್ರಾನ್ಸ್ ಸಮೀಪ ದೊರೆತಿರುವ ಹೆಣ್ಣು ಮೂರ್ತಿಗಳು ಹೆಣ್ತನದ ಲೈಂಗಿಕ ಅಂಶವನ್ನು ಪ್ರಕಟಿಸುವಂತಿದ್ದು, ಅವು 'ವಿನಸ್'ಗಳೆಂದು ಪ್ರಸಿದ್ಧವಾಗಿವೆ. ಫಲವಂತಿಕೆಯ ಉಪಾಸನೆಗಾಗಿ ಬಳಸಲಾಗುತ್ತಿದ್ದ ಈ ಮೂರ್ತಿಗಳನ್ನು ನೆಲದಲ್ಲಿ ಹೂಳಲಾಗುತ್ತಿತ್ತು. ನೆಲದ ಬೆಳೆಸುವ ಶಕ್ತಿಗೆ ಹೆಚ್ಚಿನ ಸತ್ವ ಬರಲಿ ಎಂಬ ಉದ್ದೇಶ ಇದರ ಹಿಂದೆ ಇದ್ದಿರಬೇಕು (ಉದ್ಧೃತ: ಬಿ.ಎನ್. ಸುಮಿತ್ರಾಬಾಯಿ, ೨೦೦೦, ಪು.೪೯೩).

ಈ ಎಲ್ಲ ಸಂಗತಿಗಳು ಸ್ತ್ರೀ ಶಕ್ತಿಯ ಬಗೆಗೆ ಜನರಿಗೆ ಅಗಾಧ ನಂಬಿಕೆ ಇರುವುದನ್ನು ತಿಳಿಸುತ್ತದೆ. ಅಲ್ಲದೆ ಆ ಮೂಲಕ ಕೃಷಿ ಸಮೃದ್ಧಿ ಹೆಚ್ಚುತ್ತದೆ ಎಂದು ನಂಬಿದ್ದ ಅವರು ಹೆಣ್ಣನ್ನು ತಮ್ಮ ಆಚರಣೆಯ ಭಾಗವಾಗಿಸಿಕೊಂಡಿರುವುದು ತಿಳಿದು ಬರುತ್ತದೆ.

ಈಗಲೂ ಕೃಷಿಕರು ಸಾಮಾನ್ಯವಾಗಿ ಹೊಲದಲ್ಲಿ ಹೊಸ ಬೋರವೆಲ್ (ಕೊಳವೆಬಾವಿ) ಹಾಕಿಸಿದಾಗ ಮನೆಯ ಮಗಳನ್ನು ಕರೆಯಿಸಿ ಅವಳ ಕೈಯಿಂದಲೇ ಪೂಜೆ ಮಾಡಿಸಿ ಅವಳಿಗೆ ಅರಿಸಿನ-ಕುಂಕುಮ, ಸೀರೆ -ಕುಪ್ಪಸವನ್ನು ಕೊಡುತ್ತಾರೆ. ಕೆಲವು ಸಮುದಾಯಗಳಲ್ಲಿ ಬೆಳೆಯನ್ನು ಕೊಯ್ಲು ಮಾಡುವಾಗ ಮತ್ತು ಬಿತ್ತುವಾಗ ಮೈನೆರೆದ ಹೆಣ್ಣಿನಿಂದ ಪೂಜೆ ಮಾಡಿಸುತ್ತಾರೆ. ಜೊತೆಗೆ ನೇಮಕ್ಕೆ ಅವರ ಕೈಯಿಂದ ಸ್ವಲ್ಪ

ಬಿತ್ತಿಸುತ್ತಾರೆ. ಮತ್ತು ಕೊಯ್ಲು ಮಾಡುವಾಗ ಶಾಸ್ತ್ರಕ್ಕಾದರೂ ಸ್ವಲ್ಪ ಅವರ ಕೈಯಿಂದ ಬೆಳೆಯನ್ನು ಕೊಯ್ಯಿಸುತ್ತಾರೆ. ಮನೆಯ ಹೆಣ್ಣು ಮಕ್ಕಳು ಹೊಲದಲ್ಲಿ ನಡೆದಾಡಿದರೆ ಫಸಲು ಚೆನ್ನಾಗಿ ಬರುತ್ತದೆ ಎಂಬ ನಂಬಿಕೆ ಇದೆ. ಮುತ್ತೈದೆಯರು ಧಾನ್ಯದ ರಾಶಿಯನ್ನು ಪೂಜಿಸಿದರೆ ಅದರ ಹುಲ್ಸು (ಅದರ ಪ್ರಮಾಣ) ಹೆಚ್ಚಾಗುತ್ತದೆ ಎಂಬ ನಂಬಿಕೆಯೂ ಇದೆ. ಆ ಕಾರಣಕ್ಕಾಗಿಯೇ ಉತ್ತರ ಕರ್ನಾಟಕದ ಭಾಗದಲ್ಲಿ ಸುಗ್ಗಿಯ ಕಾಲದಲ್ಲಿ ರೈತರು ಆಚರಿಸುವ 'ಕಣಬ್ಬ'[೨] ಎಂಬ ಆಚರಣೆಯಲ್ಲಿ ಐದು ಜನ ಮುತ್ತೈದೆಯರಿಗೆ ಒಂದತ್ತಿಟ್ಟು ಅವರಿಗೆ ಉಡಿತುಂಬಿ ಅವರಿಂದ ರಾಶಿ ಪೂಜೆ ಮಾಡಿಸುವರು.

ಹೀಗೆ ಕೃಷಿ ಸಮುದಾಯದ ಆಚರಣೆಗಳಲ್ಲಿ ಹೆಣ್ಣಿಗೆ ಹೆಚ್ಚು ಪ್ರಾಮುಖ್ಯತೆ ನೀಡಿದಂತೆ ಕಂಡುಬರುತ್ತದೆ. ಆದರೂ ಬಹುಪಾಲು ಆಚರಣೆಯಲ್ಲಿ ಮುತ್ತೈದೆಯರಿಗೆ ಮಾತ್ರ ಪ್ರಾತಿನಿಧ್ಯವಿರುವುದು ಈ ಕೃಷಿ ಸಮುದಾಯದೊಳಗೆ ಇರುವ ಕೆಲವು ನಂಬಿಕೆಗಳಿಂದ ತಿಳಿದು ಬರುತ್ತದೆ. 'ಬಂಜೆ ನಡೆದ ಹೊಲ ಹೀನ ಗೊಡ್ಡಿ; ಗೊಡ್ಡಿ ಹೆಂಡತಿ ಹೀನ' ಎಂದು ನಂಬಿರುವ ಮನೋಭಾವದ ಹಿಂದೆ - ಬಂಜೆಯನ್ನು ಕನಿಷ್ಠವಾಗಿಯೂ ಮುತ್ತೈದೆಯನ್ನು ಶ್ರೇಷ್ಠವಾಗಿಯೂ ಭಾವಿಸಿರುವುದು ತಿಳಿದು ಬರುತ್ತದೆ. ಅಂದರೆ ಮುತ್ತೈದೆಯರು ಮಾತ್ರ ಸಾಮಾಜಿಕ ಗೌರವಕ್ಕೆ ಪಾತ್ರರಾಗಿದ್ದು ಮಕ್ಕಳಾಗದ ಹೆಣ್ಣು (ಬಂಜೆ) ಕೃಷಿಯ ಸಾಂಸ್ಕೃತಿಕ ವಲಯದಲ್ಲಿ ನಿಷೇಧಕ್ಕೊಳಪಟ್ಟಿರುವಳು.

ಅಲ್ಲದೆ ಹೊರಗಾದ ಹೆಣ್ಣಿನ ರಕ್ತ ಫಲಸಮೃದ್ಧಿಯ ಸಂಕೇತವೆಂದು ನಂಬಿರುವುದು ಒಂದೆಡೆ ಕಂಡುಬಂದರೆ, ಮತ್ತೊಂದೆಡೆ 'ಹೊರಗಡೆಯಾದ ಹೆಂಗಸರು ಹೂ ಬಳ್ಳಿಗಳನ್ನು ಫಲ ಬಿಡುವ ಮರ ಗಿಡಗಳನ್ನು ಮುಟ್ಟಬಾರದು' (ಸಂ.ಜಿ.ವಿ. ದಾಸೇಗೌಡ, ೧೯೭೩, ಪು.೪೧) ಎಂಬ ನಿಷೇಧಗಳಿರುವುದು ಕಂಡುಬರುತ್ತದೆ.

ಸಂಸ್ಕೃತಿಯೊಳಗಿನ ಈ ಬಗೆಯ ವೈರುಧ್ಯಗಳನ್ನು ನೋಡಿದಾಗ ಅಚ್ಚರಿ ಎನಿಸಿದರೂ ಈ ಬಗೆಯ ಸಂಗತಿಗಳು ಜನಪದ ಮತ್ತು ಶಿಷ್ಟ ಸಂಸ್ಕೃತಿಯ ನಡುವಿರುವ ಭಿನ್ನ ಮನೋಭಾವವನ್ನು ಪ್ರತಿನಿಧಿಸುತ್ತವೆ. ಇದನ್ನು ಜನಪದ ಸಂಸ್ಕೃತಿಗೆ ಆದ ಶಿಷ್ಟ ಸಂಸ್ಕೃತಿಯ ಪ್ರಭಾವವೆಂತಲೂ ಇಲ್ಲವೆ ಜನಪದ ಮತ್ತು ಶಿಷ್ಟ ಸಂಸ್ಕೃತಿಯ ನಡುವಿನ ಸಂಘರ್ಷ ಇದರಿಂದ ತಿಳಿದು ಬರುತ್ತದೆ.

### ೫.೨ ಕೃಷಿ ಆಚರಣೆಗಳ ಹಿಂದಿರುವ ಆದಿಮ ಪ್ರವೃತ್ತಿ

ಕೆಲವು ಕೃಷಿ ಆಚರಣೆಗಳನ್ನು ಗಮನಿಸಿದಾಗ ನಿಸರ್ಗದತ್ತವಾದ ಮನುಷ್ಯರ ಲೈಂಗಿಕ ಕ್ರಿಯೆಗೂ ಬೆಳೆಯ ಸಮೃದ್ಧಿಗೂ ಅಥವಾ ಬೆಳೆ ಬೆಳೆಯುವ ಕ್ರಮಕ್ಕೂ ಸಂಬಂಧವಿದೆ ಎಂದು ನಮ್ಮ ಪೂರ್ವಜರು ಭಾವಿಸಿದಂತೆ ಕಂಡುಬರುತ್ತದೆ. ಈ ಕಾರಣಕ್ಕಾಗಿಯೇ ಅನೇಕ ಬುಡಕಟ್ಟುಗಳಲ್ಲಿ ಉತ್ತಮ ಫಸಲು ಪಡೆಯುವುದಕ್ಕಾಗಿ ಗಂಡು-ಹೆಣ್ಣು ಸಂಭೋಗ ಕ್ರಿಯೆಯಲ್ಲಿ ತೊಡಗುವಂತಹ ವಿಧಿಯಾಚರಣೆಗಳಿರುವುದು ತಿಳಿದು ಬರುತ್ತದೆ.

ಕಚ್ಚೆಗೌಳಿಗರಲ್ಲಿ ಪ್ರಸ್ತದ ಮೊದಲು ಭೂಮಿಗೆ ಬರೆ ಎಳೆದು ಭತ್ತ/ರಾಗಿ ಬಿತ್ತುವ ಸಾಗುವಳಿ ಮಾಡುವ ಶಾಸ್ತ್ರವನ್ನು ಆಚರಿಸುವ ಪದ್ಧತಿ ಇದೆ (ಸಂ. ಅಂಬಳಿಕೆ ಹಿರಿಯಣ್ಣ, ೧೯೯೩, ಪು.೧೦೧). ಇದನ್ನು ನಾಗೋಲಿ ಶಾಸ್ತ್ರವೆಂದು ಕರೆಯುತ್ತಾರೆ. ಕಚ್ಚೆಗೌಳಿಗರು ಪ್ರಸ್ತದ ದಿನವೆ ಭತ್ತ/ರಾಗಿ ಬಿತ್ತುವ ಶಾಸ್ತ್ರ ಮಾಡುವುದರ ಹಿಂದೆ ಅವರು ಪ್ರಸ್ತಕ್ಕೂ ಭೂಮಿಯಲ್ಲಿನ ಬಿತ್ತಿ ಬೆಳೆಯುವ ಕ್ರಿಯೆಗೂ ಸಂಬಂಧವಿದೆ ಎಂದು ನಂಬಿರುವುದು ಸ್ಪಷ್ಟವಾಗುತ್ತಿದೆ.

ಅಂತೆಯೇ ನಮ್ಮಲ್ಲಿ ಈಗಲೂ ಹೆಚ್ಚು ಪ್ರಚಲಿತದಲ್ಲಿರುವ ಕಾಮನಹಬ್ಬ, ಜೋಕುಮಾರನ ಆಚರಣೆ, ಗ್ರಾಮದೇವಿಗೆ ಬಲಿಕೊಟ್ಟು ಆ ಬಲಿಯನ್ನು ಹುಲ್ಸು ಎಂದು ಬೆಳೆ ಬೆಳೆಯುವ ಹೊಲಗಳಿಗೆ ಎರಚುವ ಆಚರಣೆ, ಕುಂತಿ ಆಚರಣೆ ಈ ಎಲ್ಲ ಆಚರಣೆಗಳು ಕೂಡ ಮನುಷ್ಯ ಸಹಜ ಲೈಂಗಿಕ ಕ್ರಿಯೆಯ ಸಾಂಕೇತಿಕ ಸ್ವರೂಪದಲ್ಲಿ ನಡೆಯುವುದು ಆ ಆಚರಣೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ತಿಳಿದು ಬರುತ್ತದೆ.

ಹೋಳಿಹುಣ್ಣಿಮೆಯ ಸಂದರ್ಭದಲ್ಲಿ ಕಾಮನನ್ನು ಸುಟ್ಟ ದಿನ ಮಳೆ ಬರುತ್ತದೆಂಬ ನಂಬಿಕೆ ಜನರಲ್ಲಿದೆ. ಹಾಗೆ ಮಳೆ ಬಂದರೆ ಅದನ್ನು ಕಾಮನ ಕಣ್ಣೀರು ಎಂದು ಭಾವಿಸುವರು. ಕಾಮ ಸುಟ್ಟ ನಂತರ ಅವನ ರುಂಡ (ತಲೆಯ ಭಾಗ) ಯಾವ ದಿಕ್ಕಿಗೆ ಬಿಳುತ್ತದೆ ಆ ದಿಕ್ಕಿನ ಕಡೆಗೆ ಹೆಚ್ಚು ಮಳೆ ಬರುತ್ತದೆ ಎಂದು ನಂಬುತ್ತಾರೆ. ಅಲ್ಲದೆ ಕಾಮನನ್ನು ಸುಟ್ಟ ಬೂದಿಯನ್ನು ಹೊಲದಲ್ಲಿ ಹಾಕಿದರೆ ಬೆಳೆ ಸಮೃದ್ಧಿವಾಗಿ ಬೆಳೆಯುತ್ತದೆಂದು ಮತ್ತು ಬಿತ್ತುವ ಕಾಳಿನಲ್ಲಿ ಕಾಮನ ಬೂದಿಯನ್ನು ಬೆರಸಿದರೆ ಕಾಳು ಹುಸಿಯಾಗಲಾರದೆಂಬ ನಂಬಿಕೆ ಇದೆ. ಹಾಗೂ ಕಾಮನ ಬೂದಿಯನ್ನು ಬೆರೆಸಿ ಮನೆಯಲ್ಲಿ ಸಂಗ್ರಹಿಸಿಟ್ಟ ಕಾಳಿಗೆ ಹುಳು ಹತ್ತುವುದಿಲ್ಲವೆಂಬ ನಂಬಿಕೆ ಇದೆ.

ಜನಪದರು ಭೂಮಿಯನ್ನು ಹೆಣ್ಣು ಎಂದು ಭಾವಿಸಿರುವುದರಿಂದ ಇಲ್ಲಿ ಬೆಳೆ ಬೆಳೆಯುವ ಭೂಮಿಗೆ ಕಾಮನ ಬೂದಿ ಹಾಕುವ ಕ್ರಿಯೆ ಗಂಡು ಹೆಣ್ಣಿನ ಮಿಲನದ ಸಾಂಕೇತಿಕ ರೂಪವೇ ಆಗಿದೆ. ಹೊಲಕ್ಕೆ ಕಾಮನ ಬೂದಿ ಹಾಕಿದರೆ ಅಥವಾ ಬಿತ್ತುವ ಬೀಜಕ್ಕೆ ಕಾಮನ ಬೂದಿಯನ್ನು ಬೆರೆಸಿದರೆ ಬೀಜ ಹುಸಿಹೋಗದೆ ಬೆಳೆ ಸಮೃದ್ಧವಾಗಿ ಬರುತ್ತದೆ ಎನ್ನುವ ನಂಬಿಕೆಯ ಹಿಂದೆ ಸ್ತ್ರೀ-ಪುರುಷರ ಮಿಲನ ಕ್ರಿಯೆಗೂ ಭೂಮಿಯ ಬೆಳೆ ಬೆಳೆಯುವ ಕ್ರಿಯೆಗೂ ಸಂಬಂಧವಿದೆ ಎಂದು ತಿಳಿದಿರುವ ಮನೋಭಾವ ವ್ಯಕ್ತವಾಗುತ್ತದೆ.

ಕಾಮನಂತೆ ಜೋಕುಮಾರನು ಒಬ್ಬ ಸಮೃದ್ಧಿ ದೇವತೆಯಾಗಿದ್ದು ಮಳೆ ಬೆಳೆ ಕೊಡುವ ದೇವತೆ ಎಂದು ಈ ದೈವಗಳ ಆಚರಣೆಯನ್ನು ಮಾಡುವರು. ಗಂಗಮತದ ಅಥವಾ ಕಬ್ಬೇರ ಸಮುದಾಯದ ಹೆಂಗಸರು ಮಣ್ಣಿನಲ್ಲಿ ಮಾಡಿದ ಜೋಕುಮಾರನ ಮೂರುತಿಯನ್ನು ಬೇವಿನ ಸೊಪ್ಪು ತುಂಬಿದ ಬುಟ್ಟಿಯಲ್ಲಿಟ್ಟುಕೊಂಡು ಮನೆ ಮನೆಗೆ ಹಾಡು ಹೇಳಿಕೊಂಡು ತಿರುಗುವರು. ಹೀಗೆ ತಾವು ಭೇಟಿ ನೀಡಿದ

ಪ್ರತಿ ಮನೆಗೂ ಕುಂಬಳ ಎಲೆಯಲ್ಲಿ ಜೋಕುಮಾರನ ಅಂಬಲಿಯನ್ನು ಕೊಡುವರು. ಈ ಅಂಬಲಿಯನ್ನು ಹೊಲಗದ್ದೆಗಳಿಗೆ ಎರಚಿದರೆ ಹೊಲ ಹುಲುಸಾಗುತ್ತದೆ (ಅಂದರೆ ಸಮೃದ್ಧವಾಗುತ್ತದೆ)' ಎಂಬ ನಂಬಿಕೆ ಜನರಲ್ಲಿದೆ. ಇಲ್ಲಿ ಕೊಡಲ್ಪಡುವ ಅಂಬಲಿಯು ಜೋಕುಮಾರನ ವೀರ್ಯದ ಸಾಂಕೇತಿಕ ರೂಪವಾಗಿದ್ದು, ಭೂಮಿಯನ್ನು ಹೆಣ್ಣು ಎಂದು ಜನಪದರು ಭಾವಿಸಿದ್ದರಿಂದ ಭೂಮಿಯ ಮೇಲೆ ಜೋಕುಮಾರನ ವೀರ್ಯವೆಂದೇ ಭಾವಿಸಿದ್ದ ಆ ಅಂಬಲಿಯನ್ನು ಎರಚುವುದರಿಂದ ಭೂಮಿ ಗರ್ಭಧರಿಸಿ ಬೆಳೆಗಳ ಮೂಲಕ ಫಲ ನೀಡುತ್ತಾಳೆಂಬ ಆಶಯ ಈ ಆಚರಣೆಯ ಹಿಂದಿರುವುದು.

ಎಸ್.ಎಸ್. ಹಿರೇಮಠ (೧೯೯೨) ಅವರು ಕಾಮ ಮತ್ತು ಜೋಕುಮಾರ ದೈವಗಳನ್ನು ಕುರಿತು ಹೇಳುವಾಗ 'ಮಾತೃ ಅಧಿಕಾರವಿದ್ದ ಆದಿಮ ಕೃಷಿ ಸಮಾಜದಲ್ಲಿ ಗೌರಿ, ಎಲ್ಲಮ್ಮ ಮುಂತಾದ ಹೆಣ್ಣು ದೇವರುಗಳು ಪ್ರಾಬಲ್ಯವಿದ್ದುದರಿಂದ ಗಂಡು ದೇವರುಗಳು ತಮ್ಮ ಶಕ್ತಿಯನ್ನು ದಯಪಾಲಿಸಿ ಸಾಯಬೇಕಾಯಿತು' (ಪು-೧೪೧) ಎಂದು ಹೇಳಿದ ಅವರ ಧ್ವನಿಯಲ್ಲಿ ಕಾಮ ಮತ್ತು ಜೋಕುಮಾರರು ಕೂಡ ಅದೇ ರೀತಿಯ ಹಿನ್ನೆಲೆಯಲ್ಲಿ ಬಲಿಯಾದ ದೇವತೆಗಳೆಂದು ಹೇಳಿದಂತಿದೆ.

ಅದೇ ಆಚರಣೆಯ ವಿಧಿಕ್ರಿಯೆಗಳಿಗೆ ಸಂಬಂಧಿಸಿದಂತೆ ರಂಗಾರೆಡ್ಡಿ ಕೋಡಿರಾಂಪುರ ಅವರು ಹೇಳುವಂತೆ 'ಮಾತೃಪ್ರಧಾನ ಸಮಾಜ ವ್ಯವಸ್ಥೆಯಿದ್ದ ಕಾಲದಲ್ಲಿ ಮತ್ತು ಕೃಷಿಯ ಬೆಳವಣಿಗೆಯಲ್ಲಿ ಪ್ರಧಾನ ಪಾತ್ರ ವಹಿಸಿದ್ದ ಮಹಿಳೆಯರು ಭೂಮಿಯ ಬೆಳವಣಿಗೆಯಲ್ಲಿ ಪ್ರಧಾನ ಪಾತ್ರ ವಹಿಸಿದ್ದ ಮಹಿಳೆಯರು ಭೂಮಿ ಫಲವತ್ತಾಗಿರಲು ಬೆಳೆ ಸಮೃದ್ಧವಾಗಿರಲು ಪುರುಷ ಶಕ್ತಿಯ ಬಲಿಯನ್ನು ನೀಡಿರುವರು. ಇದರ ಕುರುಹಾಗಿ ಈ ಕಾಮ ಮತ್ತು ಜೋಕುಮಾರರ ಆರಾಧನೆಗಳು ಉಳಿದುಕೊಂಡು ಬಂದಿವೆ ಎಂದು ತರ್ಕಿಸಬಹುದು (೨೦೦೦, ಪು-೧೧೪) ಎಂದು ಊಹೆಯನ್ನು ವ್ಯಕ್ತಪಡಿಸಿದ್ದಾರೆ.

ಅದೇ ರೀತಿ ಊರಿನ ಗ್ರಾಮದೇವತೆಗೆ ಜಾತ್ರೆಯ ಸಂದರ್ಭದಲ್ಲಿ ಕೊಡುವ ಬಲಿಯನ್ನು ಊರಿನ ರೈತರು ತಮ್ಮ ಹೊಲಗಳಿಗೆ ಹುಲ್ಸು ಎಂದು ಚರಗ ಚೆಲ್ಲುವರು. ಇದರಿಂದ ಭೂಮಿಯ ಸಮೃದ್ಧಿ ಹೆಚ್ಚಾಗಿ ಬೆಳೆ ಚೆನ್ನಾಗಿ ಬರುತ್ತದೆ ಎಂಬುದು ಜನರ ನಂಬಿಕೆ. ಗ್ರಾಮದೇವತೆಗೆ ಕೊಡುವ ಬಲಿಯ ಪ್ರಾಣಿ ಗಂಡಾಗಿರುವುದರಿಂದ ಬಲಿ ರೂಪದಲ್ಲಿ ಪುರುಷ ಶಕ್ತಿಯನ್ನು ಭೂಮಿ ತಾಯಿಗೆ ಎರಚುವ ವಿಧಾನ ಸ್ತ್ರೀ ಮತ್ತು ಪುರುಷ ಶಕ್ತಿಯನ್ನು ಒಂದಾಗಿಸುವ ಪರಿಕಲ್ಪನೆಯನ್ನು ಸಾಂಕೇತಿಸುತ್ತದೆ.

ಕಾರ್ತಿಕ ಮಾಸದ ಬೆಳದಿಂಗಳ ರಾತ್ರಿಯಲ್ಲಿ ಆಚರಿಸಲ್ಪಡುವ ಪ್ರಾದೇಶಿಕ ಭಿನ್ನತೆಯನ್ನು ಹೊಂದಿದ ಕುಂತಿ ಆಚರಣೆ ಒಂದು ಫಲವಂತಿಕೆಯ ಆಚರಣೆಯಾಗಿದೆ. ಕುಂತಿಯನ್ನು ಪೂಜಿಸಿ ಕೊನೆಯ ದಿನ ವಿಸರ್ಜನೆ ಮಾಡುವಾಗ ಹುಡುಗರಿಗೆ ಪಾಂಡು ಕುಂತಿಯ ವೇಷ ಹಾಕಿ ಮೆರವಣಿಗೆ ಮಾಡಿ ರಾಗಿಯ ಹೊಲಕ್ಕೆ ಬಂದು ಒಸಗೆ ಮಾಡುವರು (ಸಂಗ್ರಹ : ಡಿ.ಲಿಂಗಯ್ಯ, ಕೊಂತಿಪೂಜೆ).

ಈ ಆಚರಣೆಯನ್ನು ಕುರಿತಂತೆ ಎಸ್.ಎಸ್. ಹಿರೇಮಠ (೧೯೯೨) ಅವರು 'ಉತ್ತಮ ಫಸಲಿಗಾಗಿ ಹೊಲಗದ್ದೆಗಳಲ್ಲಿ ಗಂಡು ಹೆಣ್ಣು ಸಂಭೋಗ ಕ್ರಿಯೆಯಲ್ಲಿ ತೊಡಗುವ ವಿಧಿಯಾಚರಣೆಯ ಸಾಂಕೇತಿಕ ರೂಪವೇ ಪಾಂಡು ಕುಂತಿಯರ ಒಸಗೆಯಾಗಿದೆ ಎಂದು ಊಹಿಸಿದರೆ ತಪ್ಪಾಗಲಾರದು' (ಪು-೧೮) ಎಂದು ಅಭಿಪ್ರಾಯ ಪಡುತ್ತಾರೆ.

ಈ ರೀತಿಯ ಆಚರಣೆಗಳನ್ನು ನೋಡಿದಾಗ ಒಂದು ಕಾಲದಲ್ಲಿ ಅತ್ಯಂತ ಪ್ರಬಲವಾಗಿದ್ದ ಶಾಕ್ತ, ತಾಂತ್ರಿಕ ಪಂಥದ ತತ್ವಗಳು ಜನರ ಜೀವನದ ಭಾಗವಾಗಿ ಮತ್ತು ಸಂಸ್ಕೃತಿಯ ಅಂಗವಾಗಿ ಹಾಸುಹೊಕ್ಕಾಗಿದ್ದವು ಎಂಬುದು ತಿಳಿದು ಬರುತ್ತದೆ. ಆದರೆ ಅನೈತಿಕವಾಗಿ, ಸ್ವೇಚ್ಛಾಚಾರಕ್ಕಾಗಿ ಜನ ಈ ಆಚರಣೆಗಳನ್ನು ಅನುಸರಿಸುತ್ತಿರಲಿಲ್ಲ ಅದು ಒಂದು ಪದ್ಧತಿಯಾಗಿ ಅವರ ಬದುಕಿನಲ್ಲಿ ಬೆಳೆದುಕೊಂಡು ಬಂದ ಸಾಂಸ್ಕೃತಿಕ ಮೌಲ್ಯವಾಗಿತ್ತು. ಮೈಥುನ ಮತ್ತು ಆದರಿಂದುಂಟಾಗುವ ಪ್ರಜೋತ್ಪತ್ತಿಗೂ ಹಾಗೂ ಕೃಷಿಯಲ್ಲಿನ ಬೀಜೋತ್ಪತ್ತಿ ಅಥವಾ ಸಸ್ಯಗಳ ಬೆಳವಣಿಗೆಗೂ ಸಾಮ್ಯತೆ ಇದೆ ಎಂದುಕೊಂಡಿದ್ದರಿಂದ ಮನುಷ್ಯರ ಲೈಂಗಿಕತೆ ಪರೋಕ್ಷವಾಗಿ ಸಸ್ಯಗಳ ಬೆಳವಣಿಗೆಗೆ ಉತ್ತೇಜಿಸುತ್ತದೆ ಎಂಬ ಕಲ್ಪನೆ ಜನರಲ್ಲಿದ್ದರಿಂದ ಈ ರೀತಿಯ ಕೆಲವು ಆಚರಣೆಗಳು ಬೆಳೆದು ಬಂದಿರುವುದಾಗಿ ಊಹಿಸಬಹುದು. ಈ ರೀತಿಯ ವಿಚಾರವನ್ನು ಸೈದ್ಧಾಂತಿಕವಾಗಿ ದೇವಿಪ್ರಸಾದ ಚಟ್ಟೋಪಾಧ್ಯಾಯ, ಗೌರೀಶ ಕಾಯ್ಕಿಣಿ, ಎಸ್.ಎಸ್.ಹಿರೇಮಠ ಮುಂತಾದ ವಿದ್ವಾಂಸರು ಈಗಾಗಲೇ ವ್ಯಕ್ತಪಡಿಸಿರುವುದನ್ನು ನಾವು ಗಮನಿಸಬಹುದು.

**೫.೩ ಕೃಷಿಯ ಸಾಂಸ್ಕೃತಿಕ ಸ್ಥಿತ್ಯಂತರಗಳು**

ಇಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ಸಂಗತಿ ಎಂದರೆ ಮಳೆ ತರುವ ದೇವತೆಗಳೆಂದು ಆರಾಧಿಸುವ ಮತ್ತು ಪೂಜಿಸುವ ಜೋಕುಮಾರ ಪುತ್ರ ಕಾಮನ ಆಚರಣೆಗಳಿಂದ ಕೃಷಿಕರು ಕೇವಲ ಸ್ತ್ರೀ ದೈವಗಳನ್ನಲ್ಲದೆ ಪುರುಷ ದೈವಗಳನ್ನು ಆರಾಧಿಸುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

ಅಲ್ಲದೆ ಚಾರಿತ್ರಿಕ ಬೆಳವಣಿಗೆಯಲ್ಲಿ ಜಾತಿ ಸಮಾಜ ರಚನೆಯಾದ ಬಳಿಕ ವೈದೀಕರಣ ಪ್ರಕ್ರಿಯೆಗೆ ಒಳಗಾಗಿದ್ದರಿಂದ ಕೃಷಿ ಸಂಸ್ಕೃತಿಯಲ್ಲಿ ಅನೇಕ ರೀತಿಯ ಬದಲಾವಣೆಗಳಾದವು. ಹಾಗಾದ ಬದಲಾವಣೆಗೆ ಅವರು ಪೂಜಿಸಿಕೊಂಡು ಆರಾಧಿಸಿಕೊಂಡು ಬಂದ ದೈವಗಳಲ್ಲಾದ ಬದಲಾವಣೆ ಮತ್ತು ಬೆಳವಣಿಗೆಯನ್ನೆ ಒಂದು ಸ್ಪಷ್ಟ ನಿದರ್ಶನವಾಗಿ ಕೊಡಬಹುದು. ಆರಂಭಿಕ ಕೃಷಿ ಹಂತದಲ್ಲಿ ಪ್ರಕೃತಿಯನ್ನು ಹೆಣ್ಣು ರೂಪದಲ್ಲಿ ಆರಾಧಿಸುತ್ತಿದ್ದ ಮತ್ತು ಹೆಣ್ಣನ್ನು ದೈವವಾಗಿಸಿಕೊಂಡಿದ್ದ ಮನುಜರು ಕ್ರಮೇಣ ವಿವಿಧ ನಮೂನೆಯ ದೈವಗಳನ್ನು ಸೃಷ್ಟಿಸಿಕೊಂಡು ಅವುಗಳನ್ನು ಆರಾಧಿಸತೊಡಗಿದರು. ಆ ಕಾರಣಕ್ಕಾಗಿಯೇ ನಮ್ಮಲ್ಲಿ ಪ್ರಾದೇಶಿಕವಾಗಿ ಮಳೆ, ಬೆಳೆಗೆ ಸಂಬಂಧಿಸಿದಂತೆ ಬೇರೆ ಬೇರೆ ದೈವಗಳ ಬಗೆಗೆ ನಂಬಿಕೆ ಹೊಂದಿದ್ದು ಅವುಗಳಿಗೆ ಸಂಬಂಧಿಸಿದಂತೆ ಅನೇಕ ಆಚರಣೆಗಳನ್ನು ರೂಢಿಸಿಕೊಂಡಿರುವುದು ಕಂಡುಬರುತ್ತದೆ.

ಹಾಗಾಗಿ ಕೃಷಿ ಸಂಸ್ಕೃತಿಯಲ್ಲಿ ಕೇವಲ ಸ್ತ್ರೀ-ದೈವಗಳಲ್ಲದೆ ಪುರುಷ ದೈವಗಳು ಕಾಣಿಸಿಕೊಳ್ಳುತ್ತವೆ. ಮತ್ತವುಗಳಿಗೆ ಸಂಬಂಧಿಸಿದಂತೆ ಆಚರಣೆಗಳಿರುವುದು ಕಂಡು ಬರುತ್ತವೆ. ಹಾವೇರಿ ಜಿಲ್ಲೆಯ ಪಕ್ಕದಲ್ಲಿರುವ ಮೈಲಾರ ಎಂಬ ಒಂದು ಗ್ರಾಮದಲ್ಲಿ 'ಮಳೆ ಮಲ್ಲಪ್ಪನ ಗುಡಿ' ಎಂಬ ಒಂದು ಸಣ್ಣ ದೇಗುಲವೇ ಇರುವುದು ಕಂಡು ಬರುತ್ತದೆ. ಕೃಷಿಕರು ಸ್ತ್ರೀ ದೈವಗಳನ್ನಷ್ಟೇ ಅಲ್ಲದೆ ಪುರುಷ ದೈವಗಳನ್ನು ಆರಾಧಿಸುತ್ತಿದ್ದರು ಎಂಬುದಕ್ಕೆ ಈ ರೀತಿಯ ಅನೇಕ ನಿದರ್ಶನಗಳು ನಮ್ಮ ನಡುವೆ ಇರುವುದು ಕಂಡು ಬರುತ್ತದೆ. ಅದೇ ಮೈಲಾರ ಗ್ರಾಮದ ಇನ್ನೊಂದು ದೈವ 'ಮೈಲಾರ ಲಿಂಗಪ್ಪ' ಅಥವಾ 'ಮೈಲಾರ ಲಿಂಗೇಶ್ವರ' ಇಂದು ರಾಜ್ಯದಾದ್ಯಂತ ಪ್ರಸಿದ್ಧಿಯನ್ನು ಪಡೆದು ಸಾವಿರಾರು ರೈತಾಪಿಗಳು ಈ ದೈವವನ್ನು ಮನೆ ದೇವರನ್ನಾಗಿಸಿಕೊಂಡು ಪೂಜಿಸುತ್ತಿರುವುದು ಕಂಡು ಬರುತ್ತದೆ. ಪ್ರತಿವರ್ಷ ಈ ದೇವರ ಜಾತ್ರೆಯಲ್ಲಿ ಆಗುವ ಕಾರ್ಣೀಕದ ಬಗೆಗೆ ರೈತಾಪಿಗಳಿಗೆ ಅತಿಯಾದ ನಂಬಿಕೆ ಇದೆ. ಹಾಗಾಗಿ ಅಲ್ಲಿ ನಡೆದ ಕಾರ್ಣೀಕದ ಮೇಲೆಯೇ ತಮ್ಮ ಆ ವರುಷದ ಕೃಷಿ ಭವಿಷ್ಯವನ್ನು ಅವರು ನಿರ್ಧರಿಸುವರು.

ಇದಲ್ಲದೆ ಪ್ರತಿ ಊರಿನಲ್ಲಿ ಮಳೆ, ಬೆಳೆ ಸರಿಯಾಗಿ ಬರದಿದ್ದರೆ ಊರಿನಲ್ಲಿರುವ ಸ್ತ್ರೀ ದೈವಗಳಿಗೆ ಉಡಿ ತುಂಬಿದರೆ ಪುರುಷ ದೈವಗಳಾದ ಈರಣ್ಣ, ಬಸವಣ್ಣ, ಹನುಮಪ್ಪ, ಮೈಲಾರ ಲಿಂಗಪ್ಪ, ರೇಣುಕಾಚಾರ್ಯ ಇನ್ನೂ ಮುಂತಾದ ದೈವಗಳಿಗೆ ಹಣ್ಣು ಕಾಯಿ ಮಾಡಿಸುವರು. ಅಲ್ಲದೆ ಕೆಲವೊಮ್ಮೆ ರುದ್ರಾಭಿಷೇಕ, ಎಲಿಪೂಜೆ, ಕುಂಕುಮ ಪೂಜೆಯನ್ನು ಮಾಡಿಸುವರು.

ಹೀಗೆ ಕೃಷಿಯ ಆರಂಭಿಕ ಹಂತದಲ್ಲಿ ಸ್ತ್ರೀ ಶಕ್ತಿಯಲ್ಲಿಯೇ ಅಗಾಧ ನಂಬಿಕೆ ಇಟ್ಟು ಸ್ತ್ರೀ ದೈವಗಳನ್ನು ಆರಾಧಿಸುತ್ತಿದ್ದವರು ಕ್ರಮೇಣ ಪುರುಷ ದೈವಗಳನ್ನು ಆರಾಧಿಸುವುದನ್ನು ರೂಢಿಸಿಕೊಂಡು ಬಂದಿರುವರು. ದೈವದ ಬಗೆಗಿರುವ ಕೃಷಿಕರ ಮನೋಭೂಮಿಕೆಯಲ್ಲಾದ ಬದಲಾವಣೆಯನ್ನು ಆ ಸಂಸ್ಕೃತಿಯ ವಿಕಾಸ ಕ್ರಮವೆಂದೂ ಅಥವಾ ಸಂಸ್ಕೃತಿಯಲ್ಲಾದ ಬದಲಾವಣೆಯೆಂದು ಹೇಳಬಹುದು.

ಅಂತೆಯೇ ಕೃಷಿ ವಲಯದಲ್ಲಿ ಪ್ರಚಲಿತದಲ್ಲಿರುವ ಕೆಲವು ನಂಬಿಕೆಗಳನ್ನು ನೋಡಿದಾಗ ಮಹಿಳೆಗೆ ಕೆಲವು ನಿಷೇಧಗಳನ್ನು ವಿಧಿಸಿರುವುದು ಅಚ್ಚರಿಯೆನಿಸಿದರು ಅದು ವಾಸ್ತವವಾಗಿದೆ. ಇದು ಪುರುಷ ಪ್ರಧಾನ ವ್ಯವಸ್ಥೆ ಮಹಿಳೆಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಲು ಮಾಡಿದ ಸಂಚಿನಂತೆ ಕಾಣುವುದನ್ನು ಈ ಕೆಳಗೆ ಪ್ರಸ್ತಾಪಿಸಿದ ಕೆಲವು ನಂಬಿಕೆಗಳಿಂದ ತಿಳಿದು ಬರುತ್ತದೆ.

'ಆಣೆಕಲ್ಲಾಡಿದರೆ ಮಳೆ ಬರೋಲ್ಲ' ಎನ್ನುವ ಸಾಮಾನ್ಯ ತಿಳುವಳಿಕೆ ಅಥವಾ ನಂಬಿಕೆಯೊಂದು ಜನರಲ್ಲಿದೆ. ಅಂದರೆ ಆಣೆಕಲ್ಲಾಡಬಾರದು ಎನ್ನುವುದನ್ನು ಈ ನಂಬಿಕೆ ಪರೋಕ್ಷವಾಗಿ ಹೇಳುತ್ತದೆ. ಯಾರು ಆಡಬಾರದು ಎಂಬುದನ್ನು ಇಲ್ಲಿ ಹೇಳಿರುವ ಮಾತಾಗಿದೆ. ಎಲ್ಲಿ ಹೆಣ್ಣು ಮಕ್ಕಳು ಕೆಲಸ ಕಾರ್ಯಗಳನ್ನೆಲ್ಲ ಬಿಟ್ಟು ಆಣೆಕಲ್ಲು ಆಡುತ್ತ ಸಮಯ ಕಳೆದುಬಿಡುವರೊ ಎಂಬ ಆತಂಕದಿಂದ ಪುರುಷ ಮನಸ್ಸು ಈ ರೀತಿಯ ನಂಬಿಕೆಯನ್ನು ಹುಟ್ಟು ಹಾಕಿರಬೇಕು.

ಅಂತೆಯೇ 'ಟೋಪಿ ಧರಿಸಿದರೆ ದವಸಧಾನ್ಯಗಳು ತುಟ್ಟಿ (ದುಬಾರಿ)ಯಾಗುತ್ತವೆ' ಎಂಬ ನಂಬಿಕೆಯೊಂದಿದೆ. ಟೋಪಿ ಧರಿಸುವುದು ಅಥವಾ ತಲೆಗೆ ರುಮಾಲು ಸುತ್ತುವುದು ಇಲ್ಲವೆ ತಲೆಗೆ ವಸ್ತ್ರವನ್ನು ಕಟ್ಟುವುದು ಒಂದು ಬಗೆಯ ಶ್ರೇಷ್ಠತೆಯ ಸಂಕೇತವೇ ಆಗಿದೆ. ಮತ್ತು ತಲೆಗೆ ಟೋಪಿ ಹಾಕಿಕೊಳ್ಳುವುದು ಬಹು ಹಿಂದಿನಿಂದಲೂ ರೂಢಿಸಿಕೊಂಡು ಬಂದವರು ಪುರುಷರೇ ಆಗಿದ್ದಾರೆ. ಹಾಗಾಗಿ ಈ ತಲೆಗೆ ಟೋಪಿ (ರುಮಾಲು ವಸ್ತ್ರ) ಧರಿಸುವುದು ಪುರುಷರಿಗಷ್ಟೆ ಸೀಮಿತವಾಗಿರಬೇಕೆಂಬ ಆಶಯದ ಹಿನ್ನೆಲೆಯಲ್ಲಿ ಹೆಣ್ಣು ಮಕ್ಕಳು ಟೋಪಿ ಧರಿಸಿದರೆ ದವಸಧಾನ್ಯಗಳ ಬೆಲೆ ಏರುತ್ತದೆಂಬ ನಂಬಿಕೆ ಹುಟ್ಟು ಹಾಕಿರಬೇಕು. ಹಾಗಾಗಿ ಈ ನಂಬಿಕೆ ಕೂಡಾ ಪುರುಷ ಒಪ್ಪಿತ ಮೌಲ್ಯವೇ ಆಗಿದ್ದು, ಸ್ತ್ರೀಯರ ನಡವಳಿಕೆಯ ಮೇಲೆ ನಿಯಂತ್ರಣವನ್ನು ಹೇರಿರುವಂತೆ ಕಂಡುಬರುತ್ತದೆ.

ಮಳೆಗಳು ಏಕೆ ಹೋಗುತ್ತವೆ ಎಂಬುದಕ್ಕೆ ಜನಪದರಲ್ಲಿರುವ ಒಂದು ನಂಬಿಕೆ ಈ ರೀತಿ ಇದೆ.

'ಯಾಕೆ ಹೋದವು ಮಳೆಗಳು
ಲೋಕ ಸಾಕಲಾರದಕೆ ಹೋದವು
ಪುಣ್ಯವಿಲ್ಲದ ನಾರಿ ಪುರುಷನ ಬೈದರೆ
ಅನ್ಯಾಯಕೆ ಮಳೆ ಹೋದವು'

ಮಳೆ ಏಕೆ ಹೋಗುತ್ತವೆ ಎನ್ನುವುದಕ್ಕೆ ಜನ ನಂಬಿರುವ ಕಾರಣಗಳಲ್ಲಿ ಇದು ಒಂದು. ಲೋಕವನ್ನು ಸಾಕಲಾರದೆ ಮಳೆ ಹೋಗುತ್ತವೆ. ಪುಣ್ಯವಿಲ್ಲದ ನಾರಿ ಪುರುಷನ ಬೈದರೆ ಆ ಅನ್ಯಾಯಕ್ಕೆ ಮಳೆ ಹೋದವು ಎಂಬ ನಂಬಿಕೆ. ಅಂದರೆ ಇದು ತಿಳಿಸುವ ಒಳಾರ್ಥವೇನೆಂದರೆ ಪುರುಷ ನಾರಿಯನ್ನು ಬೈಯುವುದು ಸಹಜವೆನಿಸುತ್ತದೆ ಎಂದು ಭಾವಿಸಿದಂತಿದೆ. ಏಕೆಂದರೆ ಆ ಬಗೆಗೆ ಇಲ್ಲಿ ಪ್ರಸ್ತಾಪವಿಲ್ಲ. ಆದರೆ ನಾರಿ ಪುರುಷನನ್ನು ಬೈಯುವುದು ಜನರಿಗೆ ಅಸಹಜವಾಗಿ ಕಂಡು ಬರುತ್ತವೆ ಮತ್ತು ಅದು ಜನರಿಗೆ ಅಸಹಜವಾಗಿ ಕಂಡು ಬರುತ್ತದೆ. ಅಲ್ಲದೆ ಅದು ಅನ್ಯಾಯವಾಗಿ ಕೂಡ ಕಾಣುತ್ತದೆ. ಪರೋಕ್ಷವಾಗಿ ಇದು ನಾರಿ ಪುರುಷನನ್ನು ಬೈಯಬಾರದು ಎಂಬ ಮೌಲ್ಯವನ್ನು ಪ್ರತಿಪಾದಿಸುತ್ತದೆ.

ಅದೇ ರೀತಿಯಾಗಿ 'ಉಡದಾರ ಇಲ್ಲದವರು ರಾಶಿ ಕಟ್ಟಬಾರದು' ಎಂಬ ನಂಬಿಕೆ ಇದೆ. ಇದು ಕೂಡ ಕೃಷಿ ಸಮುದಾಯ ಮಹಿಳೆಯನ್ನು ನಿರ್ಲಕ್ಷಿಸಿದಂತೆ ಕಂಡುಬರುತ್ತದೆ. ಉಡದಾರ ಕಟ್ಟಿಕೊಳ್ಳುವರು ಅಂದರೆ ಗಂಡು ಮಕ್ಕಳು. ಉಡದಾರ ಹಾಕದೆ ಇರೋರೆಂದರೆ ಹೆಣ್ಣು ಮಕ್ಕಳು. ಇಲ್ಲಿ 'ಉಡದಾರ ಇಲ್ಲದವರು ರಾಶಿ ಕಟ್ಟಬಾರದು' ಎಂದರೆ ಹೆಣ್ಣು ಮಕ್ಕಳನ್ನು ರಾಶಿ ಕಟ್ಟುವ ಕ್ರಿಯೆಯಿಂದ ದೂರವಿರಿಸಿದುದು ಕಂಡುಬರುತ್ತದೆ.

ಹೀಗೆ ಒಂದೆಡೆ ಅದ್ಭುತ ಶಕ್ತಿಯಂತೆ, ದೈವದಂತೆ ಕಂಡ ಹೆಣ್ಣು ಮತ್ತೊಂದೆಡೆ ನಿಯಂತ್ರಣಕ್ಕೊಳಪಟ್ಟಂತೆ ಕಾಣುವ ಈ ವೈರುಧ್ಯಗಳನ್ನು ಕೃಷಿ ಸಂಸ್ಕೃತಿಯಲ್ಲಿ ಕಾಣುತ್ತೇವೆ. ಬಹುಶಃ

## ಅಧ್ಯಾಯ ೭

# ಕೃಷಿ, ಮಹಿಳೆ ಮತ್ತು ಸಮಕಾಲೀನತೆ

ಮನುಕುಲದ ಆರಂಭದಿಂದಲೂ ಸ್ತ್ರೀ-ಪುರುಷರಿಬ್ಬರೂ ಒಂದಿಲ್ಲೊಂದು ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡು ಬಂದಿರುವರು. ಆದರೆ "ನಮ್ಮ ಸಾಮಾಜಿಕ ಸಂರಚನೆಯ ಒಳಗಡೆ ಕೆಲಸದ ಪರಿಕಲ್ಪನೆ ಒಂದು ನಿರ್ದಿಷ್ಟ ಯೋಚನಾ ಕ್ರಮಕ್ಕೆ ಅನುಗುಣವಾಗಿದ್ದು ಹೆಣ್ಣು ಮಾಡುವ ಕೆಲಸಗಳು ಗಂಡು ಮಾಡುವ ಕೆಲಸಗಳು ಎಂದು ಒಡೆಯಲ್ಪಟ್ಟಿವೆ" (ಗಾಯತ್ರಿ ನಾವಡ, ೧೯೯೭, ಪು.೨೮). ಅಂತೆಯೇ ಪ್ರಾಚೀನ ಕಾಲದಿಂದಲೂ ರೂಢಿಸಿಕೊಂಡು ಬಂದ ಕೃಷಿಯಲ್ಲಿ ಸ್ತ್ರೀ-ಪುರುಷರಿಬ್ಬರೂ ಭಾಗಿಯಾಗಿದ್ದಾರೆ ಎಂಬುದನ್ನು ನಾವು ಈಗಾಗಲೇ ಈ ಹಿಂದಿನ ಅಧ್ಯಾಯಗಳಲ್ಲಿ ತಿಳಿದಿದ್ದೇವೆ. ಹೀಗೆ ಮಹಿಳೆಯರಿಂದಲೇ ಆರಂಭವಾಯಿತೆನ್ನಲಾದ ಕೃಷಿ ಇಂದು ತನ್ನ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆ ಹೊಂದಿದೆ. ಆರಂಭದಿಂದ ಇಂದಿನವರೆಗೆ ಕೃಷಿ ನಿರಂತರವಾಗಿ ಕಾಲದ ಜೊತೆ ಮುಖಾಮುಖಿಯಾಗುತ್ತಲೇ ತನ್ನ ಮೂಲ ಸ್ವರೂಪದಲ್ಲಿ ಆಯಾ ಕಾಲಕ್ಕೆ ಅಗತ್ಯವೆನಿಸಿದಂತೆ ಬದಲಾವಣೆಗಳನ್ನು ಅಳವಡಿಸಿಕೊಂಡು ಬದಲಾದ ಕಾಲದೊಂದಿಗೆ ಅನೇಕ ಸ್ಥಿತ್ಯಂತರಗಳಿಗೆ ಒಳಗಾಗಿದೆ. ಈ ರೀತಿಯ ಕಾಲದೊಂದಿಗಿನ ಅನುಸಂಧಾನ ಮತ್ತು ಮುಖಾಮುಖಿಯಿಂದ ಮೂಲ ವೃತ್ತಿ ಮತ್ತು ವೃತ್ತಿ ಪರಿಸರದಲ್ಲಿ ಸಾಕಷ್ಟು ಬದಲಾವಣೆಗಳಾಗುವ ಸಾಧ್ಯತೆ ಇದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಾಯದಲ್ಲಿ ಇವತ್ತಿನ ದಿನಗಳಲ್ಲಿ ಕೃಷಿ ವಲಯದಲ್ಲಿ ಮಹಿಳೆಯ ಪಾಲುದಾರಿಕೆಯ ಸ್ವರೂಪ ಯಾವ ರೀತಿಯಾಗಿದೆ? ಕೃಷಿಯ ಯಾವ ಕೆಲಸಗಳಲ್ಲಿ ಅವಳ ಪಾಲುದಾರಿಕೆ ಇದೆ? ಮತ್ತು ಎಲ್ಲಿ ಅವಳ ಪಾಲುದಾರಿಕೆ ಇಲ್ಲ? ಏಕೆ? ಅದರ ಹಿಂದಿರುವ ತಾತ್ವಿಕ ಹಿನ್ನೆಲೆ ಏನು ಎಂಬುದನ್ನು ಅರಿಯುವ ಮತ್ತು ಕೌಟುಂಬಿಕ ಹಾಗೂ ಸಾಮಾಜಿಕ ವಲಯದಲ್ಲಿ ಕೃಷಿ ಮಹಿಳೆಯ ಸ್ಥಾನಮಾನ ಯಾವ ರೀತಿಯದು ಎಂಬುದನ್ನು ತಿಳಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಜೊತೆಗೆ ಅಧ್ಯಾಯದ ಎರಡನೇ ಭಾಗದಲ್ಲಿ ಸಮಕಾಲಿನ ಸಂದರ್ಭದಲ್ಲಿ ಕೃಷಿಯಲ್ಲಿ ಆಧುನಿಕ ಯಂತ್ರೋಪಕರಣ, ತಂತ್ರಜ್ಞಾನಗಳ ಬಳಕೆಯಿಂದ ಯಾವ ರೀತಿಯ ಪರಿಣಾಮ ಬೀರಿದೆ ಎಂಬುದನ್ನು ಮೂರು ನೆಲೆಯಲ್ಲಿ ನೋಡಲಾಗಿದೆ. ಅಂದರೆ ಆಧುನಿಕತೆಯು ಒಟ್ಟು ಕೃಷಿಯ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ? ಮಹಿಳೆಯ ದುಡಿಮೆಯ ಮೇಲಾದ ಪರಿಣಾಮ ಯಾವ ಬಗೆಯದು? ಮತ್ತು ಆಧುನಿಕತೆಯಿಂದ ಪಾರಂಪರಿಕ ಕೃಷಿ ಜ್ಞಾನದ ಮೇಲಾದ ಪರಿಣಾಮವೇನು? ಮತ್ತು ಆಧುನಿಕತೆಯಿಂದ

ಕೃಷಿಯ ಸಾಂಸ್ಕೃತಿಕ ಪರಿಸರದಲ್ಲಾದ ಪಲ್ಲಟಗಳೇನು? ಎಂಬ ವಿಷಯದ ಹರಹುವನ್ನು ಈ ಅಧ್ಯಾಯವು ಒಳಗೊಂಡಿದೆ. ಅಲ್ಲದೆ ಕೃಷಿಯಲ್ಲಿ ಆಧುನಿಕ ತಂತ್ರಜ್ಞಾನದ ಬಳಕೆಯಿಂದ ಮಹಿಳೆ ಕೃಷಿ ವಲಯದಿಂದ ದೂರ ಸರಿಯುತ್ತಿದ್ದಾಳೆ ಎನ್ನುವ ಕೂಗು ಕೇಳಿಬರುತ್ತಿದೆ. ಇದು ನಿಜವೇ? ನಿಜವಾಗಿದ್ದರೆ ಹೇಗೆ ಕೃಷಿ ವಲಯದಿಂದ ಮಹಿಳೆಯನ್ನು ದೂರವಿರಿಸಲಾಗುತ್ತಿದೆ ಎನ್ನುವುದನ್ನು ಬಹುಮುಖ್ಯವಾಗಿ ಚರ್ಚಿಸಲಾಗುವುದು.

## ೭.೧ ವರ್ತಮಾನದ ಕೃಷಿಯಲ್ಲಿ ಮಹಿಳೆ

ಕೃಷಿಯಲ್ಲಿ ತೊಡಗಿಕೊಂಡ ಅಥವಾ ಕೃಷಿಯನ್ನು ಅವಲಂಬಿಸಿ ಜೀವನ ನಡೆಸುತ್ತಿದ್ದ ಮಹಿಳೆಗೆ ಕೃಷಿ ಮಹಿಳೆ ಎಂದು ಕರೆಯಲಾಗಿದೆ. ಹೀಗೆ ಕೃಷಿಯಲ್ಲಿ ತೊಡಗಿದ ಮಹಿಳೆಯರಲ್ಲಿ ಎರಡು ಬಗೆಯ ಮಹಿಳೆಯರಿರುವುದನ್ನು ಕಾಣುತ್ತೇವೆ.

i. ಕೃಷಿಯಲ್ಲಿ ಕೂಲಿಗಾಗಿ ದುಡಿಯುತ್ತಿರುವ ಮಹಿಳೆಯರು

ii. ಭೂ ಹಿಡುವಳಿ ಹೊಂದಿದ ಕೃಷಿ ಕುಟುಂಬದ ಮಹಿಳೆಯರು




ಕೃಷಿಯಲ್ಲಿ ಕೂಲಿಗಾಗಿ ದುಡಿಯುವ ಮಹಿಳೆಯರು ಬಹುತೇಕರು ಭೂ ರಹಿತ ಕೃಷಿ ಕಾರ್ಮಿಕರಾಗಿರುತ್ತಾರೆ. ಇವರು ಬಡಕುಟುಂಬದವರಾಗಿದ್ದು ಆರ್ಥಿಕವಾಗಿ ತುಂಬಾ ಕಷ್ಟದ ಪರಿಸ್ಥಿತಿಯಲ್ಲಿರುತ್ತಾರೆ. ತಮ್ಮ ಜೀವನ ನಿರ್ವಹಣೆಗಾಗಿ ಕೂಲಿನಾಲಿ ಮಾಡಿ ಜೀವನ ಸಾಗಿಸುತ್ತಿರುತ್ತಾರೆ. ಇವರಿಗೆ ಆರ್ಥಿಕವಾಗಿ ಯಾವ ಭದ್ರತೆಗಳಿರುವುದಿಲ್ಲ. ತಮ್ಮ ರಟ್ಟೆ(ಕೈ)ಯ ಬಲವನ್ನೇ ನಂಬಿ

ಬದುಕುತ್ತಿರುತ್ತಾರೆ. ಕೂಲಿಗಾಗಿ ಬೇರೆಯವರ ಹೊಲಗಳಲ್ಲಿ ದುಡಿದು ತಮ್ಮ ದುಡಿಮೆಯಿಂದ ಬಂದ ಕೂಲಿಯಿಂದಲೇ ಬದುಕು ಸಾಗಿಸುತ್ತಾರೆ. ಅಲ್ಲದೇ ಅತೀ ಚಿಕ್ಕ ಭೂಹಿಡುವಳಿ ಅಂದರೆ ಒಂದು ಅಥವಾ ಎರಡು ಎಕರೆಯಷ್ಟು ಭೂಮಿಯನ್ನು ಸಾಗುವಳಿ ಮಾಡಿಕೊಂಡಿದ್ದ ರೈತ ಕುಟುಂಬದ ಮಹಿಳೆಯರು ಕೂಡಾ ತಮ್ಮ ಬಿಡುವಿನ ವೇಳೆಯಲ್ಲಿ ಬೇರೆಯವರ ಹೊಲದಲ್ಲಿ ದುಡಿಯುವುದು ಕಂಡುಬರುತ್ತದೆ. ಆದರೂ ಭೂಹಿಡುವಳಿ ಹೊಂದಿದ್ದು ಕೂಲಿಗಾಗಿ ದುಡಿಯುವವರ ಪ್ರಮಾಣ ವಿರಳವೆಂದೇ ಹೇಳಬಹುದು.

ಭೂಮಿಯನ್ನು ಹೊಂದಿದ ರೈತ ಕುಟುಂಬಗಳ ಮಹಿಳೆಯರಲ್ಲಿ ಸಣ್ಣ, ಮಧ್ಯಮ ಮತ್ತು ದೊಡ್ಡ ಭೂಹಿಡುವಳಿ ಹೊಂದಿದ ಕೃಷಿ ಕುಟುಂಬದ ಮಹಿಳೆಯರೆಂದು ವರ್ಗೀಕರಿಸಬಹುದು. ಸಾಮಾನ್ಯವಾಗಿ ದೊಡ್ಡ ಭೂಹಿಡುವಳಿ ಹೊಂದಿದ ರೈತ ಕುಟುಂಬದ ಮಹಿಳೆಯರು ನೇರವಾಗಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವುದಿಲ್ಲ. ಅವರು ಹೊಲಗದ್ದೆಗಳಿಗೆ ಹೋಗಿ ಮಣ್ಣಲ್ಲಿ ದುಡಿಯುವುದಿಲ್ಲ. ಏಕೆಂದರೆ ದೊಡ್ಡ ಹಿಡುವಳಿದಾರರು ಆಳುಕಾಳುಗಳಿಂದಲೇ ಹೆಚ್ಚು ದುಡಿಸಿಕೊಳ್ಳುತ್ತಾರೆ. ಆದರೆ ಇವರು ಸಾಮಾನ್ಯವಾಗಿ ಆರ್ಥಿಕವಾಗಿ ಶ್ರೀಮಂತರಾಗಿದ್ದು ಅಧಿಕ ಭೂಹಿಡುವಳಿ ಇರುವ ಕಾರಣ ಕುಟುಂಬದಲ್ಲಿನ ಮಹಿಳೆಯ ಹೆಸರಿಗೂ ಭೂಮಿಯನ್ನು ಮಾಡಲಾಗಿರುತ್ತದೆ. ಆದರೆ ಭೂಮಿ ಅವರ ಹೆಸರಿನಲ್ಲಿದ್ದಾಗಲೂ ಅದರ ಮೇಲೆ ಸಂಪೂರ್ಣ ಒಡೆತನ ಅವಳಿಗಿರುವುದಿಲ್ಲ. ಇನ್ನು ನಿಜವಾಗಿ ಕೃಷಿಯಲ್ಲಿ ದುಡಿದು ಸಣ್ಣಾಗುವ ಮಹಿಳೆಯರೆಂದರೆ ಸಣ್ಣ ಮತ್ತು ಮಧ್ಯಮ ಭೂಹಿಡುವಳಿ ಹೊಂದಿದ ಕೃಷಿ ಕುಟುಂಬದ ಮಹಿಳೆಯರು. ಇವರು ಮನೆಯ ಒಳಗೆ ಮತ್ತು ಮನೆಯ ಹೊರಗೆ ಅಂದರೆ ಹೊಲಗದ್ದೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡಿರುತ್ತಾರೆ. ಆಳೊಟ್ಟಿಗೆ ತಾವು ಹೊಲಕ್ಕೆ ಹೋಗಿ ದುಡಿಯುತ್ತಾರೆ. ಈ ವರ್ಗದ ಮಹಿಳೆ ದುಡಿದು ತನ್ನ ಕುಟುಂಬವನ್ನು ಮುಂದೆ ತರಬೇಕು ಎಂಬ ಹೆಚ್ಚು ಹೆಚ್ಚು ಅಭಿಲಾಷೆಯನ್ನು ಇಟ್ಟುಕೊಂಡಿರುತ್ತಾಳೆ. ಇವಳು ದುಡಿದ ದುಡಿಮೆಯನ್ನು ಕುಟುಂಬಕ್ಕೆ ಆಕೆ ಸಲ್ಲಿಸುವ ಸೇವೆ ಅಥವಾ ಕರ್ತವ್ಯವಾಗಿ ಪರಿಗಣಿಸಲ್ಪಡುತ್ತದೆ. ಅಲ್ಲದೆ ಈ ವರ್ಗದ ಮಹಿಳೆಯರ ಹೆಸರಿಗೆ ಭೂಮಿ ಇರುವುದಿಲ್ಲ. ಹಾಗೊಂದು ವೇಳೆ ಈ ಮಹಿಳೆಯರ ಹೆಸರಿಗೆ ಭೂಮಿ ಇದ್ದರೆ ಅದು ಕೇವಲ ಅನಿವಾರ್ಯದ ಸಂದರ್ಭಗಳಲ್ಲಿ ಮಾತ್ರ. ಅಂದರೆ ಗಂಡನನ್ನು ಕಳೆದುಕೊಂಡ ವಿಧವೆಯರ ಹೆಸರಲ್ಲಿ ಭೂಮಿ ಇರುತ್ತದೆ. ಒಂದು ವೇಳೆ ಅವಳಿಗೆ ಚಿಕ್ಕ ಮಕ್ಕಳಿದ್ದರೆ ಅವರು ವಯಸ್ಸಿಗೆ ಬಂದ ನಂತರ ಅವರ ಹೆಸರಿಗೆ ಆ ಭೂಮಿ ವರ್ಗಾಯಿಸಲ್ಪಡುತ್ತದೆ. ಮತ್ತು ಕೆಲವೊಮ್ಮೆ ಗಂಡು ಮಕ್ಕಳೇ ಇಲ್ಲದ ತಂದೆ ತಾಯಿಗಳಿಗೆ ತಮ್ಮ ಹೆಣ್ಣು ಮಕ್ಕಳೇ ವಂಶೋದ್ಧಾರಕರು, ಉತ್ತರಾಧಿಕಾರಿಗಳೂ ಆಗಿದ್ದಂತಹ ಸಂದರ್ಭದಲ್ಲಿ ಅವರ ಮರಣದ ನಂತರದಲ್ಲಿ ಭೂಮಿ ಆ ಕುಟುಂಬದ ಹೆಣ್ಣು ಮಕ್ಕಳಿಗೆ ದೊರೆಯುತ್ತದೆ. (ಈ ಕುರಿತು ವಿವರವಾಗಿ ಇದೇ ಅಧ್ಯಾಯದಲ್ಲಿ ಮುಂದೆ ಚರ್ಚಿಸಲಾಗಿದೆ.)

ಈ ರೀತಿಯ ಕೌಟುಂಬಿಕ ಹಿನ್ನೆಲೆಯನ್ನು ಹೊಂದಿದ, ಕೃಷಿಯನ್ನು ಅವಲಂಬಿಸಿ ಬದುಕುತ್ತಿದ್ದ ಮಹಿಳೆಯರ ಕೃಷಿಯಲ್ಲಿನ ಪಾಲುದಾರಿಕೆಯನ್ನು ಮತ್ತವಳ ಸ್ಥಾನಮಾನವನ್ನು ಪ್ರಧಾನವಾಗಿ ಎರಡು ರೀತಿಯಲ್ಲಿ ವಿಭಾಗಿಸಿ ಅರ್ಥೈಸಿಕೊಳ್ಳಬಹುದು.

ಅ. ಮನೆಯ ಒಳಗೆ ಕೃಷಿ ಮಹಿಳೆಯ ಪಾಲುದಾರಿಕೆ ಮತ್ತು ಸ್ಥಾನಮಾನ

ಆ. ಮನೆಯ ಹೊರಗೆ ಕೃಷಿ ಮಹಿಳೆಯ ಪಾಲುದಾರಿಕೆ ಮತ್ತು ಸ್ಥಾನಮಾನ

**ಅ. ಮನೆಯ ಒಳಗೆ ಕೃಷಿ ಮಹಿಳೆಯ ಪಾಲುದಾರಿಕೆ ಮತ್ತು ಸ್ಥಾನಮಾನ**

ನಿತ್ಯ ಜೀವನವನ್ನು ನೋಡಿದರೆ ಮಹಿಳೆಯರು ಎಂದೂ ಮುಗಿಯದ ಮನೆಗೆಲಸದಲ್ಲಿ ತತ್ಪರರಾಗಿದ್ದಾರೆ. ಅಷ್ಟೇ ಅಲ್ಲ ಜೀವನ ನಿಭಾಯಿಸಲು ಅನೇಕ ಕೆಲಸಗಳನ್ನು ಹಮ್ಮಿಕೊಂಡಿದ್ದಾರೆ. ಆದರೆ ಅವರ ಸಂಕಟಗಳಾಗಲಿ, ಶ್ರಮವಾಗಲಿ, ದಣಿವಾಗಲಿ ಯಾವತ್ತು ಯಾರ ಕಣ್ಣಿಗೂ ಬಿದ್ದಿಲ್ಲ. ಅವರ ಶ್ರಮಕ್ಕೆ ತಕ್ಕ ಪ್ರತಿಫಲವೂ ಅವರಿಗಿಲ್ಲ. ಕುಟುಂಬದ ದುಡಿಮೆಯ ಶಕ್ತಿಯಲ್ಲಿ ಮಹಿಳೆ ಒಂದು ಭಾಗವಾಗಿ ಸೇರಿ ಹೋಗಿದ್ದಾರೆ ಅಷ್ಟೆ (ಮೈತ್ರೇಯಿ ಮುಖ್ಯೋಪಾಧ್ಯಾಯ, ಬೆಳ್ಳಿಸಂಕೋಲೆಗಳು, ಪು.೫೬). ನಿಜ ಮಹಿಳೆಯರಿಗೆ ಅದರಲ್ಲೂ ಕೃಷಿ ಮಹಿಳೆಯರಿಗೆ ದಿನದ ಕೆಲವು ಗಂಟೆಗಳನ್ನು ಬಿಟ್ಟರೆ ಉಳಿದ ಅವಧಿ ಎಲ್ಲಾ ದುಡಿಮೆಯ ಅವಧಿಯೇ ಆಗಿರುತ್ತದೆ. ಮನೆಯ ಒಳಗೆ ಕಸ, ಮುಸರಿ ಮಾಡುವುದು, ಪಾತ್ರ ತೊಳೆಯುವುದು, ಬಟ್ಟೆ ಒಗೆಯುವುದು, ನೀರು ತುಂಬುವುದು, ಅಡುಗೆ ಮಾಡುವುದು, ಊಟ ಬಡಿಸುವುದು, ಗಂಡ ಮಕ್ಕಳು ಮತ್ತು ಮನೆಯ ಹಿರಿಯರ ಯೋಗಕ್ಷೇಮ ನೋಡಿಕೊಳ್ಳುವುದು. ಈ ಎಲ್ಲಾ ಜವಾಬ್ದಾರಿಯ ನಿರ್ವಹಣೆಯಲ್ಲಿ ಮಹಿಳೆ ಸಕ್ರಿಯವಾಗಿ ಪಾಲ್ಗೊಳ್ಳುತ್ತಾಳೆ.

ಅಲ್ಲದೆ ಕೃಷಿಯ ಪೂರಕ ಕೆಲಸಗಳನ್ನು ಮನೆಯಲ್ಲಿ ಪುರುಷನ ಅನುಪಸ್ಥಿತಿಯಲ್ಲಿ ಮಹಿಳೆ ಮಾಡುತ್ತಾಳೆ. ಅವುಗಳೆಂದರೆ ದನಕರುಗಳಿಗೆ ನೀರು ಕುಡಿಸುವುದು, ಮೇವು ಹಾಕುವುದು, ದನಕರುಗಳ ಸಗಣಿಯನ್ನು ಬಳಿದು ತಿಪ್ಪೆಗೆ ಹೊತ್ತು ಹಾಕುವ ಕೆಲಸಗಳನ್ನು ಮಹಿಳೆ ಮಾಡುತ್ತಾಳೆ. ಅಲ್ಲದೆ ಹೈನುಗಾರಿಕೆ ಇದ್ದ ಕೃಷಿ ಕುಟುಂಬಗಳಾಗಿದ್ದರೆ ಹಾಲನ್ನು ಕರೆಯುವ ಕೆಲಸ ಬಹುಪಾಲು ಮಹಿಳೆಯರಿಂದಲೇ ಮಾಡಲ್ಪಡುವಂತಹದ್ದಾಗಿದೆ.

ತಿನ್ನುವ ಕಾಳುಗಳನ್ನು ಹಸನುಗೊಳಿಸುವವರು ಮಹಿಳೆಯರೇ ಆಗಿದ್ದಾರೆ. ಹಿಂದೆ ಮನೆಯಲ್ಲಿ ಕುಟ್ಟುವ ಮತ್ತು ಬೀಸಿ ಹಿಟ್ಟು ಮಾಡುವ ಕೆಲಸವನ್ನು ಮಹಿಳೆಯರೇ ಮಾಡುತ್ತಿದ್ದರು. ಆದರೆ ಈಗ ಹಿಟ್ಟಿನ ಗಿರಣಿಗಳು ಬಂದಿದ್ದರಿಂದ ಅವರಿಗೆ ಹಿಟ್ಟು ಮಾಡುವ ಕೆಲಸದ ಹೊರೆ ಕೊಂಚ ಕಡಿಮೆಯಾಗಿದೆ. ಆದರೆ ಈಗಲೂ ಕಾಳುಗಳನ್ನು ಹಸನು ಮಾಡಿ ಗಿರಣಿಗೆ ಕೊಟ್ಟು ಕಳುಹಿಸುವವರೆಗಿನ ಕೆಲಸ ಮಹಿಳೆಯದಾಗಿದೆ. ಕೆಲವೊಮ್ಮೆ ಮನೆಯ ಗಂಡಸರ ಅನುಪಸ್ಥಿತಿಯಲ್ಲಿ ಅಥವಾ ಅನಿವಾರ್ಯವಾದರೆ ಮಹಿಳೆಯೇ ಗಿರಣಿಗೆ ಹೋಗಿ ಹಿಟ್ಟು ಮಾಡಿಸಿಕೊಂಡು ಬರಬೇಕಾಗುತ್ತದೆ.

'ಪ್ರತಿ ಗಂಡಿನ ಯಶಸ್ಸಿನ ಹಿಂದೆ ಒಬ್ಬ ಮಹಿಳೆ ಇರುತ್ತಾಳೆ' ಎನ್ನುವ ಆಡು ಮಾತೊಂದಿದೆ. ಹಾಗೆಯೇ ಪ್ರತಿ ಕೃಷಿ ಕುಟುಂಬದ ಮತ್ತು ಕೃಷಿಕನ ಶ್ರೇಯಸ್ಸಿನ ಹಿಂದೆ ಆ ಕುಟುಂಬದ ಮಹಿಳೆಯರ ಶ್ರಮ ಇದ್ದೇ ಇರುತ್ತದೆ ಎಂದರೆ ತಪ್ಪಾಗಲಾರದು. ಏಕೆಂದರೆ ಹೊಲಕ್ಕೆ ಹೋಗುವ ಮೊದಲು ಮನೆಯ ಒಳಗಿನ ಬಹುಪಾಲು ಕೆಲಸಗಳನ್ನು ಮಹಿಳೆಯೇ ಮಾಡಿಕೊಂಡು ಹೋಗುತ್ತಾಳೆ. ಗಂಡ ಬೆಳಿಗ್ಗೆದ್ದು

ಹೊಲಕ್ಕೆ ಹೋಗುತ್ತಾನೆಂದರೆ ತಾನು ಬೇಗ ಎದ್ದು ಅವನಿಗೆ ತಿನ್ನುವುದಕ್ಕೇನಾದರೂ ಮಾಡಿ ಆತನಿಗೆ ಉಣಿಸಿ ಹೊಲಕ್ಕೆ ಕಳುಹಿಸಿಕೊಟ್ಟು, ಮನೆಯಲ್ಲಿ ಮಕ್ಕಳು ಮರಿಗಳನ್ನು ಸಂಬಾಳಿಸಿಕೊಂಡು ಮನೆಯ ಎಲ್ಲ ಕೆಲಸ ಕಾರ್ಯ ಮುಗಿಸಿ ಮತ್ತೆ ಗಂಡನಿಗೂ ತನಗೂ ಬುತ್ತಿಕಟ್ಟಿಕೊಂಡು ಹೊಲಕ್ಕೆ ಹೋಗುತ್ತಾಳೆ.

ಹಿಂದೆ ಬಿತ್ತನೆಯ ಬೀಜವನ್ನು ಸಂರಕ್ಷಿಸುವ ಕೆಲಸವೂ ಮಹಿಳೆಯದೇ ಆಗಿತ್ತು. ಇಂದು ಮಾರುಕಟ್ಟೆಯಲ್ಲಿ ಸಿದ್ಧ ಬೀಜ ತರುವುದರಿಂದ ಬೀಜ ಸಂರಕ್ಷಣೆ ಮಾಡುವ ಪ್ರವೃತ್ತಿ ಕಡಿಮೆಯಾಗಿದೆ. ಆದರೂ ಈಗಲೂ ಮನೆಯಲ್ಲಿ ಬಿತ್ತನೆಗೆ ಹೊರಟಿದ್ದಾರೆಂದರೆ ಬಿತ್ತನೆಗೆ ಸಜ್ಜು ಮಾಡಿಕೊಡುವಲ್ಲಿ ಮಹಿಳೆಯು ಪುರುಷನಿಗೆ ನೆರವಾಗುತ್ತಾಳೆ. ಮುಖ್ಯ ಬೆಳೆಯೊಂದಿಗೆ ಮನೆಗೆ ಬೇಕಾಗುವ ಸಾಸಿವೆ, ಗುರೆಳ್ಳು, ನವಣೆ, ಅವರೆ, ಕೊತಂಬರಿ ಕಾಳಿನಂತಹ ಬೀಜಗಳನ್ನು ನೆನಪು ಮಾಡಿ ಸಜ್ಜುಗೊಳಿಸಿ ಬಿತ್ತುವುದಕ್ಕೆ ಅಣಿಮಾಡಿಕೊಡುವವಳು ಮಹಿಳೆಯೇ ಆಗಿದ್ದಾಳೆ. ಹೀಗೆ ತನ್ನ ಕುಟುಂಬಕ್ಕಾಗಿ ಕುಟುಂಬದ ಏಳಿಗೆಗಾಗಿ ಅವಳು ಮಾಡುವ ಕೆಲಸ ಶ್ಲಾಘನೀಯವೇ ಸರಿ.

ಕೃಷಿ ಮಹಿಳೆ ಮನೆಯ ಒಳಗೆ ಇಷ್ಟೆಲ್ಲಾ ಕೆಲಸಗಳನ್ನು ಮಾಡಿದರೂ ಈ ಯಾವ ಕೆಲಸಗಳು ಕೆಲಸ ಅಥವಾ ದುಡಿಮೆ ಎಂದು ಪರಿಗಣಿಸಲ್ಪಡದೇ ಅವು ಅವಳ ಕುಟುಂಬಕ್ಕೆ ಮಾಡುವ ಸೇವೆ ಅಥವಾ ಕರ್ತವ್ಯವಾಗಿ ಪರಿಗಣಿಸಲ್ಪಡುತ್ತಿವೆ.

**೧. ಕೌಟುಂಬಿಕ ವಲಯದಲ್ಲಿ ಕೃಷಿ ಮಹಿಳೆಯರ ಸ್ಥಾನಮಾನ**

ಬಹುತೇಕ ಕುಟುಂಬದ ಸ್ವರೂಪದಲ್ಲಿ ಲಿಂಗಭೇದ ಕಂಡುಬರುವಂತೆ ಕೃಷಿಯ ಕೌಟುಂಬಿಕ ವಲಯದಲ್ಲೂ ಲಿಂಗ ತಾರತಮ್ಯದ ಕೆಲವು ಎಳೆಗಳು ಸೇರಿಕೊಂಡಿರುವುದು ಗೋಚರವಾಗುತ್ತದೆ. ಹೀಗೆ ಕಂಡುಬರುವ ಲಿಂಗಬೇಧದ ಸ್ವರೂಪ ಯಾವ ರೀತಿಯಾಗಿರುತ್ತದೆ ಎಂಬುದನ್ನು ಕೃಷಿ ಕುಟುಂಬದೊಳಗಿನ ಕೆಲವು ದೈನಂದಿನ ಸಂಗತಿಗಳಿಂದ ವಿವರಿಸುವ ಮತ್ತು ಆ ಮೂಲಕ ಕೃಷಿ ಮಹಿಳೆಗೆ ಕುಟುಂಬದೊಳಗೆ ಸಿಗುವ ಸ್ಥಾನಮಾನ ಯಾವ ರೀತಿಯದು ಎಂಬುದನ್ನು ಇಲ್ಲಿ ಗಮನಿಸಲಾಗಿದೆ.

ಬಹುಪಾಲು ಕೃಷಿ ಮಹಿಳೆಯರು ಪುರುಷನಿಗೆ ಅಧೀನವಾಗಿಯೇ ಜೀವನ ಸಾಗಿಸುತ್ತಿರುವುದು ತಿಳಿದು ಬರುತ್ತದೆ. ಕುಟುಂಬದೊಳಗೆ ಮಹಿಳೆ ಗಂಡಿಗೆ ತಗ್ಗಿಬಗ್ಗಿ ನಡೆಯಬೇಕು, ಗಂಡಿಗೆ ಎದುರಾಡಬಾರದು. ಒಟ್ಟಲ್ಲಿ ಗಂಡಿಗೆ ಹೆಣ್ಣು ಗೌರವ ಕೊಡಬೇಕು ಎನ್ನುವ ನಿರೀಕ್ಷೆಗಳು ಇರುತ್ತವೆ. ಅದಕ್ಕೆ ಇರಬೇಕು! ಹಿರಿಕರು 'ತಳಿ ನೋಡಿ ದನ ತರಬೇಕು. ಗುಣ ನೋಡಿ ಹೆಣ್ಣು ತರಬೇಕು' ಎಂದು ಹೇಳುತ್ತಿದ್ದದ್ದು. ಅಂದರೆ ಹೇಳಿದಂತೆ ಕೇಳಿಕೊಂಡು ನಡೆಯುವ ಸ್ವಭಾವ, ಮನೆಯ ಮರ್ಯಾದೆಯನ್ನು ಕಾಯ್ದುಕೊಂಡು ಹೋಗುವ ಗುಣ ಆ ಹೆಣ್ಣಿನಲ್ಲಿರಬೇಕು. ಅಂತವಳನ್ನು ಮಾತ್ರ ಮನೆಯ ಸೊಸೆಯಾಗಿ ತರಲು ಅಪೇಕ್ಷಿಸುತ್ತಿದ್ದರು. ಈ ಪ್ರವೃತ್ತಿ ಈಗಲೂ ಇದೆ. ಅಂದರೆ ಏನೇ ಆದರೂ ಎಲ್ಲರೊಂದಿಗೆ ಹೊಂದಿಕೊಂಡು ಹೋಗುವ ಸ್ವಭಾವ ಮಹಿಳೆಯಲ್ಲಿ ಇರಬೇಕೆಂಬ ಅಪೇಕ್ಷೆ ಹೊಂದಿದವರಾಗಿರುತ್ತಾರೆ.

ಗ್ರಾಮೀಣ ಪ್ರದೇಶದ ಕೃಷಿಯ ಕೂಡು ಕುಟುಂಬಗಳಲ್ಲಿ ಗಂಡಸಿಗೆ ಸರಿಸಮವಾಗಿ ಕುಳಿತುಕೊಳ್ಳುವ ಅವಕಾಶ ಮಹಿಳೆಯರಿಗಿರುವುದಿಲ್ಲ. ಮನೆಯ ಕೆಲವು ಜಾಗದಲ್ಲಿ ಅವಳ ಪ್ರವೇಶ ತೀರಾ ವಿರಳವಾಗಿರುತ್ತಿದೆ. ಹೆಚ್ಚಾಗಿ ಮನೆಯಲ್ಲಿ ಇವಳ ಆಪ್ತ ವಲಯಗಳೆಂದರೆ ಅಡುಗೆ ಮನೆ ಮತ್ತು ಹಿತ್ತಲು ಮಾತ್ರ. ಅಡುಗೆ ಮನೆ ಮತ್ತು ಹಿತ್ತಲಿನಲ್ಲಿ ಮುಕ್ತವಾಗಿ ಓಡಾಡಿದಂತೆ ಆ ಮಹಿಳೆಗೆ ಮನೆಯ ಪಡಸಾಲೆ ಅಥವಾ ನಡುಮನೆಯಲ್ಲಿ ಓಡಾಡುವ ಮನೆಯ ಹೊರಗಿನ ಜಗುಲಿಯ ಮೇಲೆ ಆರಾಮವಾಗಿ ಕುಳಿತುಕೊಳ್ಳುವ ಅವಕಾಶವಿರದು. ಹಾಗೊಂದು ವೇಳೆ ಆ ಜಾಗದಲ್ಲಿ ಮಹಿಳೆಯ ಪ್ರವೇಶವಾಗುವುದಾದರೆ ಅದು ಮನೆಯಲ್ಲಿ ಪುರುಷರಾರು ಇಲ್ಲದ ಸಮಯದಲ್ಲಿ ಮಾತ್ರ. ಏಕೆಂದರೆ ಮನೆಯ ಯಜಮಾನ ಭಾವಂದಿರು, ಗಂಡ, ಮೈದುನಗಳಿರುವ ಕೂಡು ಕುಟುಂಬಗಳ ಮನೆಯಲ್ಲಿ ಇವರೆಲ್ಲ ಇದ್ದಾಗ ಅವಳು ಹೊರಗೆ ಬರುವುದೇ ಅಪರೂಪ. ಆಗ ಅವಳ ವಾಸ್ತವ್ಯವೇನಿದ್ದರೂ ಅಡುಗೆ ಮನೆಯೊಂದಕ್ಕೆ ಸೀಮಿತವಾಗಿರುತ್ತದೆ. ಹಾಗೇನಾದರೂ ಒಳ ಹೊರಗೆ ಓಡಾಡುವ ಸಂದರ್ಭಗಳಿದ್ದಾಗ ಹೆಣ್ಣು ಮಕ್ಕಳು ತಲೆಯ ಮೇಲೆ ಸೆರಗು ಹಾಕಿಕೊಂಡು ತಲೆತಗ್ಗಿಸಿ ನಡೆಯುತ್ತಾರೆ. ಇಲ್ಲವೆ ಅಡ್ಡ ಸೆರಗು ಹಾಕಿರುತ್ತಾರೆ. ಇದು ಒಂದರ್ಥದಲ್ಲಿ ಮನೆಯ ಪುರುಷರಿಗೆ ಆ ಮಹಿಳೆ ಕೊಡುವ ಗೌರವದ ಪ್ರತೀಕವಾಗಿದೆ. ಅಲ್ಲದೆ ಇದು ಕೃಷಿಯ ಕೌಟುಂಬಿಕ ಆವರಣದಲ್ಲಿ ಹೆಣ್ಣು ಪುರುಷನಿಗೆ ಅಂಜಿ ನಡೆಯುವ ಪ್ರವೃತ್ತಿಯ ಪ್ರತೀಕವೂ ಆಗಿದೆ. ಮನೆಯ ಸೊಸೆಯಂದಿರ ವಿಷಯದಲ್ಲಿ ಈ ಕಟ್ಟುಪಾಡುಗಳು ಬಿಗಿಯಾಗಿರುತ್ತವೆ. ಮನೆಯ ಹೆಣ್ಣುಮಕ್ಕಳ ವಿಷಯಕ್ಕೆ ಬಂದಾಗ ಈ ನಿಯಮಗಳಲ್ಲಿ ಸ್ವಲ್ಪ ಸಡಿಲತೆ ಇರುವುದು ಕಂಡುಬರುತ್ತದೆ.

ಕುರ್ಚಿ ಸಂಸ್ಕೃತಿ ನಮ್ಮಲ್ಲಿ ಬೆಳೆದು ಬಂದಿದ್ದು ಬಹಳ ಇತ್ತೀಚಿಗಾದರೂ ಮನೆಯಲ್ಲಿ ಆ ಕುರ್ಚಿಯ ಮೇಲೆ ಯಾರು ಕುಳಿತುಕೊಳ್ಳಬೇಕು? ಯಾರು ಕುಳಿತುಕೊಳ್ಳಬಾರದು' ಎಂಬ ಅಲಿಖಿತ ನಿಯಮಗಳು ರೂಢಿಯಲ್ಲಿವೆ. ಮನೆಯಲ್ಲಿ ಆ ಕುರ್ಚಿಯ ಮೇಲೆ ಕುಳಿತುಕೊಳ್ಳುವ ಹಕ್ಕು ಮನೆಯ ಪುರುಷರಿಗೂ, ಮನೆಯ ಮಕ್ಕಳಿಗೂ ಇದ್ದಷ್ಟು ಆ ಮನೆಯ ಸೊಸೆಯಂದಿರಿಗಿರದು. ತುಂಬಾ ಅಪರೂಪಕ್ಕೆ ಮನೆಯ ಗಂಡಸರ್ಯಾರು ಇಲ್ಲದಿದ್ದಾಗ ಆ ಕುರ್ಚಿಗಳು ಅವಳದಾಗುತ್ತವಷ್ಟೆ. ಹಾಗೇನಾದರೂ ಮನೆಯ ಗಂಡಸರೆದುರು ಅಥವಾ ಗಂಡಸರಿಗೆ ಸರಿಸಮನಾಗಿ ಹೆಣ್ಣು ಕುರ್ಚಿ ಮೇಲೆ ಕುಳಿತಿರುವುದು ತಿಳಿದುಬಂದರೆ ಅದು ಆ ಹೆಣ್ಣಿನ ಸೊಕ್ಕು, ದರ್ಪ, ದುರಹಂಕಾರ ಎಂದು ವ್ಯಾಖ್ಯಾನಕ್ಕೊಳಗಾಗುತ್ತದೆ. ಅಲ್ಲದೆ ಅದು ಗಂಡಿಗೆ ತೋರುವ ಅಗೌರವವೆಂದು ಭಾವಿಸಲಾಗುತ್ತದೆ.

'ಮಳೆ ಬಂದರೆ ಕೆಟ್ಟಿಲ್ಲ ಮಗ ಉಂಡರೆ ಕೆಟ್ಟಿಲ್ಲ' ಎನ್ನುವ ಗಾದೆ ಮಾತೊಂದಿದೆ. ಅಂದರೆ ಗಂಡಸು ದುಡಿತಾನೆ ಅವನು ಏನು ಮಾಡಿದರೂ ಸರಿಯೇ ಎನ್ನುವ ತಾತ್ವಿಕತೆ ಈ ಗಾದೆಯದು. ಈಗಲೂ ಕೂಡ ಗಂಡಸು ದುಡಿಯುತ್ತಾನೆ ಎನ್ನುವ ಕಾರಣಕ್ಕೆ ಕುಟುಂಬದಲ್ಲಿ ಅವನಿಗೆ ಸಿಗುವ ಗೌರವಾಧಾರಗಳೇ ಬೇರೆ. ಊಟದ ಸಂಗತಿಯ ಬಗೆಗೆ ಹೇಳುವುದಾದರೆ ಗಂಡಸಿನ ಊಟದ ನಂತರವೇ ಮನೆಯ ಹೆಂಗಸರು ಊಟ ಮಾಡುವ ರೂಢಿಯನ್ನು ಬೆಳೆಸಿಕೊಂಡು ಬಂದಿರುವುದನ್ನು ನಾವು ಗಮನಿಸಬಹುದು.

ಅತ್ತಿಯ ಮನಿಯಾಗ ಮುತ್ತಾಗಿ ಇರಬೇಕು
ಹೊತ್ತಾಗಿ ನೀಡಿದರ ಉಣಬೇಕು | ಮಗಳ
ತವರೀಗಿ ಹೆಸರ ತರಬೇಕು ||

ಅಂದರೆ ಮನೆಯಲ್ಲಿ ಊಟದ ವಿಷಯದಲ್ಲಿ ಪುರುಷನಿಗಿದ್ದಷ್ಟು ಪ್ರಾಶಸ್ತ್ಯ ಮಹಿಳೆಗಿದ್ದಂತಿಲ್ಲ. ಎಷ್ಟೊತ್ತಿದ್ದರೂ ಸರಿಯೇ ಮನೆಯವರೆಲ್ಲಾ ಊಟ ಮಾಡಿದ ಮೇಲೆ ಮಹಿಳೆಯರು ಊಟಮಾಡುವ ಕ್ರಮ ನಮ್ಮಲ್ಲಿದೆ. ಅಲ್ಲದೆ ದುಡಿಯುವ ಗಂಡಸು ಎಂದು ಅವರಿಗೆ ಪೌಷ್ಟಿಕಾಂಶವಿರುವ ತಿಂಡಿ ತಿನಿಸು ಮತ್ತು ಅಡುಗೆ ಪದಾರ್ಥಗಳನ್ನು ರುಚಿರುಚಿಯಾಗಿ ಮಾಡಿಹಾಕಲಾಗುತ್ತದೆ. ಅಂತೆಯೇ ಏನಾದರೂ ತಿನ್ನುವ ಪದಾರ್ಥಗಳನ್ನು ಹಂಚುವ ವಿಷಯದಲ್ಲೂ ಅಷ್ಟೆ. ಗಂಡಸರಿಗೆ ಹೆಚ್ಚಿನ ಭಾಗವನ್ನು ಕೊಟ್ಟು ಉಳಿದುದರಲ್ಲಿ ಮಹಿಳೆ ಹಂಚಿಕೊಳ್ಳುವುದನ್ನು ನೋಡುತ್ತೇವೆ.

ಮೇಲಿನ ತ್ರಿಪದಿಯ ಇನ್ನೊಂದು ಪಾಠಾಂತರದಲ್ಲಿ ಈ ರೀತಿ ಇದೆ.

ಅತ್ತೀಯ ಮನಿಯಾಗ ಮುತ್ತಾಗಿ ಇರಬೇಕು
ಹೊತ್ತು ನೀಡಿದರ ಉಣಬೇಕು | ಮಗಳ
ತವರವರ ಹೆಸರ ತರಬೇಕು ||

ತಳ ಹಿಡಿದಿದ್ದು ಅಥವಾ ಸೀದಿದ್ದು ಇದ್ದರೂ ಸರಿಯೇ ಅದನ್ನು ಊಟ ಮಾಡಬೇಕಾದ ಸ್ಥಿತಿ ಮಹಿಳೆಯರದು. ಗಂಡಸಿನ ಊಟದ ನಂತರ ಮಹಿಳೆಯರು ಊಟ ಮಾಡಬೇಕಾಗಿದ್ದರಿಂದ ಅವರೆಲ್ಲ ಉಂಡ ಮೇಲೆ ಉಳಿದದ್ದನ್ನು ಇವಳು ತಿನ್ನಬೇಕಾಗುತ್ತದೆ.

ಹೀಗೆ ಇನ್ನೊಂದು ನಿದರ್ಶನವನ್ನು ನೋಡೋಣ. ಕೃಷಿ ಕುಟುಂಬ ಎಂದರೆ ಸಾಮಾನ್ಯವಾಗಿ ಆ ಮನೆಯಲ್ಲಿ 'ಹೈನು' ಇದ್ದೇ ಇರುತ್ತದೆ. ನಾವು ಗಮನಿಸಬೇಕಾದ ಸಂಗತಿ ಎಂದರೆ ಆ ಹೈನಿನ ಬಹುಪಾಲು ಲಾಭ ಯಾರಿಗೆ ತಟ್ಟುವುದು ಎಂಬ ಅಂಶವನ್ನು, ಈ ಅಂಶವನ್ನು ಗಮನಿಸಿದಾಗ, ಗಂಡಸು ದುಡಿತಾನೆ ಎನ್ನುವ ಕಾರಣಕ್ಕೆ ಸಾಮಾನ್ಯವಾಗಿ ಅವರಿಗೆ ಕೆನೆ ಮೊಸರನ್ನು, ಗಟ್ಟಿ ಮೊಸರನ್ನು, ಹಾಲಿನ ಕೆನೆಯ ಭಾಗವನ್ನು, ತುಪ್ಪ-ಬೆಣ್ಣೆಗಳನ್ನ ಹೆಚ್ಚು ಬಡಿಸುವುದು ಕಂಡುಬರುತ್ತದೆ. ಬಹುಶಃ ಆಹಾರದ ಈ ಅಸಮಾನ ಹಂಚಿಕೆಯಿಂದ ಪೋಷಕಾಂಶದ ಕೊರತೆ ಉಂಟಾಗಿ ಮಹಿಳೆಯರ ದೈಹಿಕ ದುರ್ಬಲತೆಗೆ, ಅನಾರೋಗ್ಯಕ್ಕೆ ಕಾರಣವಾಗಬಹುದು.

ಎಸ್.ಸಿ. ಶೆಟ್ಟರ್ ಮತ್ತು ಎಂ.ಪಿ. ದೊಡ್ಡಮನಿ ಅವರು ಹೆಣ್ಣಿನ ಅನಾರೋಗ್ಯ ಮತ್ತು ಅಪೌಷ್ಟಿಕತೆಯನ್ನು ಕುರಿತಂತೆ ಈ ರೀತಿ ಹೇಳುತ್ತಾರೆ. 'ಗ್ರಾಮೀಣ ಪ್ರದೇಶದ ಬಹಳಷ್ಟು ಮಹಿಳೆಯರು ಅನಾರೋಗ್ಯದಿಂದ ಬಳಲುತ್ತಿರುವ ಕುರಿತು ಹಲವಾರು ಅಧ್ಯಯನಗಳು ಸೂಚಿಸಿರುವಂತೆ ಇವರು ಸೇವಿಸುವ ಆಹಾರದಲ್ಲಿ ಸತ್ವಯುತ ಪೌಷ್ಟಿಕಾಂಶದ ಕೊರತೆ ಇದ್ದು, ಇವರು ಸೇವಿಸುವ ಪೌಷ್ಟಿಕಾಂಶ ತುಂಬಾ ಕಡಿಮೆ ಪ್ರಮಾಣದ್ದಾಗಿದೆ (ದಿನಕ್ಕೆ ಸರಾಸರಿ ೧೦೦ ಕ್ಯಾಲೋರಿ). ಇದು ಅವರು ದಿನನಿತ್ಯದ

ಕೆಲಸಕಾರ್ಯಗಳಿಗೆ ವ್ಯಯಿಸುವ ಶಕ್ತಿಗಿಂತ ತುಂಬಾ ಕಡಿಮೆಯಾಗಿರುವುದರಿಂದ ಅನಾರೋಗ್ಯದಿಂದ ಬಳಲಬೇಕಾಗುತ್ತದೆ ಎಂದಿದ್ದಾರೆ. ಅಲ್ಲದೆ ೧೯೯೮-೯೯ರ ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆಯ (NFHS) ಪ್ರಕಾರ ಗ್ರಾಮೀಣ ಸಮಾಜದಲ್ಲಿಯ ಮಹಿಳೆಯರು ಶೇ. ೫೦% ರಷ್ಟು ರಕ್ತಹೀನತೆಯಿಂದ ಮತ್ತು ಶೇ. ೪೬%ರಷ್ಟು ಹಿಮೊಗ್ಲೋಬಿನ್ ಕೊರತೆಯಿಂದ ಬಳಲುತ್ತಿರುವುದು ಕಂಡುಬರುತ್ತದೆ' ಎಂದು ತಿಳಿಸಿದ್ದಾರೆ' (ಯೋಜನಾ ಪತ್ರಿಕೆ, ಜುಲೈ ೨೦೦೬, ಪು. ೧೬-೧೭).

ಅಂತೆಯೇ ಮನೆಯಲ್ಲಿ ಊಟದ ವಿಷಯದಲ್ಲಿ ಪುರುಷರಿಗೆ ಹೆಚ್ಚು ಪ್ರಾಶಸ್ತ್ಯ ನೀಡುವುದರ ಕುರಿತು ವಂದನಾಶಿವ ಅವರು ಈ ರೀತಿ ಹೇಳಿದ್ದಾರೆ. 'ಜಮೀನಿನಿಂದ ತಟ್ಟೆಗೆ ಆಹಾರ ವರ್ಗಾವಣೆಯಲ್ಲಿ ಮಹಿಳೆಯರು ಪ್ರಮುಖ ಪಾತ್ರವಹಿಸಿದರೂ, ಅವರಿಗೆ ಸಲ್ಲಬೇಕಾದ ನ್ಯಾಯಯುತ ಪಾಲು ಸಿಗುತ್ತಿಲ್ಲ. ಬಹುಪಾಲು ಕೃಷಿ ಕೆಲಸ ಮಾಡುವ ಅವರು ಮನೆಯಲ್ಲಿ ಕೊನೆಗೆ ಉಣ್ಣುತ್ತಾರೆ. ಕನಿಷ್ಠ ಪ್ರಮಾಣದಲ್ಲಿ ಉಣ್ಣುತ್ತಾರೆ' ಎಂದು ಹೇಳಿ ವಿಷಯ ಕುರಿತಂತೆ ನಡೆದ ಅಧ್ಯಯನವನ್ನು ಹೀಗೆ ಸೂಚಿಸಿದ್ದಾರೆ. 'ಬೋರಿ ಹೋರೋವಿಟ್ಸ್ ಮತ್ತು ಮಧುಕೇಶ್ವರ ಪಂಜಾಬ್‌ನ ಹಳ್ಳಿಗಳ ಜಾಟ್ ಕುಟುಂಬಗಳಲ್ಲಿ ನಡೆಸಿದ ಅಧ್ಯಯನದ ಪ್ರಕಾರ ೧೪ ಕುಟುಂಬಗಳಲ್ಲಿ ೧೨ ರಲ್ಲಿ ಎಲ್ಲರೂ ಊಟ ಮುಗಿಸಿದ ನಂತರ ಮಹಿಳೆಯರು ಊಟಕ್ಕೆ ಕೂರುತ್ತಿದ್ದರು. ಜಮೀನಿನಲ್ಲಿ ಹೆಚ್ಚು ಕೆಲಸ ಇದ್ದಾಗ ಅವರು ೧೫ ಘಂಟೆ ಕೆಲಸ ಮಾಡುವುದು ಇದೆ. ಆದರೆ ಪುರುಷನಿಗೆ ಹೋಲಿಸಿದರೆ (೩೧೧೨ ಕ್ಯಾಲೋರಿ) ಅವರಿಗೆ ಸಿಗುವುದು ೨,೧೯೬ ಕ್ಯಾಲೋರಿ ಮಾತ್ರ'... ಎಂದು ಆ ಅಧ್ಯಯನದ ವಿವರಗಳನ್ನು ಹೇಳಿರುವರು (ವಂದನಾ ಶಿವ, ೨೦೦೫, ಪು.೨೩). ಹೀಗೆ ಮನೆಯ ಒಳಗೂ ಹೊರಗೂ ಮಹಿಳೆ ದುಡಿದರೂ ಕುಟುಂಬದಲ್ಲಿ ಅವಳು ಹೇಗೆ ನಿರ್ಲಕ್ಷ್ಯಕ್ಕೆ ಒಳಪಟ್ಟಿದ್ದಾಳೆ ಮತ್ತು ತನ್ನನ್ನು ತಾನೇ ಮಹಿಳೆ ಹಾಗೆ ನಿರ್ಲಕ್ಷ್ಯಕ್ಕೆ ಒಳಪಡಿಸಿಕೊಂಡು ಬಂದಿದ್ದಾಳೆ ಎಂಬುದು ಈ ರೀತಿಯ ಕೆಲವು ಸಂಗತಿಗಳಿಂದ ತಿಳಿದುಬರುತ್ತದೆ. ಒಟ್ಟಾರೆ ಈಗಿನ ನಾಗರೀಕ ಕೃಷಿ ಸಮುದಾಯದಲ್ಲಿ ಪುರುಷನಿಗೆ ಹೆಚ್ಚು ಪ್ರಾಶಸ್ತ್ಯ ಇರುವುದು ಕಂಡುಬರುತ್ತದೆ.

ಮೇಲೆ ಚರ್ಚಿಸಿದ ವಿಷಯಗಳು ಮೇಲುನೋಟಕ್ಕೆ ಸಣ್ಣಪುಟ್ಟ ವಿಷಯಗಳೆನಿಸಬಹುದು. ಆದರೆ ಅವುಗಳನ್ನು ನೋಡಿದರೆ ಒಟ್ಟು ಕೃಷಿ ಕುಟುಂಬದಲ್ಲಿ ಕೃಷಿ ಮಹಿಳೆಯರ ಸ್ಥಾನಮಾನ ಯಾವ ರೀತಿಯದು ಎಂಬುದು ತಿಳಿದುಬರುತ್ತದೆ. ಪುರುಷ ಹಿತಾಸಕ್ತಿಯ ಆಶಯಗಳನ್ನು ಹೊಂದಿದ ಕೃಷಿಯ ಕೌಟುಂಬಿಕ ನೆಲೆಯಲ್ಲಿ ಮಹಿಳೆಯರಿಗೆ ಹೆಚ್ಚು ಸ್ವಾಯತ್ತತೆ ಇಲ್ಲವೆಂಬುದನ್ನು ಈ ಅಂಶಗಳು ಸ್ಪಷ್ಟಪಡಿಸುತ್ತವೆ.

ಇನ್ನೂ ಕೃಷಿ ಕೂಲಿ ಮಹಿಳೆಯಾಗಿದ್ದರೆ ಅವಳಿಗೆ ಕುಟುಂಬದಲ್ಲಿ ಅಂತಹ ಕಟ್ಟುಪಾಡುಗಳೇನು ಇರುವುದಿಲ್ಲ. ಕುಟುಂಬದ ವ್ಯವಹಾರಗಳಲ್ಲಿ ಅವಳಿಗೆ ಸಾಕಷ್ಟು ಸ್ವಾಯತ್ತತೆ ಇರುತ್ತದೆ. ಕುಟುಂಬದೊಳಗೆ ಗಂಡ-ಹೆಂಡಿರಿಬ್ಬರೂ ಕೂಡಿ ದುಡಿಯುವುದರಿಂದ ಹೊಲಗದ್ದೆಗಳಲ್ಲಿ ದುಡಿದು ಹೈರಾಣಾದ ಇವರು ಮನೆಯೊಳಗೆ ಅನ್ಯೋನ್ಯವಾಗಿರುತ್ತಾರೆ. ಆದರೂ ಕೌಟುಂಬಿಕ ಜೀವನದಲ್ಲಿ ಬಡತನ ಕಾಡುವ ಸಮಸ್ಯೆಯಾಗಿರುತ್ತದೆ. 'ಆತ ಬಡವ ನಾನು ಬಡವಿ ಒಲವೆ ನಮ್ಮ ಬದುಕು' ಎನ್ನುವ ಬೇಂದ್ರೆ ಗೀತೆಯ ಸಾರದಂತೆ ಕೆಲವು ಬಡಜೀವಿಗಳು ಇದ್ದುದರಲ್ಲಿಯೇ ತೃಪ್ತಿಪಟ್ಟುಕೊಂಡು ಬದುಕು ಸಾಗಿಸುತ್ತಾರೆ. ಆದರೆ

ಕೂಲಿ ಮಾಡಿ ಬದುಕುವ ಕೆಲವು ಕುಟುಂಬಗಳಲ್ಲಿ ಕುಡಿಯುವ ಚಟವಿದ್ದ ಗಂಡನಿದ್ದರೆ ಆ ಮಹಿಳೆಯ ಬಾಳು ಗೋಳೇ ಸರಿ. ಏಕೆಂದರೆ ಹೊಲದಲ್ಲಿ ಮನೆಯಲ್ಲಿ ದುಡಿಯುವುದಲ್ಲದೆ ಕುಡುಕ ಗಂಡನ ಹೊಡೆತ ಬಡೆತಗಳನ್ನು ಅವಳು ಸಹಿಸಿಕೊಳ್ಳಬೇಕಾಗುತ್ತದೆ.

ಆದರೆ ಕೇವಲ ಕೂಲಿಕಾರ್ಮಿಕ ವರ್ಗದವರಲ್ಲಿ ಮಾತ್ರ ಕುಡಿತದ ಚಟವಿರುವ ಗಂಡಸರಿದ್ದಾರೆ ಎಂದಲ್ಲ. ಮಧ್ಯಮ, ಮೇಲ್ಮಧ್ಯಮ ಮತ್ತು ಮೇಲ್ವರ್ಗದವರಲ್ಲೂ ಕುಡಿಯುವವರಿದ್ದಾರೆ. ಆದರೆ ಕೆಲವರು ಹವ್ಯಾಸಕ್ಕಾಗಿ ಕುಡಿದರೆ, ಕೆಲವರು ತಮ್ಮೊಳಗಿನ ಅಸಮಾಧಾನಗಳನ್ನು, ನೋವುಗಳನ್ನು ಮರೆಯುವುದಕ್ಕಾಗಿ ಕುಡಿಯುತ್ತಾರೆ. ಹೀಗೆ ಕುಡಿದ ವೇಳೆಯಲ್ಲಿ ಕೆಲವರು ತಮ್ಮ ಪಾಡಿಗೆ ತಾವು ನಿರ್ಲಿಪ್ತವಾಗಿದ್ದರೆ, ಇನ್ನು ಕೆಲವರು ಆ ಮತ್ತಿನ ಸ್ಥಿತಿಯಲ್ಲಿ ಹೆಂಡತಿ ಮಕ್ಕಳೊಂದಿಗೆ ಜಗಳಕ್ಕಿಳಿಯುವುದು ಕಂಡುಬರುತ್ತದೆ. ಆದರೆ ಮಧ್ಯಮ ಮತ್ತು ಮೇಲ್ವರ್ಗದವರಲ್ಲಿ ಗಂಡಸು ಕುಡಿದು ತನ್ನ ಹೆಂಡತಿಯನ್ನು ಹೊಡೆದರೆ ಅದು ಕುಟುಂಬದ ಮರ್ಯಾದೆಗೆ ಧಕ್ಕೆ ತರುವ ವಿಷಯವೆಂದು ಭಾವಿಸಲಾಗಿದ್ದರಿಂದ ಹೊಡೆಸಿಕೊಂಡ ಹೆಂಗಸು ಅದನ್ನು ಬಹಿರಂಗಪಡಿಸದೆ ಸಹಿಸಿಕೊಳ್ಳುವುದನ್ನು ಕಾಣುತ್ತೇವೆ. ಆದರೆ ಕೂಲಿ ಮಾಡುವ ವರ್ಗದಲ್ಲಿ ಈ ರೀತಿಯ ಘಟನೆಗಳು ಕಣ್ಣಿಗೆ ಕಾಣುವಂತೆ ನಡೆಯುತ್ತಿರುತ್ತವೆ. ಮತ್ತು ಈ ವರ್ಗದ ಹೆಂಗಸರು ತಮ್ಮ ಕೌಟುಂಬಿಕ ಸಮಸ್ಯೆಗಳನ್ನು ಮುಕ್ತವಾಗಿ ಇತರರೊಂದಿಗೆ ಹಂಚಿಕೊಳ್ಳುವುದನ್ನು ಅಥವಾ ಅಭಿವ್ಯಕ್ತಿಸಿಕೊಳ್ಳುವುದನ್ನು ಕಾಣುತ್ತೇವೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬ್ಯಾಡಗಿ ತಾಲೂಕಿನ ಮೋಟೆಬೆನ್ನೂರು ಗ್ರಾಮದ ಒಬ್ಬ ಕೃಷಿ ಕೂಲಿ ಮಹಿಳೆ ಶಾರದಾ (ಹೆಸರು ಬದಲಾಯಿಸಲಾಗಿದೆ) ವಯಸ್ಸು ೩೧. ಈಕೆ ತನ್ನ ಕೌಟುಂಬಿಕ ಜೀವನದ ಬಗೆಗೆ ತೋಡಿಕೊಂಡ ಅಳಲು ಈ ರೀತಿಯಾಗಿತ್ತು. "ಕತ್ತೆ ದುಡಿದಂಗ ದುಡಿದ್ರೂ ಬಾಳಿಗೆ ಒಂದಿಷ್ಟು ನೆಮ್ಮದಿ ಇಲ್ಲ. ಏನ್ ಮಾಡ್ತೀಯ ಕುಡಿಯೋ ಗಂಡನ ಕಟ್ಕೊಂಡು ಸಾಕು ಸಾಕಾಗೆದ ಬದುಕು. ಹೊಲಮನ್ಯಾಗ ದುಡಿಯೋದಲ್ಲದ ಕುಡುದು ಬಂದು ಗಂಡ ಒದ್ದರೆ ಒದಿಸಿಕೊಳ್ಳಬೇಕು. ಹೊಡೆದ್ರ ಹೊಡೆಸ್ಕೋಬೇಕು. ಎದುರು ಮಾತಾಡೋಹಂಗಿಲ್ಲ. ಒಂದೊಂದ್ಸಲಾ ಮಾರಾಯಾ ತಾನು ದುಡಿದಿದ್ದು ಕುಡಿಯೋದಕ್ಕೆ ಸುರಿಯೋದಲ್ಲದ ನಾ ದುಡಿದಿದ್ದ ಕೂಲಿನೂ ಕಸಗೊಂಡ ಹೋಗ್ತಾನ. ಏನಾದ್ರು ಅಂದ್ರೆ ಮನೆಯಿಂದ ಹೊರಗ ಹಾಕ್ತೇನಿ ಅಂತಾನ ಏನ್ ಮಾಡೋದು ಎಲ್ಲ ನಮ್ಮ ಹಣೆ ಬರಹ" ಎಂದು ನೋವಿನಿಂದ ಹೇಳಿಕೊಂಡು ನಿಟ್ಟುಸಿರು ಬಿಟ್ಟಳು. ಇದು ಶಾರದಾ ಒಬ್ಬಳ ಕಥೆಯಲ್ಲ ಕುಡುಕನನ್ನು ಕಟ್ಟಿಕೊಂಡ ಎಷ್ಟೋ ಕೂಲಿ ಮಹಿಳೆಯರ ಸಮಸ್ಯೆಯೂ ಆಗಿದೆ. ಇದು ಕೂಲಿ ಮಹಿಳೆಯ ಬದುಕಿನ ಅಭದ್ರ ಸ್ಥಿತಿಯೂ ಆಗಿದೆ.

ಮಹಿಳೆ ದುಡಿದರೆ ಆರ್ಥಿಕವಾಗಿ ಸ್ವಾವಲಂಬಿಯಾಗುತ್ತಾಳೆ ಎನ್ನುವ ಸಾರ್ವತ್ರಿಕ ವಿಚಾರ ಒಂದಿದೆ. ಆದರೆ ದುಡಿಯುವ ಎಲ್ಲಾ ಮಹಿಳೆಯರಿಗೂ ಆರ್ಥಿಕವಾಗಿ ಸ್ವಾವಲಂಬಿಗಳಾಗುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ದುಡಿಯುವ ಎಷ್ಟೋ ಮಹಿಳೆಯರಿಗೆ ತಮ್ಮ ದುಡಿಮೆಯಿಂದ ಬಂದ ಹಣವನ್ನು ವ್ಯಯ ಮಾಡುವ ಸ್ವಾತಂತ್ರ್ಯ ಇರುವುದಿಲ್ಲ. ತನ್ನ ದುಡಿಮೆಯ ಹಣವನ್ನು ಮನೆಯಲ್ಲಿ ಗಂಡನ ಕೈಗೆ ತಂದುಕೊಡುವ

ನಿದರ್ಶನಗಳು ನಮ್ಮಲ್ಲಿ ಅನೇಕ ಇವೆ. ಅಂದರೆ ತನ್ನ ದುಡಿಮೆಯ ಹಣವನ್ನು ಖರ್ಚು ಮಾಡುವ ಅಧಿಕಾರ ಮಹಿಳೆಗೆ ಇರುವುದಿಲ್ಲ. ಹಾಗೊಂದು ವೇಳೆ ಅವಳಿಗೆ ಖರ್ಚು ಮಾಡುವ ಅವಕಾಶವಿದ್ದಾಗಲೂ ಅವಳು ತನ್ನ ದುಡಿಮೆಯ ಹಣವನ್ನು ಕುಟುಂಬದ ಹಿತಾಸಕ್ತಿಗಾಗಿ, ಮನೆಯ ನಿರ್ವಹಣೆಗಾಗಿ ಬಳಸುತ್ತಾಳೆಯೇ ಹೊರತು ಸ್ವಹಿತಕ್ಕಾಗಿ ಬಳಸಿಕೊಳ್ಳುವುದಿಲ್ಲ. ಹಾಗೊಂದು ವೇಳೆ ತನ್ನ ಸ್ವಹಿತಕ್ಕಾಗಿ ಬಳಕೆ ಮಾಡಿಕೊಂಡಿದ್ದರೂ ಅದರ ಪ್ರಮಾಣ ಅತ್ಯಲ್ಪವಾಗಿರುತ್ತದೆ.

ಹೀಗೆ ಶಾರದಳಂತೆ (ಕೃಷಿ ಕೂಲಿ ಮಹಿಳೆ) ಬಹುಪಾಲು ಬಡ ಕೃಷಿ ಕೂಲಿ ಮಹಿಳೆಯರು ತಮ್ಮ ಕೂಲಿಯ ಹಣವನ್ನು ಗಂಡನ ಕುಡಿತದ ಚಟಕ್ಕೊ, ಮಕ್ಕಳ ಲಾಲನೆ ಪಾಲನೆಗೊ, ಮನೆಯ ನಿರ್ವಹಣೆಗೊ ವ್ಯಯಿಸುತ್ತಿರುವುದು ಕಂಡುಬರುತ್ತದೆ.

ಈ ಎಲ್ಲ ಸ್ಥಿತಿಗೂ ವಿರೋಧವೆಂಬಂತೆ ಕೆಲವು ಕೃಷಿ ಕುಟುಂಬದಲ್ಲಿ ಪುರುಷನಿದ್ದಾಗ್ಯೂ ಕುಟುಂಬದ ನಿರ್ವಹಣೆಯಲ್ಲಿ ಮಹಿಳೆ ಪ್ರಧಾನ ಪಾತ್ರವಹಿಸಿ, ಗಂಡ ಹಿನ್ನೆಲೆಯಲ್ಲಿದ್ದರೆ ಅಥವಾ ಹೆಣ್ಣನ್ನು ಸಮಾನತೆಯಿಂದ ಕಂಡು ಅವಳಿಗೆ ಕುಟುಂಬದಲ್ಲಿ ಮುಕ್ತ ಅವಕಾಶ ನೀಡಿದರೆ ಅದನ್ನು ನೆರೆಹೊರೆಯವರು ಸಹಿಸುವುದಿಲ್ಲ. ಅಂತಹ ಪುರುಷನನ್ನು 'ಹೆಂಡತಿಯ ಗುಲಾಮ' ಎಂದೋ, 'ಹೆಂಡತಿಯ ಛೇಲಾ' ಎಂದೋ, ಹೆಂಡ್ತಿ ಸೆರಗಿ ಹಿಂದೆ ಅಡ್ಡಾಡುವವನೆಂದೊ ಕರೆದು ಆ ಪುರುಷನನ್ನು ಅವಮಾನಗೊಳಿಸಲಾಗುತ್ತದೆ. ಅಂದರೆ ಅವರ ಈ ಮನೋಭಾವದ ಹಿಂದೆ ಮಹಿಳೆಗೆ ಕಲ್ಪಿಸುವ ಸಮಾನತೆಯನ್ನು ಹತ್ತಿಕ್ಕುವ ಹುನ್ನಾರ ಅಡಗಿರುತ್ತದೆ. ಹೀಗೆ ಅವಮಾನಕ್ಕೆ ಒಳಪಡಿಸುವವರಲ್ಲಿ ಆ ಸಮುದಾಯದ ಮಹಿಳೆಯರು ಸೇರಿರುತ್ತಾರೆ. ಅಂದರೆ ಈ ಮಹಿಳೆಯರು ವ್ಯವಸ್ಥೆಯ ಭಾಗವಾಗಿರುವುದರಿಂದ ವ್ಯವಸ್ಥೆಯ ಮೌಲ್ಯಗಳನ್ನೆಲ್ಲ ಒಪ್ಪಿಕೊಂಡವರಾಗಿದ್ದು, ಅವರು ತಾಳುವ ನಿಲುವುಗಳು ಮತ್ತು ಆಲೋಚನಾ ಕ್ರಮ ಕೂಡ ಪುರುಷನಿಷ್ಠವಾಗಿಯೇ ಇರುತ್ತವೆ.

ಹೀಗೆ ಕೃಷಿ ಕುಟುಂಬಗಳಲ್ಲಿ ಯಾವಾಗಲೂ ಮಹಿಳೆ ಪುರುಷನಿಗೆ ಅಧೀನವಾಗಿಯೇ ಇರಬೇಕೆಂಬ ನಿರೀಕ್ಷೆಗಳಿರುತ್ತವೆ. ಆ ಕಾರಣಕ್ಕಾಗಿಯೇ ಮಹಿಳೆ ಪುರುಷನಂತೆ ಸಮಾನವಾಗಿ ಬದುಕುವುದನ್ನು ಅವರು ಸಹಿಸುವುದಿಲ್ಲ. ಹಾಗೆ ಮಹಿಳೆ ಮುನ್ನೆಡೆಗೆ ಬಂದ ಸಂದರ್ಭಗಳಲ್ಲಿ ಮಹಿಳೆ ಗಂಡುಬೀರಿಯಾಗಿಯೋ, ಗಯ್ಯಾಳಿಯಾಗಿಯೋ ವ್ಯಾಖ್ಯಾನಿಸಲ್ಪಡುತ್ತಾಳೆ.

ಹೀಗೆ ಕೃಷಿಯ ಕೌಟುಂಬಿಕ ಆವರಣದಲ್ಲಿ ಪುರುಷನಿಗೆ ಪ್ರಾಶಸ್ತ್ಯವಿದ್ದಷ್ಟು ಮಹಿಳೆಗೆ ಇದ್ದಂತಿಲ್ಲ. ಕುಟುಂಬದಲ್ಲಿ ಊಟ ಮಾಡುವ ವಿಷಯದಲ್ಲಾಗಿರಬಹುದು, ಮನೆಯೊಳಗಿನ ಇರುವಿಕೆಯ (ವಾಸ್ತವ್ಯದ) ವಿಷಯದಲ್ಲಾಗಿರಬಹುದು. ಮಹಿಳೆ ಮತ್ತು ಪುರುಷರ ನಡುವೆ ಭಿನ್ನತೆಗಳಿರುವುದು ಕಂಡುಬರುತ್ತದೆ. ದುಡಿದ ತನ್ನ ಗಳಿಕೆಯನ್ನು ಖರ್ಚು ಮಾಡುವಲ್ಲೂ ಅವಳಿಗೆ ಸ್ವಾಯತ್ತತೆ ಇರುವುದಿಲ್ಲ. ಈ ಎಲ್ಲ ಅಂಶಗಳಿಂದ ಕೌಟುಂಬಿಕ ವಲಯದಲ್ಲಿ ಮಹಿಳೆಗೆ ಹೆಚ್ಚು ಸ್ವಾಯತ್ತತೆ ಮತ್ತು ಸಮಾನತೆಗಳಿಲ್ಲದಿರುವುದು ಸ್ಪಷ್ಟವಾಗುತ್ತದೆ.

## ಆ. ಮನೆಯ ಹೊರಗೆ ಕೃಷಿ ಮಹಿಳೆಯ ಪಾಲುದಾರಿಕೆ ಮತ್ತು ಸ್ಥಾನಮಾನ

ಕೃಷಿ ಮಹಿಳೆಯ ಮನೆಯ ಹೊರಗಿನ ಕೆಲಸಕಾರ್ಯಗಳೆಂದರೆ ಸಾಮಾನ್ಯವಾಗಿ ಹೊಲಗದ್ದೆಯ ಕೆಲಸ ಅಥವಾ ಅದಕ್ಕೆ ಸಂಬಂಧಿಸಿದ ಕೆಲಸಕಾರ್ಯಗಳೇ ಎಂದರ್ಥ. ಕೃಷಿ ಮಹಿಳೆಯ ಮನೆ ಹೊರಗಿನ ಪಾಲುದಾರಿಕೆ ಯಾವ ಬಗೆಯದು ಎಂಬುದನ್ನು ನೋಡೋಣ.

### ೧. ಹೊಲಗದ್ದೆಗಳ ದುಡಿಮೆಯಲ್ಲಿ ಮಹಿಳೆಯರ ಪಾತ್ರ :

ನಮ್ಮದು ಪುರುಷ ಪ್ರಧಾನ ಸಮಾಜವಾದ್ದರಿಂದ ಪುರುಷನಿಗಿದ್ದಂತೆ ಮಹಿಳೆಗೆ ಕುಟುಂಬದ ಒಳಗಾಗಲಿ, ಹೊರಗಾಗಲಿ ನಿರ್ಣಯಾತ್ಮಕ ಹಕ್ಕುಗಳಿರುವುದು ಕಡಿಮೆ. ಹಾಗಾಗಿ ಹೊಲವನ್ನು ಖರೀದಿಸುವ ವಿಷಯದಲ್ಲಾಗಲಿ, ಮಾರುವ ವಿಷಯದಲ್ಲಾಗಲಿ ಅಥವಾ ಇದ್ದ ಹೊಲವನ್ನ ಕೋರ ಅಥವಾ ಲಾವಣಿ ಕೊಡುವ ಬಗೆಗಾಗಲಿ ನಿರ್ಣಯಿಸುವುದು ಬಹುತೇಕ ಮನೆಯ ಪುರುಷನಾಗಿರುತ್ತಾನೆ. ಆದರೆ ಎಲ್ಲೋ ಕೆಲವು ಬೆರಳೆಣಿಕೆಯ ಮಹಿಳೆಯರಿಗೆ ವ್ಯವಸ್ಥೆಯಲ್ಲಿ ಈ ರೀತಿಯ ವ್ಯವಹಾರಗಳಲ್ಲಿ ಭಾಗಿಯಾಗಿ ನಿರ್ಣಯ ತೆಗೆದುಕೊಳ್ಳುವುದನ್ನು ಕಾಣುತ್ತೇವೆ.

ಇನ್ನು ಬೀಜ ಬಿತ್ತನೆಯ ಸಂದರ್ಭದಲ್ಲಿ ಹೊಲಕ್ಕೆ ಯಾವ ಬೀಜ ಬಿತ್ತಬೇಕು? ಯಾವ ಬೆಳೆ ಬೆಳೆಯಬೇಕು? ಬೆಳೆಗೆ ಯಾವ ಗೊಬ್ಬರ ಹಾಕಬೇಕು? ಯಾವ ರೋಗಕ್ಕೆ ಏನು ಕೀಟನಾಶಕ ಸಿಂಪಡಿಸಬೇಕು? ಎಂದು ತೀರ್ಮಾನಿಸುವವರು ಪುರುಷರೇ ಆಗಿದ್ದಾರೆ. ಏಕೆಂದರೆ ಮಹಿಳೆಗೆ ಕೃಷಿ ವಲಯದಲ್ಲಿ ಆ ಬಗೆಯ ನಿರ್ಣಯಾತ್ಮಕ ಹಕ್ಕುಗಳಿರುವುದು ಕಡಿಮೆ. ಆದರೆ ಹೊಲದಲ್ಲಿ ಬೆಳೆಯುವ ಮುಖ್ಯ ಬೆಳೆಯ ಜೊತೆಗೆ ಅಥವಾ ಹೊಲದ ಬದುವಿನಗುಂಟ ಬೆಳೆಯಲಿಕ್ಕೆ ಮನೆಗೆ ಬೇಕಾಗುವ ಸಾಸಿವೆ, ಗುರೆಳ್ಳು, ಅಗಸಿ, ನವಣೆಯಂತಹ ಬೀಜಗಳನ್ನು ಬಿತ್ತಲು ಹೇಳುತ್ತಾಳೆಯೇ ಹೊರತು ಹೊಲದಲ್ಲಿ ಬೆಳೆಯುವ ಮುಖ್ಯ ಬೆಳೆ ಯಾವುದಾಗಿರಬೇಕು ಎಂಬುದನ್ನು ಸಾಮಾನ್ಯವಾಗಿ ಮನೆಯ ಮುಖ್ಯಸ್ಥನೇ ತೀರ್ಮಾನಿಸುತ್ತಾನೆ. ಕೆಲವು ಸಂದರ್ಭದಲ್ಲಿ ಕೃಷಿಯಲ್ಲಿ ಪಳಗಿದ ಅನುಭವಸ್ಥೆಯಾಗಿದ್ದರೆ ಆಕೆ ಹೇಳಿದಂತೆ ಬೀಜ ಬಿತ್ತುವ ಕ್ರಿಯೆಯೂ ನಡೆಯುತ್ತದೆ. ಹಾಗಾಗಿ ಬಿತ್ತನೆಯ ಪ್ರಕ್ರಿಯೆಯಲ್ಲಿ ಮಹಿಳೆಯ ಪಾಲುದಾರಿಕೆ ಇಲ್ಲವೆ ಇಲ್ಲ ಎಂದು ಹೇಳಲಿಕ್ಕಾಗದು.

ಆದರೆ ಈಗ ಕೃಷಿಕರು ಮಾರುಕಟ್ಟೆಯಲ್ಲಿ ಬರುವ ಸಿದ್ಧ ಬೀಜಗಳ ಮೇಲೆಯೇ ಸಂಪೂರ್ಣವಾಗಿ ಅವಲಂಬಿತರಾಗಿರುವುದರಿಂದ ಮುಂಚಿತವಾಗಿಯೇ ಯಾವ ಬೆಳೆ ಬೆಳೆಯಬೇಕೆಂದು ನಿರ್ಧರಿಸುವಲ್ಲಿ ಅಸಹಾಯಕರಾಗಿದ್ದಾರೆ. ರೈತ ಯಾವ ಬೆಳೆ ಬೆಳೆಯಬೇಕೆಂಬುದನ್ನು ಇಂದು ಪರೋಕ್ಷವಾಗಿ ಬಹುರಾಷ್ಟ್ರೀಯ ಕಂಪನಿಗಳು ನಿರ್ಧರಿಸುತ್ತಿವೆ. ಏಕೆಂದರೆ ಮಾರುಕಟ್ಟೆಯಲ್ಲಿ ಯಾವ ಬೀಜಗಳು ಲಭ್ಯ ಇವೆ ಎನ್ನುವುದರ

ಮೇಲೆ ಮತ್ತು ಯಾವ ಬೆಳೆಗೆ ಮಾರುಕಟ್ಟೆಯಲ್ಲಿ ಬೆಲೆ ಇದೆ ಎನ್ನುವುದರ ಮೇಲೆ ಬಿತ್ತನೆಯ ಕಾರ್ಯ ನಡೆಯುತ್ತಿದೆ.

ಹೊಲಕ್ಕೆ ಎಷ್ಟು ಆಳು ಹಚ್ಚಬೇಕು. ಅವರಿಂದ ಯಾವ ಕೆಲಸ ಹೇಗೆ ಮಾಡಿಸಬೇಕು ಎನ್ನುವುದರಲ್ಲಿ ಮಹಿಳೆ ಭಾಗಿಯಾಗಿರುತ್ತಾಳೆ. ಏಕೆಂದರೆ ಆಳುಗಳ ಹಿಂದೆ ಹೋಗಿ ಅವರನ್ನು ದುಡಿಸುವವರು ಬಹುಪಾಲು ಮಹಿಳೆಯರೇ ಆಗಿರುತ್ತಾರೆ. ಇದು ನನ್ನ ಮನೆಯ ಬದುಕು. ಹಾಳಾಗಬಾರದು ಎನ್ನುವ ತುಡಿತ ಆ ಮಹಿಳೆಯಲ್ಲಿರುವುದರಿಂದ ಏನೇ ಸಣ್ಣ ಪುಟ್ಟ ತೊಂದರೆಗಳು ಬಂದಾಗಲೂ ಅದನ್ನೆಲ್ಲ ನಿಭಾಯಿಸಿಕೊಂಡು ಆಳಿನ ಜೊತೆ ತಾನು ಒಬ್ಬ ಆಳಾಗಿ ದುಡಿಯುತ್ತಾಳೆ. ಆದರೆ ದುಡಿದ ಆ ಆಳುಗಳಿಗೆ ಕೂಲಿ ಕೊಡುವುದು ಪುರುಷನೇ ಆಗಿರುತ್ತಾನೆ. ಏಕೆಂದರೆ ಕುಟುಂಬದ ಹಣಕಾಸಿನ ವ್ಯವಹಾರಗಳೆಲ್ಲವೂ ಆತನ ಮೂಲಕವೇ ನಡೆಯಲ್ಪಡುತ್ತಿರುತ್ತವೆ.

ಆದರೆ ಹೊಲದಲ್ಲಿ ದುಡಿಯುವ ವಿಷಯ ಬಂದಾಗ ಅಲ್ಲಿ ಮಹಿಳೆಯ ಪಾಲುದಾರಿಕೆ ಅಧಿಕವಾಗಿ ಕಂಡುಬರುತ್ತದೆ. ಇದು ಪ್ರತಿ ಬೆಳೆಯ ಸಂದರ್ಭದಲ್ಲಿ ಯಾರು ಯಾವ ಕೆಲಸ ಮಾಡುತ್ತಾರೆ ಎನ್ನುವ ವಿವರವನ್ನು ಹೊಂದಿರುವ ಈ ಮುಂದೆ ಕೊಡಲಾದ ಕೃಷಿ ಕೆಲಸಗಳು ಮತ್ತು ಅವುಗಳನ್ನು ಮಾಡುವವರ ವಿವರವನ್ನು ತಿಳಿಸುವ ಕೋಷ್ಟಕದಿಂದ ಸ್ಪಷ್ಟವಾಗುತ್ತದೆ.

ಹಾವೇರಿ ಜಿಲ್ಲೆಯ ಬಹುಪಾಲು ಕೃಷಿಕರು ಮಳೆಯಾಧಾರಿತ ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡಿದ್ದು,[೧] ವರ್ಷಕ್ಕೆ ಮುಂಗಾರು ಮತ್ತು ಹಿಂಗಾರು ಎಂದು ಎರಡು ಬೆಳೆ ಬೆಳೆಯುತ್ತಾರೆ. ಹೀಗೆ ಕೃಷಿಕರು ತಾವು ಬೆಳೆ ಬೆಳೆಯುವ ಸಂದರ್ಭದಲ್ಲಿ ಯಾರು ಯಾವ ಕೆಲಸ ಮಾಡುತ್ತಾರೆ? ಅಥವಾ ಕೃಷಿಯಲ್ಲಿ ಮಹಿಳೆ ಯಾವ ಯಾವ ಕೆಲಸಗಳಲ್ಲಿ ಭಾಗಿಯಾಗುತ್ತಾಳೆ ಎನ್ನುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನೀಡಿದ ಮಾಹಿತಿಗಳ ಆಧಾರದ ಮೇಲೆ ಇಲ್ಲಿ ಕೊಡಲಾದ ಪಟ್ಟಿಯನ್ನು ತಯಾರಿಸಲಾಗಿದೆ.

ಬೆಳೆಯ ಹೆಸರು : ಡಿ.ಸಿ.ಹೆಚ್. ಹತ್ತಿ (ಮುಂಗಾರು ಬೆಳೆ)

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಭೂಮಿಯನ್ನು ಉಳುಮೆ ಮಾಡುವುದು. ಅಂದರೆ ಭೂಮಿ ಹಸನುಗೊಳಿಸುವುದು. ರಂಟೆ ಹೊಡೆಯೋದು, ಕುಂಟೆ ಹೊಡೆಯೋದು, ಹೊಲ ಎಳಿಸುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ಹತ್ತಿ ಬೀಜ ಊರುವಾಗ ಸಾಲು ಬಿಡುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೩ | ಸಾಲು ಬಿಟ್ಟ ನಂತರ ಕಾಳು ಊರುವುದು ಮತ್ತು ಗೊಬ್ಬರ ಹಾಕುವುದು. | ಹೆಚ್ಚಾಗಿ ಮಹಿಳೆಯರೇ ಈ ಕೆಲಸವನ್ನು ಮಾಡುವರು. |
| ೪ | ಭೂಮಿಯನ್ನು ಸ್ವಚ್ಛವಾಗಿಡಲು ಅಥವಾ ಭೂಮಿಯಲ್ಲಿ ಹುಲ್ಲು ಹುಟ್ಟಬಾರದೆಂದು ಎಡೆಕುಂಟೆ ಹೊಡೆಯುವರು. | ಸಾಮಾನ್ಯವಾಗಿ ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. ಕೆಲವೆಡೆ ಮಹಿಳೆಯರೂ ಮಾಡುವುದುಂಟು. |
| ೫ | ನಂತರ ಎರಡು ಅಥವಾ ಮೂರು ಸಲ ಕಳೆ ತೆಗೆಯುವರು. | ಮಹಿಳೆಯರು ಮಾತ್ರವೇ ಈ ಕೆಲಸ ನಿರ್ವಹಿಸುವರು. |
| ೬ | ಎರಡು ಅಥವಾ ಮೂರು ಸಲ ಬೆಳೆಗೆ ಎಣ್ಣೆ ಹೊಡೆಯುವರು. (ಕೀಟನಾಶಕ ಸಿಂಪಡಿಸುವುದು.) | ಹೆಚ್ಚಾಗಿ ಪುರುಷರೇ ಈ ಕೆಲಸ ಮಾಡುತ್ತಾರೆ. ಕೆಲವೆಡೆ ಮಹಿಳೆಯರೂ ಈ ಕೆಲಸ ಮಾಡುವರು. |
| ೭ | ನಂತರ ಎರಡು ಸಲ ಗಿಡದ ಬುಡಕ್ಕೆ ನಾಲ್ಕು ಬೆರಳಿನ ಅಂತರ ಬಿಟ್ಟು ಸರ್ಕಾರಿ ಗೊಬ್ಬರ ಹಾಕುವರು. | ಹೆಚ್ಚಾಗಿ ಮಹಿಳೆಯರೇ ಈ ಕೆಲಸ ಮಾಡುವರು. ಈ ಕೆಲಸದಲ್ಲಿ ಪುರುಷರು ಭಾಗಿಯಾಗುವುದು ಅಪರೂಪ. |
| ೮ | ಹತ್ತಿ ಬಿಡಿಸುವುದು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುವರು. ಈ ಕೆಲಸದಲ್ಲಿ ಪುರುಷರು ಭಾಗಿಯಾಗುವುದು ಅಪರೂಪ. |
| ೯ | ಹತ್ತಿ ಕಟ್ಟಿಗೆ ಎಬ್ಬಿಸುವುದು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೦ | ಹತ್ತಿ ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸವನ್ನು ಪುರುಷರು ಮಾತ್ರ ಮಾಡುತ್ತಾರೆ. |

ಬೆಳೆಯ ಹೆಸರು : ಶೇಂಗಾ (ಮುಂಗಾರು ಬೆಳೆ)

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಹೊಲ ಹಸನುಗೊಳಿಸಲು ಬರುವು ಹೊಡೆಯುವರು. ಕುಂಟಿ ಹೊಡೆಯುವರು. | ಹೆಚ್ಚಾಗಿ ಪುರುಷರೇ ಮಾಡಬಹುದಾದ ಕೆಲಸವಿದು. |
| ೨ | ನಂತರ ಹೊಲದಲ್ಲಿ ಕಸಕಡ್ಡಿ ಆರಿಸುವುದು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೩ | ಹೊಲಕ್ಕೆ ತಿಪ್ಪೆಗೊಬ್ಬರ ಹೇರುವುದು ಮತ್ತು ಹೊಲದಲ್ಲಿ ಸೂರು ಮಾಡುವುದು. | ಈ ಕೆಲಸದಲ್ಲಿ ಮಹಿಳೆ ಮತ್ತು ಪುರುಷರಿಬ್ಬರ ಪಾಲುದಾರಿಕೆ ಇರುತ್ತದೆ. |
| ೪ | ಮಳೆ ಆದ ಮೇಲೆ ರಂಟಿ ಹೊಡೆಯುವುದು, ಕುಂಟಿಲೆ ಹರಗುವುದು, ಎಳೆಸುವುದು. | ಹೆಚ್ಚಾಗಿ ಪುರುಷರೇ ಈ ಕೆಲಸವನ್ನು ಮಾಡುವರು. |
| ೫ | ಬೀಜ ಬಿತ್ತುವಾಗ ಗೊಬ್ಬರ ಬಿತ್ತುವುದು. | ಮಹಿಳೆ ಇಲ್ಲವೆ ಪುರುಷರು ಈ ಕೆಲಸ ಮಾಡುವರು. |
| ೬ | ಅಕಡಿ ಬುಕ್ಕದಲ್ಲಿ ಶೇಂಗಾ ಬೀಜ ಬಿತ್ತುವುದು. | ಮಹಿಳೆಯರೇ ಈ ಕೆಲಸ ಮಾಡುವರು. |
| ೭ | ಶೇಂಗಾ ಬಿತ್ತನೆಯಲ್ಲಿ ಹವಿಜ,ಅಲಸಂದಿ, ಗುರೆಳ್ಳು ಸಾಸಿವೆ ಇವುಗಳನ್ನು ಸ್ವಲ್ಪ ಪ್ರಮಾಣದಲ್ಲಿ ಮಿಶ್ರಣ ಮಾಡಿ ಬಿತ್ತುವರು. ಇವುಗಳನ್ನೆಲ್ಲ ಸೇರಿಸಿ ಕೊಡುವವರು. | ಮಹಿಳೆಯರೇ ಈ ಕೆಲಸ ಮಾಡುತ್ತಾರೆ. |
| ೮ | ಬಿತ್ತನೆಯಾದ ೧೫ ದಿನದ ನಂತರ ೮ ದಿನ ಗಳಿಗೊಮ್ಮೆ ಮೂರರಿಂದ ನಾಲ್ಕು ಸಲ ಎಡೆ ಕುಂಟಿ ಹೊಡೆಯುವರು. | ಹೆಚ್ಚಾಗಿ ಪುರುಷರೇ ಈ ಕೆಲಸವನ್ನು ಮಾಡುವರು. ಕೆಲವು ಸಲ ಮಹಿಳೆಯರು ಮಾಡುವರು. |
| ೯ | ನಂತರ ಕಳೆ ತಗೆಯುವುದು. | ಮಹಿಳೆಯರೇ ಈ ಕೆಲಸ ಮಾಡುವರು. |
| ೧೦ | ಮುಂದೆ ೩$^1$/೨ ತಿಂಗಳಿಗೆ ಶೇಂಗಾ ಕಿತ್ತನೆ ಮಾಡುವರು. | ಹೆಚ್ಚಾಗಿ ಈ ಕೆಲಸವನ್ನು ಮಹಿಳೆಯರೇ ಮಾಡುವರು. ಈ ಕೆಲಸವನ್ನು ಪುರುಷರು ಮಾಡುವುದು ವಿರಳ. |
| ೧೧ | ಶೇಂಗಾ ಕಿತ್ತು ಹರಿಸ್ಯಾಲು ಮಾಡಿದ ಮೇಲೆ ಶೇಂಗಾ ಹರೆಯುವರು. | ಹೆಚ್ಚಾಗಿ ಈ ಕೆಲಸವನ್ನು ಮಹಿಳೆಯರೇ ಮಾಡುವರು. ಪುರುಷರು ಮಾಡುವರು. ಆದರೂ ಕಡಿಮೆ. |
| ೧೨ | ಶೇಂಗಾ ತೂರುವುದು. | ಹೆಚ್ಚಾಗಿ ಪುರುಷರೇ ಈ ಕೆಲಸ ಮಾಡುವರು. ಮಹಿಳೆಯರು ಈ ಕೆಲಸ ಮಾಡುವುದು ಅಪರೂಪ. |
| ೧೩ | ರಾಶಿ ಮಾಡಿ ಶೇಂಗಾ ಚೀಲ ತುಂಬಿಕೊಂಡು ಬರುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೪ | ಶೇಂಗಾ ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸ ಮಾತ್ರ ಪುರುಷರದೇ ಆಗಿರುತ್ತದೆ. |

## ಬೆಳೆಯ ಹೆಸರು : ಜೋಳ (ಮುಂಗಾರು ಬೆಳೆ)

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಹೊಲ ಬರುವು ಹೊಡೆಯುವುದು ಅಥವಾ ಕುಂಟಿ ಹೊಡೆಯುವುದು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೨ | ನಂತರ ಹೊಲದಲ್ಲಿ ಕಸಕಡ್ಡಿ ಆರಿಸುವುದು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೩ | ಮಳೆ ಆದ ಮೇಲೆ ರಂಟಿ ಹೊಡೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ಹೊಲ ಹರಗುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೫ | ಹೊಲಕ್ಕೆ ತಿಪ್ಪೆ ಗೊಬ್ಬರ ಹೇರುವುದು ಮತ್ತು ಹೊಲದಲ್ಲಿ ಸೂರು ಮಾಡುವುದು. | ಈ ಕೆಲಸದಲ್ಲಿ ಸ್ತ್ರೀಪುರುಷರಿಬ್ಬರೂ ಮಾಡುವರು. |
| ೬ | ಹೊಲ ಎಳಸುವುದು. | ಈ ಕೆಲಸವನ್ನು ಸಾಮಾನ್ಯವಾಗಿ ಪುರುಷರೇ ಮಾಡುವರು. |
| ೭ | ಜೋಳ ಬಿತ್ತುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೮ | ಅಕ್ಕಡಿ ಕಾಳು ಹಾಕುವವರು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೯ | ಬಿತ್ತುವಾಗ ಸರ್ಕಾರಿ (ರಾಸಾಯನಿಕ) ಗೊಬ್ಬರ ಹಾಕುವವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೦ | ಮುಂದೆ ೧೫ ದಿನದ ನಂತರ ೮ ದಿನಗಳಿಗೊಮ್ಮೆ ೩ ಅಥವಾ ೪ ಮ್ಮೆ ಎಡೆಕುಂಟಿ ಹೊಡೆಯುವರು. | ಹೆಚ್ಚಾಗಿ ಪುರುಷರೇ ಈ ಕೆಲಸವನ್ನು ಮಾಡುವರು. |
| ೧೧ | ನಂತರ ೩$^{1}$/೨ ತಿಂಗಳಿಗೆ ಜೋಳ ಕೊಯ್ಲಿಗೆ ಬಂದಾಗ ತೆನಿ ಕೊಯ್ಯುವರು. | ಮಹಿಳೆ ಮತ್ತು ಪುರುಷರಿಬ್ಬರೂ ಈ ಕೆಲಸದಲ್ಲಿ ಭಾಗಿಯಾಗುವರು. |
| ೧೨ | ತೆನಿ ಹೇರುವುದು. | ಹೆಚ್ಚಾಗಿ ಪುರುಷರೇ ಈ ಕೆಲಸ ಮಾಡುತ್ತಾರೆ. ಮಹಿಳೆ ಈ ಕೆಲಸದಲ್ಲಿ ಭಾಗಿಯಾಗುವುದು ಕಡಿಮೆ. |
| ೧೩ | ಜೋಳದ ಸೊಪ್ಪಿ ಕೊಯ್ಯುವುದು. | ಸ್ತ್ರೀಪುರುಷರಿಬ್ಬರೂ ಈ ಕೆಲಸ ಮಾಡುವರು. |
| ೧೪ | ಸೊಪ್ಪಿ ಪೆಂಡಿಕಟ್ಟಿ ಇಡ್ಲಾ ಹಾಕೋದು. (ಕೂಡಿ ಹಾಕೋದು) | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೫ | ಕಣ ಮಾಡೋದು&ಕಣಕ್ಕೆ ತೆನಿ ಹೇರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೬ | ಜೋಳವನ್ನು ಮಿಶನ್‌ಗೆ ಹಾಕುವುದು. | ಈ ಕೆಲಸದಲ್ಲಿ ಸ್ತ್ರೀಪುರುಷರಿಬ್ಬರೂ ಭಾಗಿಯಾಗುತ್ತಾರೆ. |
| ೧೭ | ಜೋಳ ರಾಶಿ ಕಟ್ಟುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೮ | ಕಣಬ್ಬ (ಕಣದ ಹಬ್ಬ) ಮಾಡುವರು. | ಒಟ್ಟು ಕಣಬ್ಬದ ಪ್ರಕ್ರಿಯೆಯಲ್ಲಿ ಸ್ತ್ರೀ ಪುರುಷರಿಬ್ಬರೂ ಭಾಗಿಯಾಗುವರು. ಅಡುಗೆ, ಪೂಜೆಯ ಕೆಲಸ ಮಹಿಳೆಯರು ಮಾಡಿದರೆ, ಕಣದ ಕೆಲಸವನ್ನೆಲ್ಲ ಪುರುಷರು ಮಾಡುವರು. |
| ೧೯ | ಜೋಳವನ್ನು ಮನೆಗೆ ತರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨೦ | ಬೆಳೆದ ಜೋಳವನ್ನು ಮಾರುಕಟ್ಟೆಗೆ ಒಯ್ಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |

**ಬೆಳೆಯ ಹೆಸರು : ಸಾಂವಿ (ಮುಂಗಾರು ಬೆಳೆ)**

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಮೊದಲು ಹೊಲ ಬರುವು ಹೊಡೆಯುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ನಂತರ ಹೊಲದಲ್ಲಿ ಕಸಕಡ್ಡಿ ಆರಿಸುವುದು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೩ | ಮಳೆಯಾದ ಮೇಲೆ ರಂಟೆ ಹೊಡೆಯುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ಹೊಲ ಹರಗುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೫ | ಹೊಲಕ್ಕೆ ತಿಪ್ಪೆಗೊಬ್ಬರ ಹೇರುವುದು ಮತ್ತು ಗೊಬ್ಬರ ಸೂರು ಮಾಡುವುದು. | ಈ ಕೆಲಸದಲ್ಲಿ ಸ್ತ್ರೀಪುರುಷರಿಬ್ಬರ ಪಾಲು ದಾರಿಕೆಯೂ ಇರುತ್ತದೆ. |
| ೬ | ಹೊಲವನ್ನು ಕುಂಟಿಲೆ ಎಳೆಸುವುದು. | ಈ ಕೆಲಸವನ್ನು ಪುರುಷರು ಇಲ್ಲವೆ ಮಹಿಳೆಯರು ಮಾಡುತ್ತಾರೆ. |
| ೭ | ಮಳೆಯಾದ ನಂತರ ಶೆಡ್ಡಿ ಬಟ್ಟಲಲ್ಲಿ ಸಾಂವಿ ಮತ್ತು ಸರ್ಕಾರಿ ಗೊಬ್ಬರ ಸೇರಿಸಿ ಬಿತ್ತುವರು. | ಈ ಕೆಲಸವನ್ನು ಹೆಚ್ಚಾಗಿ ಪುರುಷರೇ ಮಾಡುವರು. |
| ೮ | ಬಿತ್ತಿ ೧೫ ದಿನದ ನಂತರ ೮ ದಿನಗಳಿಗೊಮ್ಮೆ ೩ ಅಥವಾ ೪ ಸಲ ಎಡೆಕುಂಟೆ ಹೊಡೆಯುವರು. | ಈ ಕೆಲಸವನ್ನು ಹೆಚ್ಚಾಗಿ ಪುರುಷರೇ ಮಾಡುವರು. |
| ೯ | ನಂತರ ಕಳೆ ತೆಗೆಯುವರು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೧೦ | ಸಾಂವಿ ಕೊಯ್ಯುವುದು. | ಈ ಕೆಲಸವನ್ನು ಮಹಿಳೆ ಮತ್ತು ಪುರುಷರಿಬ್ಬರೂ ಮಾಡುತ್ತಾರೆ. |
| ೧೧ | ಸಾಂವಿ ಹುಲ್ಲನ್ನು ನಾಲ್ಕಾರು ದಿನ ಒಣಗಿಸಿ ಬಣವಿ ಹಾಕೋದು. | ಮಹಿಳೆಯರು ಹುಲ್ಲು ಹೊತ್ತು ಕೊಡುವರು, ಪುರುಷರು ಬಣವಿ ಹಾಕುವರು. |
| ೧೨ | ಕಣ ಮಾಡೋದು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೩ | ಸಾಂವಿ ಒಕ್ಕುವುದು.ಅಂದರೆ ಎತ್ತಿನ ರೂಲಿನಿಂದ ಸಾಂವಿ ತುಳಿಸುವುದು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೪ | ನಂತರ ಸಾಂವಿ ತೂರುವುದು, ರಾಶಿ ಮಾಡುವುದು. ರಾಶಿ ತುಂಬಿಕೊಂಡು ಬರೋದು ಮತ್ತು ಬೆಳೆದ ಬೆಳೆಯನ್ನು ಮಾರುಕಟ್ಟೆಗೆ ಒಯ್ಯುವುದು. ಇವೆಲ್ಲ ಕೆಲಸಗಳನ್ನು ಮಾಡುವವರು. | ಈ ಕೆಲಸಗಳನ್ನೆಲ್ಲ ಪುರುಷರೇ ಮಾಡುವರು. |

**ಬೆಳೆಯ ಹೆಸರು : ಭತ್ತ (ಮುಂಗಾರು ಬೆಳೆ)**

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಮೊದಲು ಭತ್ತದ ಹೊಲಕ್ಕೆ ಬೇಸಿಗೆಯಲ್ಲಿ ೨-೩ ಬರುವುಗುಂಟಿ ಹೊಡೆಯುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ಮಳೆಯಾದ ಮೇಲೆ ರಂಟಿ ಹೊಡೆಯುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೩ | ಹೊಲ ಹರಗುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ತಿಪ್ಪೆಗೊಬ್ಬರವನ್ನು ಹೊಲಕ್ಕೆ ಹೇರುವುದು. | ಇಲ್ಲಿ ಪುರುಷರು ಪ್ರಧಾನ ಪಾತ್ರವಹಿಸಿದರೂ ಗೊಬ್ಬರ ಹೊತ್ತುಕೊಡುವಲ್ಲಿ ಮಹಿಳೆಯರ ಪಾಲುದಾರಿಕೆ ಇರುತ್ತದೆ. |
| ೫ | ತಿಪ್ಪೆಗೊಬ್ಬರ ಹೊಲದಲ್ಲಿ ಸೂರು ಮಾಡುವುದು. | ಈ ಕೆಲಸದಲ್ಲಿ ಸ್ತ್ರೀಪುರುಷರಿಬ್ಬರ ಪಾಲುದಾರಿಕೆಯೂ ಇರುತ್ತದೆ. |
| ೬ | ಮಳೆಯಾದಾಗ ಎತ್ತಿನ ಗಳೇಲೆ ಕೊರದು ಹೊಡೆಯುವುದು. | ಈ ಕೆಲಸವನ್ನು ಪುರುಷರು ಮಾಡುತ್ತಾರೆ. |
| ೭ | ನಂತರ ೨-೩ ಬಾರಿ ಹೊಲ ಎಳೆಸುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೮ | ಹಾಳಿ ಬದುವು ಕೆತ್ತುವುದು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೯ | ಹಾಳಿ ಬದುವಿಗೆ ಮಣ್ಣು ಹಾಕುವುದು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೦ | ಮಳೆಯಾದ ನಂತರ ಸರ್ಕಾರಿ ಗೊಬ್ಬರ ಮತ್ತು ಭತ್ತವನ್ನು ಮಿಶ್ರಣ ಮಾಡಿ ಕೂರಿಗೆಗೆ ಶೆಡ್ಡಿ ಬಟ್ಟಲು ಕಟ್ಟಿ ಬಿತ್ತುವರು. | ಹೆಚ್ಚಾಗಿ ಪುರುಷರೇ ಈ ಕೆಲಸವನ್ನು ಮಾಡುತ್ತಾರೆ. |
| ೧೧ | ಇದರ ಹಿಂದೆ ಬಳಗುಂಟಿ ಹೊಡೆಯುವರು.ಅಂದರೆ ಮಣ್ಣುಮುಚ್ಚುವರು ಅಥವಾ ಸಾಲು ಮುಚ್ಚುವರು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೨ | ಬೀಜ ಬಿತ್ತಿ ೧೫ ದಿನಗಳ ನಂತರ ೮ ದಿನಗಳಿಗೊಮ್ಮೆ ೩ ಅಥವಾ ೪ ಸಲ ಎಡೆ ಕುಂಟಿ ಹೊಡೆಯುವರು. | ಈ ಕೆಲಸವನ್ನು ಹೆಚ್ಚಾಗಿ ಪುರುಷರೇ ಮಾಡುತ್ತಾರೆ. |
| ೧೩ | ಕಳೆ ತೆಗೆಯುವರು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುತ್ತಾರೆ. |
| ೧೪ | ಹೊಲಕ್ಕೆ ನೀರು ಬಿಡುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೫ | ನಂತರ ನೀರು ಕೊರದು ಹೊಡೆಯುವವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೬ | ಭತ್ತದ ಹಾಳಿಗೆ ನೀರು ನಿಲ್ಲಲು ಹಾಳಿಯ ಬದುವಿಗೆ ರಾಡಿ ಮೆತ್ತುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೭ | ಸರ್ಕಾರಿ ಗೊಬ್ಬರ ಹೊಲದಲ್ಲಿ ಸೂರು ಮಾಡುವರು. | ಹೆಚ್ಚಾಗಿ ಪುರುಷರೇ ಈ ಕೆಲಸ ಮಾಡುತ್ತಾರೆ. |
| ೧೮ | ನಂತರ ೩<sup></sup>೧/೨ ತಿಂಗಳಿಗೆ ಭತ್ತ ಕೊಯ್ಯುವುದು. | ಈ ಕೆಲಸವನ್ನು ಸ್ತ್ರೀ-ಪುರುಷರಿಬ್ಬರೂ ಮಾಡುತ್ತಾರೆ. |
| ೧೯ | ಮೆದಿ ಹಾಕೋದು ಕೊಯ್ದ ಭತ್ತದ ಹುಲ್ಲನ್ನು ಎತ್ತಿ ಸರುವಿಗೆ ಹಾಕೋದು. | ಮಹಿಳೆಯರೇ ಈ ಕೆಲಸವನ್ನು ಮಾಡುವರು. |
| ೨೦ | ನಾಲ್ಕೈದು ದಿನದ ನಂತರ ಹುಲ್ಲು ಒಣಗಿದ ಮೇಲೆ ಹೊರೆ ಕಟ್ಟುವುದು. | ಹೆಚ್ಚಾಗಿ ಮಹಿಳೆಯರೇ ಈ ಕೆಲಸವನ್ನು ಮಾಡುತ್ತಾರೆ. |
| ೨೧ | ಹುಲ್ಲಿನ ಹೊರೆ ಕಟ್ಟಿದ ಮೇಲೆ ಬಣವಿ ಹಾಕೋದು. | ಬಣವಿ ಒಟ್ಟುವವರು ಪುರುಷರೆ ಆಗಿದ್ದರೂ ಹುಲ್ಲಿನ ಹೊರೆಯನ್ನು ಹೊತ್ತುಕೊಡುವಲ್ಲಿ ಮಹಿಳೆಯರ ಪಾತ್ರವಿದೆ. |
| ೨೨ | ಕಣ ಮಾಡೋದು, ಭತ್ತ ತುಳಿಸೋದು, ಭತ್ತ ತೂರುವುದು, ರಾಶಿ ಕಟ್ಟುವುದು. | ಈ ಎಲ್ಲ ಕೆಲಸಗಳನ್ನು ಪುರುಷರೇ ಮಾಡುವರು. |
| ೨೩ | ಕಣಬ್ಬ ಮಾಡುವರು. | ಸ್ತ್ರೀ-ಪುರುಷರಿಬ್ಬರೂ ಒಟ್ಟು ಸೇರಿ ಕಣಬ್ಬ ಮಾಡುವರು. ಆ ಮೂಲಕ ಬೆಳೆ ಬಂದ ಸಂಭ್ರಮವನ್ನು ಆಚರಿಸುವರು. |
| ೨೪ | ಭತ್ತವನ್ನು ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸವನ್ನು ಪುರುಷರೇ ನಿರ್ವಹಿಸುವರು. |

**ಬೆಳೆಯ ಹೆಸರು : ನಾಟಿ ಮಾಡಿ ಹಚ್ಚುವ ಭತ್ತ**

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಭತ್ತದ ಹೊಲಕ್ಕೆ ಮೊದಲು ನೀರು ಬಿಡುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ನಂತರ ಹೊಲಕ್ಕೆ ನೀರು ಕಟ್ಟುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೩ | ನೀರೊಳಗೆ ರಂಟೆ ಹೊಡೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ನಂತರ ನೀರುಕೊರಡು ಹೊಡೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೫ | ಭತ್ತದ ಹಾಳಿಯಲ್ಲಿನ ನೀರು ತಗೆದ ನಂತರ ನಾಟಿ ಹಚ್ಚುವುದು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |

ಇದಕ್ಕೂ ಮೊದಲು ನಾಟಿ ಮಾಡಿಕೊಂಡಿರುತ್ತಾರೆ. ನಾಟಿ ಹಚ್ಚುವ ನಲವತ್ತು ದಿನಗಳಿಗೆ ಮುಂಚೆಯೇ ನೆಲ ಕೊಚ್ಚಿ ಹಗುರ ಮಾಡಿ ಭತ್ತದ ಅಗಿ ಹಾಕಿ ಎರಡು ದಿನಗಳಿಗೊಮ್ಮೆ ನೀರು ಹಾಕಿಕೊಂಡಿದ್ದು ಭತ್ತದ ಮಡಿ ಮಾಡುವರು. ಅದು ನಾಟಿ ಮಾಡುವ ಹದಕ್ಕೆ ಬಂದಾಗ ಭತ್ತದ ಸಸಿಯನ್ನು ನಾಟಿ ಮಾಡುವರು. ನಂತರ ಮಾಮೂಲು ಭತ್ತ ಬೆಳೆಯುವಾಗ ಮಾಡಬಹುದಾದ ಎಲ್ಲ ಚಟುವಟಿಕೆಗಳನ್ನು ಇಲ್ಲಿ ಕೂಡಾ ಮಾಡುವರು. ಆದರೆ ನಾಟಿ ಭತ್ತ ಬೆಳೆಯುವಾಗ ಭತ್ತ ಕೊಯ್ಯುವವರೆಗೂ ಗದ್ದೆಯಲ್ಲಿ ನೀರನ್ನು ಇರಿಸಲಾಗಿರುತ್ತದೆ.

ಇಲ್ಲಿ ನಾಟಿ ಮಾಡುವ ಕೆಲಸವನ್ನು ಪ್ರಧಾನವಾಗಿ ಮಹಿಳೆಯರೇ ಮಾಡುವರು. ಮೇಲುನೋಟಕ್ಕೆ ಮಹಿಳೆಯು ನಿರ್ವಹಿಸುವ ಕೆಲಸ ಕಡಿಮೆ ಎನಿಸಿದರೂ ಬಗ್ಗಿ ನಾಟಿ ಮಾಡುವುದು ತುಂಬಾ ಶ್ರಮದಾಯಕ ಕೆಲಸವಾಗಿದೆ. ಸತತವಾಗಿ ಸೊಂಟ ಬಗ್ಗಿಸಿಕೊಂಡು ಮಾಡುವ ಈ ರೀತಿಯ ಕೆಲಸಗಳನ್ನು ಪುರುಷರಿಂದ ಮಾಡಲಿಕ್ಕಾಗದು. ಹಾಗಾಗಿ ಇದು ಹೆಚ್ಚಾಗಿ ಮಹಿಳೆಯರಿಂದಲೇ ಮಾಡಲ್ಪಡುವ ಕೆಲಸವಾಗಿದೆ.

ಬೆಳೆಯು ಹೆಸರು : ಗೋವಿನ ಜೋಳ (ಮುಂಗಾರು ಬೆಳೆ)

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಮೊದಲು ೨-೩ ಸಲ ಹೊಲವನ್ನು ಬರುವು ಹೊಡೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ಹೊಲದಲ್ಲಿನ ಕಸಕಡ್ಡಿ ಆರಿಸುವುದು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೩ | ಮಳೆಯಾದ ಮೇಲೆ ರಂಟೆ ಹೊಡೆಯುವುದು ಹಾಗೂ ಹರಗುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ಹೊಲಕ್ಕೆ ತಿಪ್ಪೆಗೊಬ್ಬರವನ್ನು ಹೇರುವುದು. | ಇಲ್ಲಿ ಪುರುಷರು ಪ್ರಧಾನ ಪಾತ್ರವಹಿಸಿದರೂ ಗೊಬ್ಬರ ಹೊತ್ತುಕೊಡುವಲ್ಲಿ ಮಹಿಳೆಯರ ಪಾಲುದಾರಿಕೆ ಇದೆ. |
| ೫ | ತಿಪ್ಪೆಗೊಬ್ಬರ ಹೊಲದಲ್ಲಿ ಸೂರು ಮಾಡುವುದು. | ಈ ಕೆಲಸದಲ್ಲಿ ಸ್ತ್ರೀಪುರುಷರಿಬ್ಬರೂ ಭಾಗಿಯಾಗುವರು. |
| ೬ | ಬೀಜ ಬಿತ್ತುವ ಮೊದಲು ಡಾಯಾ ಬಿಡುವರು ಅಥವಾ ರಂಟೆಲೆ ಸಾಲು ಬಿಡುವರು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೭ | ಬಿತ್ತುವ ಸರ್ಕಾರಿ ಗೊಬ್ಬರದಲ್ಲಿ ಅಲಸಂದಿ,ಸೂರ್ಯ ಪಾನ ಮಿಶ್ರಣ ಮಾಡಿ ಅಕಡಿ ಬುಕ್ಕಾದಿಂದ ಬಿತ್ತುವರು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುವರು. |
| ೮ | ಗೋವಿನಜೋಳವನ್ನು ಉಡಿಯಲ್ಲಿ ಹಾಕಿಕೊಂಡು ರಂಟೆ ಸಾಲಿನಲ್ಲಿ ಹಾಕುತ್ತಾ ಬರುತ್ತಾರೆ. | ಈ ಕೆಲಸವನ್ನು ಮಹಿಳೆಯರೇ ಮಾಡುತ್ತಾರೆ. |
| ೯ | ಬಿತ್ತಿದ ೧೫ ದಿನಗಳ ನಂತರ ೮ ದಿನಗಳಿಗೊಮ್ಮೆ ಸುಮಾರು ನಾಲ್ಕೈದು ಸಲ ಎಡೆಕುಂಟೆ ಹೊಡೆಯುತ್ತಾರೆ. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೦ | ನಂತರ ಕಳೆ ತೆಗೆಯುವರು, ಕಳೆಗುಡ್ಡಿ ಹಾಕುವರು. | ಈ ಕೆಲಸವನ್ನು ಮಹಿಳೆಯರೇ ಮಾಡುತ್ತಾರೆ. |
| ೧೧ | ಕೆಲವರು ಸರ್ಕಾರಿ ಗೊಬ್ಬರ ಉಗ್ಗುವರು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೨ | ಇಲ್ಲವೆ ಕೆಲವೊಮ್ಮೆ ಸರ್ಕಾರಿ ಗೊಬ್ಬರವನ್ನು ಗಿಡದ ಬಡ್ಡಿಗೆ ನಾಲ್ಕು ಬಟ್ಟಿನ ಅಂತರ ಬಿಟ್ಟು ಹಾಕುವರು. | ಈ ಕೆಲಸವನ್ನು ಮಹಿಳೆಯರೇ ಮಾಡುತ್ತಾರೆ. |
| ೧೩ | ಮುಂದೆ ೩½ ತಿಂಗಳಿಗೆ ಗೋವಿನ ಜೋಳದ ತೆನಿ ಮುರಿಯುವುದು. | ಮಹಿಳೆಯರು ಮತ್ತು ಪುರುಷರು ಇಬ್ಬರೂ ಈ ಕೆಲಸವನ್ನು ಮಾಡುತ್ತಾರೆ. |
| ೧೪ | ನಂತರ ಜೋಳದ ತೆನಿ ಹೇರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೫ | ಸೊಪ್ಪಿ ಕೊಯ್ಯುವುದು. | ಈ ಕೆಲಸವನ್ನು ಸ್ತ್ರೀ-ಪುರುಷರಿಬ್ಬರೂ ಮಾಡುವರು. |
| ೧೬ | ಸೊಪ್ಪಿ ಪೆಂಡಿ ಕಟ್ಟುವುದು. | ಈ ಕೆಲಸವನ್ನು ಸ್ತ್ರೀ-ಪುರುಷರಿಬ್ಬರೂ ಮಾಡುವರು. |
| ೧೭ | ಸೊಪ್ಪಿ ಕೂಡಿ ಹಾಕೋದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೮ | ಕಣ ಮಾಡೋದು | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೯ | ಕಣಕ್ಕೆ ತೆನಿ ಹೇರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨೦ | ಮೂರ್ನಾಲ್ಕು ದಿನದ ನಂತರ ತೆನಿ ಒಣಗಿದ ಮೇಲೆ ಮಿಷನ್ನಿಗೆ ಹಾಕಿಸುವುದು. | ಈ ಕೆಲಸವನ್ನು ಸ್ತ್ರೀ-ಪುರುಷರಿಬ್ಬರೂ ಸೇರಿ ಮಾಡುವರು. |
| ೨೧ | ರಾಶಿ ಮಾಡುವುದು. | ಈ ಕೆಲಸವನ್ನು ಪುರುಷರು ಮಾತ್ರವೇ ಮಾಡುವರು. |
| ೨೨ | ಗೋವಿನ ಜೋಳವನ್ನು ಮನೆಗೆ ತರುವುದು. | ಈ ಕೆಲಸವನ್ನು ಪುರುಷರು ಮಾಡುವರು. |
| ೨೩ | ಬೆಳೆದ ಬೆಳೆಯನ್ನು ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸವನ್ನು ಪುರುಷರೇ ನಿರ್ವಹಿಸುವರು. |

**ಬೆಳೆಯ ಹೆಸರು : ಮೆಣಸಿನ ಗಿಡ (ಮುಂಗಾರು ಬೆಳೆ)**

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಹೊಲವನ್ನು ಬರುವುಗುಂಟಿ ಹೊಡೆಯುವುದು. ಮಳೆ ಯಾದ ಮೇಲೆ ರಂಟಿ ಹೊಡೆಯುವುದು ಹರಗುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ತಿಪ್ಪೆ ಗೊಬ್ಬರ ಹೇರುವರು. | ತಿಪ್ಪೆಗೊಪ್ಪರ ಹೇರುವಾಗ ಗೊಬ್ಬರ ಹೊತ್ತು ಕೊಡುವಲ್ಲಿ ಮಹಿಳೆಯರ ಪಾತ್ರವಿದೆ. |
| ೩ | ತಿಪ್ಪೆಗೊಬ್ಬರ ಹೊಲದಲ್ಲಿ ಸೂರು ಮಾಡುವುದು. | ಈ ಕೆಲಸವನ್ನು ಸ್ತ್ರೀ-ಪುರುಷರಿಬ್ಬರೂ ಮಾಡುವರು. |
| ೪ | ಡಾಯಾದ ಕೂರಿಗೆಯಿಂದ ಡಾಯಾ ಬಿಡುವರು ಅಥವಾ ಸಾಲು ಬಿಡುವರು. | ಈ ಕೆಲಸವನ್ನು ಹೆಚ್ಚಾಗಿ ಪುರುಷರೇ ಮಾಡುವರು. |
| ೫ | ನಂತರ ಅಗಿ ಹಚ್ಚುವರು (ಮಳೆ ಆಗಿದ್ರೆ ಹಾಗೆ ಮಣ್ಣು ತೆಗೆದು ಅಗಿ ಹಚ್ಚುತ್ತಾರೆ. ಮಳೆ ಇರದಿದ್ರೆ ಗುಣಿ ಯಲ್ಲಿ ನೀರು ಹಾಕಿ ಅಗಿ ಹಚ್ಚುವರು.) | ಈ ಕೆಲಸದಲ್ಲಿ ಸ್ತ್ರೀ-ಪುರುಷರಿಬ್ಬರೂ ಭಾಗಿಯಾಗುವರು. |
| ೬ | ಮೆಣಸಿನ ಹಣ್ಣು ಹರೆಯುವರು. | ಈ ಕೆಲಸವನ್ನು ಸ್ತ್ರೀ-ಪುರುಷರಿಬ್ಬರೂ ಮಾಡುವರು. |
| ೭ | ಮೆಣಸಿನ ಹಣ್ಣು ಮನೆಗೆ ತರುವುದು. | ಹಣ್ಣು ಬಿಡಿಸಿ ಚೀಲ ತುಂಬುವವರೆಗೂ ಮಹಿಳೆ ಭಾಗಿಯಾಗಿರುತ್ತಾರೆ. ನಂತರ ತುಂಬಿದ ಚೀಲವನ್ನು ಮನೆಗೆ ತಲುಪಿಸುವವರು ಪುರುಷರೇ ಆಗಿರುತ್ತಾರೆ. |
| ೮ | ಮೆಣಸಿನ ಹಣ್ಣು ಒಣಗಿಸುವುದು. | ಈ ಕೆಲಸವನ್ನು ಸ್ತ್ರೀ-ಪುರುಷರಿಬ್ಬರೂ ಮಾಡುವರು. |
| ೯ | ಹಣ್ಣು ಒಣಗಿದ ಮೇಲೆ ಬಿಳಿಗಾಯಿ ಆರಿಸುವುದು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೧೦ | ಬೆಳೆಯನ್ನು ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೧೧ | ಮೆಣಸಿನ ಕಟ್ಟಿಗೆ ಕೀಳೋದು. | ಈ ಕೆಲಸವನ್ನು ಸ್ತ್ರೀ-ಪುರುಷರಿಬ್ಬರೂ ಸೇರಿ ಮಾಡುವರು. |

**ಬೆಳೆಯ ಹೆಸರು : ಕುಸುಬಿ (ಹಿಂಗಾರು ಬೆಳೆ)**

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಮುಂಗಾರು ಬೆಳೆಯ ಶೇಂಗಾ ಕಿತ್ತಿದ ನಂತರ ಹೊಲವನ್ನು ಕುಂಟೀಲೆ ಹೊಡೆದು, ರಂಟಿಲೆ ಹರಗುವರು ಅಥವಾ ಎಳಸುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ನಂತರ ಮಳೆಯಾದ ಮೇಲೆ ಬೀಜದಲ್ಲಿ ಸರ್ಕಾರಿ ಗೊಬ್ಬರ ಸೇರಿಸಿ ರಂಟಿಗೆ ಅಕ್ಕಡಿ ಬುಕ್ಕಕಟ್ಟಿ ಬಿತ್ತುವರು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೩ | ಬೀಜ ಬಿತ್ತಿ ೧೫-೨೦ ದಿನದ ನಂತರ ೮ ದಿನ ಗಳಿಗೊಮ್ಮೆ ೨ ಅಥವಾ ೩ ಸಲ ಎಡೆಕುಂಟೆ ಹೊಡೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ನಂತರ ಕಳೆ ತೆಗೆಯುವರು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೫ | ಬೆಳೆಗೆ ಕೀಡಿ, ಸೀರು ಅಥವಾ ಹುಳ ಹತ್ತಿದರೆ ಎಣ್ಣೆ ಹೊಡೆಯುವರು. (ಕೀಟನಾಶಕ ಸಿಂಪಡಿಸುವುದು.) | ಈ ಕೆಲಸವನ್ನು ಹೆಚ್ಚಾಗಿ ಪುರುಷರೇ ಮಾಡುವರು. |
| ೬ | ನಂತರ ೩½ ತಿಂಗಳಿಗೆ ರಾತ್ರಿ ತಂಪಿನಲ್ಲಿ ಅಥವಾ ಮುಂಜಾವಿನಲ್ಲಿ ಕುಸುಬಿ ಕೊಯ್ಯುವರು. | ಈ ಕೆಲಸವನ್ನು ಮಹಿಳೆಯರು ಮತ್ತು ಪುರುಷರಿಬ್ಬರೂ ಮಾಡುವರು. |
| ೭ | ಕೊಯ್ದ ಕುಸುಬಿಯನ್ನು ಕಣಕ್ಕೆ ಹಾಕಿ ರೋಲ ನಿಂದ ಅಥವಾ ಟ್ರ್ಯಾಕ್ಟರಿನಿಂದ ತುಳಿಸುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೮ | ಕುಸುಬಿ ತೂರುವುದು, ಚೀಲ ತುಂಬಿಕೊಂಡು ಮನೆಗೆ ತರುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೯ | ಕೊನೆಗೆ ಬೆಳೆಯನ್ನು ಮಾರುಕಟ್ಟೆಗೆ ಒಯ್ಯುವವರು. | ಈ ಕೆಲಸವನ್ನು ಪುರುಷರೇ ಮಾಡುವರು. |

ಸಾಮಾನ್ಯವಾಗಿ ಸಾಂವಿ ಬೆಳೆದ ಹೊಲದಲ್ಲಿ ಹುರುಳಿ ಬೆಳೆಯುವರು. ಮುಂಗಾರು ಬೆಳೆ ಸಾಂವಿ ಹೊಡಿ ಹಿಡಿಯುವಾಗ ಅಥವಾ ಸಾಂವಿಯು ತೆನಿ ಬಿಡುವಾಗ ಕ್ರಮವಾಗಿ ಸಾಂವಿಯ ಎರಡು ಸಾಲಿನ ನಡುವೆ ಹುರುಳಿ ಬಿತ್ತುವರು.

**ಬೆಳೆಯ ಹೆಸರು : ಹುರುಳಿ ಬೆಳೆ (ಹಿಂಗಾರು ಬೆಳೆ)**

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಮೊದಲು ರಂಟೆಲೆ ಗೆರಿ ಮಾಡುವರು. (ಸಾಲು ಮಾಡುವರು.) | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ರಂಟಿಯ ಹಿಂದೆಯೇ ಅಕಡಿಬುಕ್ಕಾ ಕಟ್ಟಿ, ಆ ಅಕಡಿ ಬುಕ್ಕಾದಿಂದ ಬೀಜವನ್ನು ಸರ್ಕಾರಿ ಗೊಬ್ಬರದೊಂದಿಗೆ ಮಿಶ್ರಣ ಮಾಡಿ ಬಿತ್ತುವರು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುವರು. |
| ೩ | ನಂತರ ಹಿಂದೆ ಬೀಜ ಮುಚ್ಚುವುದಕ್ಕೆ ಎಡೆಕುಂಟಿ ಹೊಡೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪. | ಮುಂಗಾರು ಬೆಳೆಯಾಗಿ ಸಾಂವಿಯ ಕೊಯ್ಲು ಆದ ನಂತರ ಎಡೆಕುಂಟಲೆ ೨ ಅಥವಾ ೩ ಸಲ ಕೋಲಿ ತೆಗೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೫ | ಸಾಂವಿ ಹೊಲದಲ್ಲಿನ ಕಸಕಡ್ಡಿ ಕೊಯ್ಯುವುದು. ಮತ್ತು ಅದನ್ನು ಕೂಡಿ ಹಾಕುವುದು. | ಈ ಕೆಲಸದಲ್ಲಿ ಹೆಚ್ಚಾಗಿ ಮಹಿಳೆಯರೇ ಮಾಡುವರು. |
| ೬ | ನಂತರ ೩ ೧/೨ ತಿಂಗಳಿಗೆ ಹುರುಳಿಯನ್ನು ಕೊಯ್ಯುವರು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುವರು. |
| ೭ | ಕಣ ಮಾಡುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೮ | ಹುರುಳಿಯನ್ನು ಕಣಕ್ಕೆ ಹೇರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೯ | ಹುರುಳಿ ಒಕ್ಕಲು ಮಾಡುವುದು ಅಥವಾ ತುಳಿಸುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೦ | ಹುರುಳಿ ತೂರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೧ | ರಾಶಿ ಮಾಡುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೨. | ನಂತರ ಹುರುಳಿಯನ್ನು ತುಂಬಿಕೊಂಡು ಮನೆಗೆ ತರುವರು. | ಈ ಕೆಲಸದಲ್ಲಿ ಮಹಿಳೆ ಹುರುಳಿ ತುಂಬುವ ಮತ್ತು ಹೊತ್ತು ಹಾಕುವ ಕ್ರಿಯೆಯಲ್ಲಿ ಭಾಗಿ ಯಾಗುತ್ತಾಳೆ. ನಂತರ ಕಣದಿಂದ ಬೆಳೆಯನ್ನು ಮನೆಗೆ ತಂದು ಹಾಕುವವರು ಪುರುಷರೇ ಆಗಿದ್ದಾರೆ. |
| ೧೩ | ಈ ಬೆಳೆಯನ್ನು ಮಾರುಕಟ್ಟೆಗೆ ಒಯ್ಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |

**ಬೆಳೆಯ ಹೆಸರು : ಜೈದರ ಹತ್ತಿ (ಹಿಂಗಾರು ಬೆಳೆ)**

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಮೊದಲು ಕುರ್ಚಿಗಿಲೆ ಗುಣಿ ಮಾಡುವರು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುವರು. |
| ೨ | ನಂತರ ಬೀಜ ಹಾಕಿ ಮಣ್ಣು ಮುಚ್ಚುವರು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುವರು. |
| ೩. | ಹತ್ತಿ ಹುಟ್ಟಿದ ೧೫ ದಿನಕ್ಕೆ ಎಡೆಕುಂಟೆ ಹೊಡೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ಕಳೆ ತೆಗೆಯುವರು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೫ | ನಂತರ ೩$^1$/೨ ತಿಂಗಳಿಗೆ ಹತ್ತಿ ಬಿಡಿಸುವರು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುವರು. |
| ೬ | ಹತ್ತಿಯನ್ನು ಮನೆಗೆ ತಂದು ಅಂಡಿಗಿ ತುಳಿಯುವರು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. ಆದರೂ ಅಂಡಿಗಿ ತುಳಿಯುವಾಗ ಹತ್ತಿಯನ್ನು ಹೊತ್ತುಕೊಡುವಲ್ಲಿ ಮಹಿಳೆಯರು ಭಾಗವಹಿಸುತ್ತಾರೆ. |
| ೭ | ಹತ್ತಿಯನ್ನು ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೮ | ಹತ್ತಿ ಕಟ್ಟಿಗೆಯನ್ನು ಗಳೆ ಹಿಡಿದು ಕೀಳುವವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೯ | ಗಳೆಯ ಹಿಂದೆ ಕಟ್ಟಿಗೆಯನ್ನು ಆರಿಸುವುದು. | ಈ ಕೆಲಸವನ್ನು ಸಾಮಾನ್ಯವಾಗಿ ಮಹಿಳೆಯರೇ ಮಾಡುವರು. |

(ಈ ಹತ್ತಿಯನ್ನು ಹುಬ್ಬಿ ಮಳೆಗೆ ಬಿತ್ತುವರು. ಮುಂಗಾರಿ ಬೆಳೆ ಮೆಣಸಿನ ಗಿಡದಲ್ಲೂ ಈ ಬೆಳೆ ಹಾಕುವರು. ಇದನ್ನು ಹೆಚ್ಚಾಗಿ ಕಪ್ಪು ಮಣ್ಣಿನಲ್ಲಿ ಬೆಳೆಯುವರು. ಹತ್ತಿ ಬೀಜ ಹಾಕುವಾಗ, ಕ್ರಮವಾಗಿ ಎರಡು ಮೆಣಸಿನ ಗಿಡದ ನಡುವೆ ಎರಡು ಕಾಳು 'ಜೈದರ್' ಹತ್ತಿ ಬೀಜ ಹಾಕುವರು.)

**ಬೆಳೆಯ ಹೆಸರು : ಗೋಧಿ (ಹಿಂಗಾರು ಬೆಳೆ)**

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಶೇಂಗಾ ಕಿತ್ತಿದ ಹೊಲಕ್ಕೆ ರಂಟಿ ಹೊಡೆದು ಕುಂಟಿಲೆ ಹರಗಿ ಅಥವಾ ಎಳೆಸಿ ಮಳೆಯಾದ ನಾಲ್ಕು ದಿನಕ್ಕೆ ತಾಳಿನ ಕೂರಿಗೆಯಿಂದ ಬಿತ್ತುವರು. ಕೂರಿಗೆಗೆ ಶೆಡ್ಡಿ ಬಟ್ಟಲು ಕಟ್ಟಿ, ನಡಕ್ಕೆ ಬೀಜದ ಉಡಿ ಕಟ್ಟಿಕೊಂಡು ಶೆಡ್ಡಿ ಬಟ್ಟಲಲ್ಲಿ ಬಿತ್ತುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ನಂತರ ೩½ ತಿಂಗಳಿಗೆ ಬೆಳೆ ಬರುತ್ತದೆ. ಆಗ ಗೋಧಿ ಹುಲ್ಲು ಕಿತ್ತು ಸಿವುಡು ಕಟ್ಟುವರು. | ಈ ಕೆಲಸದಲ್ಲಿ ಸ್ತ್ರೀ-ಪುರುಷರಿಬ್ಬರೂ ಭಾಗಿಗಳಾಗುವರು. |
| ೩ | ನಂತರ ಗೋಧಿ ಹುಲ್ಲಿನ ಸಿವುಡನ್ನು ಕಣಕ್ಕೆ ಹೇರಿಕೊಂಡು ಬಂದು ಬಣವಿ ಹಾಕುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ಹುಲ್ಲಿನ ಬಡ್ಡಿ ಬಡೆದು ಮಣ್ಣು ಬೀಳಿಸುವರು. | ಈ ಕೆಲಸವನ್ನು ಮಹಿಳೆ, ಪುರುಷರಿಬ್ಬರೂ ಮಾಡುವರು. |
| ೫ | ಆಮೇಲೆ ಗೋಧಿಯನ್ನು ತುಳಿಸುವರು. ಇಲ್ಲವೆ ಮಿಷನ್ನಿಗ ಹಾಕಿಸುವರು. | ಗೋಧಿ ತುಳಿಸುವುದಾದರೆ ಆ ಕೆಲಸವನ್ನು ಪುರುಷರೇ ಮಾಡುತ್ತಾರೆ. ಒಂದು ವೇಳೆ ಮಿಷನ್ನಿಗೆ ಹಾಕಿಸುವುದಾದರೆ ಅಲ್ಲಿ ಗೋಧಿ ಹೊತ್ತು ಕೊಡುವಲ್ಲಿ ಮಹಿಳೆಯ ಪಾಲುದಾರಿಕೆ ಇರುತ್ತದೆ. |
| ೬ | ಗೋಧಿ ತುಳಿಸಿ ತೂರುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೭ | ರಾಶಿ ಮಾಡಿ, ರಾಶಿ ಪೂಜೆ ಮಾಡಿಕೊಂಡು ಗೋಧಿ ತುಂಬಿಕೊಂಡು ಮನೆಗೆ ತರುವರು. | ಈ ಕೆಲಸವನ್ನು ಪುರುಷರೇ ಮಾಡುತ್ತಾರೆ. |
| ೮ | ಬೆಳೆದ ಬೆಳೆಯನ್ನು ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |

**ಬೆಳೆಯ ಹೆಸರು : ಕಡ್ಲಿ (ಹಿಂಗಾರು ಬೆಳೆ)**

| ಕ್ರ. ಸಂ | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಕಡ್ಲಿ ಬಿತ್ತುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ಬಿತ್ತಿದ ಮೇಲೆ ಬೆಳೆ ಸಾಲು ಮಾಡುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೩ | ಮುಂದೆ ೩<sup>1</sup>/೨ ತಿಂಗಳಿಗೆ ಕಡ್ಲಿ ಕೀಳುವರು. (ತಂಪತ್ತಿನಲ್ಲಿ ಮಾತ್ರ ಈ ಕೆಲಸ ಮಾಡುವರು.) | ಈ ಕೆಲಸದಲ್ಲಿ ಸ್ತ್ರೀಪುರುಷರಿಬ್ಬರೂ ಭಾಗಿಗಳಾಗುವರು. |
| ೪ | ಕಿತ್ತ ಕಡ್ಲಿಯನ್ನು ಕಣಕ್ಕೆ ಹೇರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೫ | ಕಣದಲ್ಲಿ ಕಡ್ಲಿ ಬುಡ್ಡಿ ಒಣಗಿಸಿ ಎತ್ತಿನಿಂದ ರೂಲು ಹೊಡೆದು ಇಲ್ಲವೆ ಮಿಷನ್ನಿಗೆ ಹಾಕಿಸಿ ಕಡ್ಲಿಯನ್ನು ಸಿಪ್ಪೆಯಿಂದ ಬೇರ್ಪಡಿಸುವರು. | ಈ ಕೆಲಸದಲ್ಲಿ ಮಹಿಳೆ ಮತ್ತು ಪುರುಷರಿಬ್ಬರ ಪಾತ್ರವೂ ಮಹತ್ವದ್ದು. ಕಡ್ಲಿಯನ್ನು ಮಿಶನ್ನಿಗೆ ಹಾಕಿಸುವುದಾಗಲಿ ಅಥವಾ ರೋಲ್‌ನಿಂದ ತುಳಿಸುವುದಾಗಲಿ ಪುರುಷನಾದರೂ ಇಲ್ಲಿ ಕೈಕೆಲಸ ಮಾಡುವವಳು ಮಹಿಳೆಯೇ ಆಗಿದ್ದಾಳೆ. ಅಂದರೆ ಬ್ಯಾಳಿ ಆರಿಸುವುದು, ಬುಡ್ಡಿ ಆರಿಸುವುದು, ಕಸಕಡ್ಡಿ ಬೇರೆ ಮಾಡೋದು. ಒಟ್ನಾರೆ ಸ್ವಚ್ಛಗೊಳಿಸುವಲ್ಲಿ ಮಹಿಳೆಯ ಪಾತ್ರ ಮಹತ್ವದ್ದಾಗಿದೆ. |
| ೬ | ಬೆಳೆದ ಬೆಳೆಯನ್ನು ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |

ಬೆಳೆಯ ಹೆಸರು : ಬಿಳಿಜೋಳ (ಹಿಂಗಾರು ಬೆಳೆ)

| ಕ್ರ. ಸಂ. | ಈ ಬೆಳೆ ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಶೇಂಗಾ ಕಿತ್ತಿದ ಮೇಲೆ ರಂಟೆ ಹೊಡೆದು ಹೊಲ ಹರಗಿ ಅಥವಾ ಎಳಸಿ, ಮಳೆಯಾದ ಮೇಲೆ ಮೂರು ತಾಳಿನ ಕೂರಿಗಿಗೆ ಶೆಡ್ಡಿ ಬಟ್ಟಲು ಕಟ್ಟಿ ನಡಕ್ಕೆ ಉಡಿ ಕಟ್ಟಿಕೊಂಡು ಒಂದರಲ್ಲಿ ಗೊಬ್ಬರ ಬಿತ್ತುವರು, ಒಂದರಲ್ಲಿ ಜೋಳ ಬಿತ್ತುವರು. | ಈ ಎಲ್ಲ ಕೆಲಸಗಳನ್ನು ಪುರುಷರೇ ಮಾಡುವರು. |
| ೨ | ನಂತರ ಬೆಳೆಸಾಲು ಮಾಡುವರು. ಅಂದರೆ ಸಾಲು ಮುಚ್ಚುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೩ | ಬಿತ್ತಿ ೧೫ ದಿನದ ನಂತರ ೮ ದಿನಗಳಿಗೆ ಒಮ್ಮೆ ೨ ಅಥವಾ ೩ ಸಲ ಎಡೆಕುಂಟೆ ಹೊಡೆಯುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೪ | ಬಿತ್ತಿ ೩ ತಿಂಗಳಿಗೆ ಜೋಳ ಇನ್ನೂ ಹಾಲು ಗಾಳಿರುತ್ತದೆ. ಆಗ ಗುಬ್ಬಿ ಕಾಯುವುದು. | ಈ ಕೆಲಸವನ್ನು ಮಹಿಳೆ ಮತ್ತು ಪುರುಷರಿಬ್ಬರೂ ಮಾಡುವರು. |
| ೫ | ನಂತರ ೩½ ತಿಂಗಳಿಗೆ ಬೆಳೆ ಕೊಯ್ಯುವರು. | ಈ ಕೆಲಸವನ್ನು ಮಹಿಳೆ ಮತ್ತು ಪುರುಷರಿಬ್ಬರೂ ಮಾಡುವರು. |
| ೬ | ಸೊಪ್ಪಿ ಕೊಯ್ಯುವುದು. | ಈ ಕೆಲಸವನ್ನು ಮಹಿಳೆ ಮತ್ತು ಪುರುಷರಿಬ್ಬರೂ ಮಾಡುವರು. |
| ೭ | ತೆನಿ ಕೊಯ್ಯುವುದು. | ಈ ಕೆಲಸವನ್ನು ಮಹಿಳೆ ಮತ್ತು ಪುರುಷರಿಬ್ಬರೂ ಮಾಡುವರು. |
| ೮ | ಸೊಪ್ಪಿ ಪೆಂಡಿಕಟ್ಟಿ ಇಕ್ಕಾ ಹಾಕುವರು ಅಂದರೆ ಸೊಪ್ಪಿಯನ್ನು ಒಂದೆಡೆ ಕೂಡಿ ಹಾಕುವುದು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೯ | ತೆನಿ ಕಣಕ್ಕೆ ಹೇರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೦ | ತೆನಿ ಕಣದಲ್ಲಿ ಹರಡುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೧ | ಹರಡಿ ಒಣಗಿಸಿದ ತೆನಿಯನ್ನು ಮಿಷನ್ನಿಗೆ ಹಾಕಿಸುವರು. | ಈ ಕೆಲಸವನ್ನು ಮಹಿಳೆ ಮತ್ತು ಪುರುಷರಿಬ್ಬರೂ ಮಾಡುವರು. |
| ೧೨ | ರಾಶಿ ಕಟ್ಟುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೩ | ಜೋಳವನ್ನು ಮನೆಗೆ ಹೇರಿಕೊಂಡು ಬರುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೧೪ | ಬೆಳೆದ ಜೋಳವನ್ನು ಮಾರುಕಟ್ಟೆಗೆ ಒಯ್ಯುವುದು. | ಈ ಕೆಲಸವನ್ನು ಪುರುಷರೇ ಮಾಡುವರು. |

**ಬೆಳೆಯ ಹೆಸರು : ಹಸರಾಣಿ ಬೆಳೆಗಳು**

ಕಡ್ಲಿ, ಅಗಸಿ, ಉದ್ದು, ಔರಿ, ಹೆಸರು, ಬಟಾಣಿ, ಮಡಿಕೆಕಾಳು ಈ ಬೆಳೆಗಳನ್ನು ಹಸರಾಣಿ ಬೆಳೆಗಳೆನ್ನುವರು. ಭತ್ತದ ಗದ್ದೆಯಲ್ಲಿ ಹಿಂಗಾರು ಬೆಳೆಯಾಗಿ ಈ ಬೆಳೆಗಳನ್ನು ಬೆಳೆಯುವರು. ಇವುಗಳನ್ನು ಬೆಳೆಯುವ ಕ್ರಮ ಸಾಮಾನ್ಯವಾಗಿ ಒಂದೇ ರೀತಿಯಾಗಿದ್ದು, ಅಲ್ಲಿ ಯಾವ ಕೆಲಸವನ್ನು ಯಾರು ಮಾಡುತ್ತಾರೆಂಬ ವಿವರವನ್ನು ಈ ಕೆಳಗೆ ಕೊಡಲಾಗಿದೆ.

| ಕ್ರ. ಸಂ. | ಈ ಬೆಳೆಗಳನ್ನು ಬೆಳೆಯುವ ಸಂದರ್ಭದಲ್ಲಿ ಮಾಡುವ ಒಟ್ಟು ಕೃಷಿ ಕೆಲಸಗಳು | ಈ ಕೆಲಸಗಳನ್ನು ಮಾಡುವವರ ವಿವರ |
|---|---|---|
| ೧ | ಭತ್ತ ಕೊಯ್ದ ನಂತರ ಎತ್ತಿನ ರಂಟೆಯಿಂದ ಉಳುಮೆ ಮಾಡುವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೨ | ಉಡಿಯಲ್ಲಿ ಬೀಜ ಕಟ್ಟಿಕೊಂಡು ರಂಟೆ ಸಾಲಿನಲ್ಲಿ ಬೀಜ ಬಿತ್ತುವರು. | ಈ ಕೆಲಸವನ್ನು ಹೆಚ್ಚಾಗಿ ಮಹಿಳೆಯರೇ ಮಾಡುವರು. |
| ೩ | ಈ ಬೆಳೆಗಳಿಗೆ ಕಳೆ ತೆಗೆಯುವುದು ವಿರಳ. ಹಾಗೊಂದು ವೇಳೆ ತೆಗೆದರೆ | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೪ | ನಂತರ ೩ ತಿಂಗಳಿಗೆ ರಾತ್ರಿ ಅಥವಾ ಬೆಳಗಿನ ತಂಪಿನಲ್ಲಿ ಈ ಬೆಳೆಗಳನ್ನು ಕೀಳುವರು. | ಈ ಕೆಲಸವನ್ನು ಮಹಿಳೆಯರೇ ಮಾಡುವರು. |
| ೫ | ನಂತರ ಕಿತ್ತ ಬೆಳೆಯನ್ನು ಹೇರಿ ಕಣಕ್ಕೆ ಹಾಕುವರು. | ಬೆಳೆಯನ್ನು ಹೇರುವ ಸಂದರ್ಭದಲ್ಲಿ ಮಹಿಳೆಯರು ಭಾಗಿಯಾಗುತ್ತಾರೆ. ನಂತರ ಅದನ್ನು ಕಣಕ್ಕೆ ಹಾಕುವವರು ಪುರುಷರೇ ಆಗಿದ್ದಾರೆ. |
| ೬ | ಬೆಳೆಯನ್ನು ಕಣದಲ್ಲಿ ಹರಡಿ ಒಣಗಿಸಿ ತುಳಿಸುವವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೭ | ಕಾಳು ತೂರಿ ಚೀಲ ತುಂಬಿ ಮನೆಗೆ ತರುವವರು. | ಈ ಕೆಲಸವನ್ನು ಪುರುಷರೇ ಮಾಡುವರು. |
| ೮ | ಬೆಳೆಯನ್ನು ಮಾರುಕಟ್ಟೆಗೆ ಒಯ್ಯುವವರು. ಅಥವಾ ಬೆಳೆ ಮಾರುವವರು. | ಈ ಕೆಲಸವನ್ನು ಪುರುಷರೇ ಮಾಡುವರು. |

ಕೃಷಿಕರು ತಾವು ವಿವಿಧ ಬೆಳೆ ಬೆಳೆಯುವ ಸಂದರ್ಭದಲ್ಲಿ ಯಾವ ಕೆಲಸ ಯಾರು ಮಾಡುತ್ತಾರೆ ಎಂಬ ವಿವರವಾದ ಮಾಹಿತಿಯನ್ನೊಳಗೊಂಡ ಈ ಪಟ್ಟಿಯಿಂದ ಕೃಷಿ ಕೆಲಸಗಳಲ್ಲಿ, ಸಾಮಾನ್ಯವಾಗಿ ಮಹಿಳೆ ಬೆರಳೆಣಿಕೆಯಷ್ಟು ಕೆಲಸಗಳನ್ನು ಹೊರತುಪಡಿಸಿದರೆ ಉಳಿದೆಲ್ಲ ಕೆಲಸಗಳನ್ನು ನಿಭಾಯಿಸುವಳು ಎಂಬುದು ಸ್ಪಷ್ಟವಾಗುತ್ತದೆ. ಹೊಲದಲ್ಲಿ ಕೋಲಿ ಆರಿಸುವುದು, ಕಳೆ ತೆಗೆಯುವುದು, ಹತ್ತಿಕಾಳು ಹಾಕುವುದು, ಹತ್ತಿಕಾಳಿಗೆ ಗೊಬ್ಬರ ಹಾಕುವುದು, ಹತ್ತಿ ಬಿಡಿಸುವುದು, ಹೆಸರು-ಅಲಸಂದಿ ಬಿಡಿಸುವುದು, ಜೋಳದ ತೆನೆ ಕೊಯ್ಯುವುದು, ಜೋಳದ ಸೊಪ್ಪಿ ಕೊಯ್ಯುವುದು, ಶೇಂಗಾ ಕೀಳೋದು, ಶೇಂಗಾ ಕೊಡುವೋದು, ಶೇಂಗಾ ಆರಿಸುವುದು, ಮೆಣಸಿನಹಣ್ಣು ಬಿಡಿಸೋದು, ಗೋವಿನ ಜೋಳದ ತೆನೆ ಮುರಿಯೋದು, ಅಕ್ಕಡಿಕಾಳು (ಕಡಲಿ, ಹೆಸರು, ಅಲಸಂದಿ, ಮಡಿಕೆ ಅಂತಹ ಕಾಳುಗಳನ್ನು) ಬಿತ್ತುವವರು ಹೆಚ್ಚಾಗಿ ಮಹಿಳೆಯರೇ.

ಹಿಂದೆ ಬಿತ್ತುವ ಬೀಜಗಳನ್ನು ಸಂರಕ್ಷಿಸುವ ಮತ್ತು ಅವುಗಳನ್ನು ಬಿತ್ತುವಾಗ ಹಸನುಗೊಳಿಸಿ ಕೊಡುವಲ್ಲಿ ಮಹಿಳೆ ಪ್ರಮುಖ ಪಾತ್ರವಹಿಸುತ್ತಿದ್ದಳು. ಹೀಗೆ ಹೊಲ ಹಸನುಗೊಳಿಸುವುದರಿಂದ ಹಿಡಿದು ಬೀಜ ಬಿತ್ತಿ ಬೆಳೆಯುವವರೆಗಿನ ಹಲವು ಪ್ರಕ್ರಿಯೆಗಳಲ್ಲಿ ಮಹಿಳೆ ತನ್ನನ್ನು ಸಕ್ರಿಯವಾಗಿ ತೊಡಗಿಸಿಕೊಂಡಿರುವುದನ್ನು ಕಾಣುತ್ತೇವೆ.

ಕೃಷಿಯಲ್ಲಿ ಇಷ್ಟೆಲ್ಲ ಕೆಲಸ ಕಾರ್ಯಗಳು ಮಹಿಳೆಯಿಂದ ನಿರ್ವಹಿಸಲ್ಪಟ್ಟಾಗ್ಯೂ ನಮ್ಮ ಸಮಾಜದ ಒಳಗಡೆ ಕೃಷಿ ಎನ್ನುವುದು ಒಂದು ಪುರುಷ ಪ್ರಧಾನವಾದ ಕಸುಬು ಎಂಬ ಮನೋಭಾವ ರೂಢಿಗತವಾಗಿಬಿಟ್ಟಿದೆ. ಅಂದರೆ ಕೃಷಿಯಲ್ಲಿ ಪ್ರಧಾನ ಪಾತ್ರ ಪುರುಷನದೇ ಹೊರತು ಮಹಿಳೆಯರದಲ್ಲ ಎನ್ನುವ ಧೋರಣೆ ಬೆಳೆದು ಬಂದಿದೆ. ಏಕೆಂದರೆ "ಗಂಡಸು ಹೊರಗೆ ದುಡಿತಾನೆ, ಹೆಂಗಸು ಒಳಗೆ ದುಡಿತಾಳೆ" ಎನ್ನುವ ಸಾಮಾನ್ಯ ಗ್ರಹಿಕೆ ಜನರಲ್ಲಿದೆ. "ದುಡಿಮೆಯೆನ್ನುವುದು ಪುರುಷನಿಗೆ ಸಂಬಂಧಿಸಿದಂತೆ ಸಾಮಾಜಿಕವಾಗಿದ್ದರೆ ಮಹಿಳೆಯರಿಗೆ ಸಂಬಂಧಿಸಿದಂತೆ ಜೈವಿಕವಾಗಿದೆ. ಅದು ಪುರುಷರಿಗೆ ಸಂಬಂಧಿಸಿದಂತೆ ಸಾರ್ವಜನಿಕವಾಗಿದ್ದರೆ ಮಹಿಳೆಯರಿಗೆ ಸಂಬಂಧಿಸಿದಂತೆ ಖಾಸಗಿಯಾದುದಾಗಿದೆ. ಪುರುಷರಿಗೆ ಸಂಬಂಧಿಸಿದಂತೆ ದುಡಿಮೆಯು ಮನೆಯ ಹೊರಗಿನ ನೆಲೆ ಹೊಂದಿದ್ದಾರೆ, ಮಹಿಳೆಯರಿಗೆ ಸಂಬಂಧಿಸಿದಂತೆ ಅದು ಮನೆಯ ಒಳಗಿನ ಚೌಕಟ್ಟಿಗೆ ಸೀಮಿತಗೊಂಡಿದೆ" (ಟಿ.ಆರ್. ಚಂದ್ರಶೇಖರ್, ೨೦೦೧, ಪು.೨೯). ಹಾಗಾಗಿ ಹೆಚ್ಚಾಗಿ ಮನೆಯ ಒಳಗಿನ ಎಲ್ಲಾ ಕೆಲಸಕಾರ್ಯಗಳು ಹೆಂಗಸರಿಂದ ಮತ್ತು ಮನೆಯ ಹೊರಗಿನ ಕೆಲಸಕಾರ್ಯಗಳು ಗಂಡಸರಿಂದ ಹಿಂದೆ ನಿರ್ವಹಿಸಲ್ಪಡುತ್ತಿದ್ದವು. ಅಂತೆಯೇ ಕೃಷಿಯಲ್ಲಿನ ಮಹಿಳೆಯ ಪಾಲುದಾರಿಕೆಯನ್ನು ಕಡೆಗಣಿಸುವಂತಿಲ್ಲವಾದರೂ ಕೃಷಿಯು ಮನೆಯ ಹೊರಗಿನ ಕೆಲಸವಾಗಿದ್ದರಿಂದ ವ್ಯವಸ್ಥೆ ಇದು ಪುರುಷನಿಗೆ ಸಂಬಂಧಿಸಿದ ಕೆಲಸವೆಂದೇ ಭಾವಿಸಿಕೊಂಡು ಬಂದಿದೆ. ಹಾಗಾಗಿ ಕೃಷಿಯಲ್ಲಿ ಮಹಿಳೆ ಎಷ್ಟೇ ಕ್ರಿಯಾಶೀಲಳಾಗಿ ಪಾಲ್ಗೊಂಡರೂ ಅವಳ ಭಾಗವಹಿಸುವಿಕೆಯನ್ನು ಸಮಾಜ ಗೌಣವಾಗಿಯೇ ಕಾಣುತ್ತದೆ.

ಹೀಗೆ ಮನೆಯ ಒಳಗಿನ ಮತ್ತು ಮನೆಯ ಹೊರಗಿನ ಕೆಲಸಗಳು ಎಂದು ವರ್ಗೀಕರಿಸಿ ಅವುಗಳಲ್ಲಿ ಯಾವ ಕೆಲಸವನ್ನು ಯಾರು ಮಾಡಬೇಕು ಎಂದು ನಿರ್ಧರಿಸಿರುವುದರ ಹಿನ್ನೆಲೆಯಲ್ಲಿ ಒಂದು ಬಗೆಯ ಕುತಂತ್ರವಿದೆ. ಮತ್ತು ಈ ವಿಭಜನೆಯು ಪುರುಷನಿಷ್ಠ ಹಿತಾಸಕ್ತಿಯನ್ನು ಒಳಗೊಂಡಿರುವಂತಹದ್ದಾಗಿದೆ. ಯಾವ ಕೆಲಸಗಳಲ್ಲಿ ನಿರಂತರತೆ, ಏಕತಾನತೆ ಇರುತ್ತದೆಯೊ ಅಂತಹ ಕೆಲಸಗಳನ್ನು ಮಹಿಳೆಯರಿಗೆ ವಹಿಸಲಾಗಿದೆ. ಅಧಿಕ ಶ್ರಮ ಹಾಕಿದರೂ ಕಡಿಮೆ ಅವಧಿಯಲ್ಲಿ ಮಾಡಿ ಮುಗಿಸಲ್ಪಡುವ ಹೆಚ್ಚು ಅವಧಿಯ ಬಿಡುವು ಸಿಗುವ ಕೆಲಸಗಳನ್ನು ಪುರುಷ ವಹಿಸಿಕೊಂಡಿರುವುದು ಕಂಡುಬರುತ್ತದೆ. ಮನೆಯ ಒಳಗಿನ ಕೌಟುಂಬಿಕ ಕೆಲಸಕಾರ್ಯಗಳಲ್ಲಿ ನಿರಂತರವಾಗಿ ಮಾಡಲೇಬೇಕಾದ ಕೆಲಸಗಳಾಗಿರುತ್ತವೆ. ಇವುಗಳನ್ನು ಮಾಡದಿದ್ದರೆ ನಡೆಯುತ್ತದೆ ಎನ್ನುವಂತಿಲ್ಲ. ಅಲ್ಲದೆ ಇಲ್ಲಿ ಹೆಚ್ಚು ಬಿಡುವಿಗೆ ಅವಕಾಶವಿರುವುದಿಲ್ಲ. ಆದ್ದರಿಂದಲೇ ಮನೆಯ ಒಳಗಿನ ಕೆಲಸಗಳನ್ನೆಲ್ಲ ಮಹಿಳೆಗೆ ವಹಿಸಿ ಪುರುಷ ಜಾರಿಕೊಂಡಿರುವ ಜಾಣ್ಮೆಯೂ ಇದರಿಂದ ವ್ಯಕ್ತವಾಗುತ್ತದೆ.

ಮನೆಯ ಹೊರಗಿನ ಕೆಲಸಕಾರ್ಯಗಳಲ್ಲಿಯಾದರೂ ಕೂಡ ಪುರುಷರು ಮುಖ್ಯ ಕೆಲಸದಲ್ಲಿ ದೊಡ್ಡ ಪ್ರಮಾಣದಲ್ಲಿ ತೊಡಗಿಕೊಂಡಿದ್ದಾರೆಯೇ ಹೊರತು ದೈಹಿಕವಾಗಿ ಶ್ರಮ ವಿನಿಯೋಗ ಮಾಡಿ ಹೆಚ್ಚು ಕಷ್ಟಪಡಬೇಕಾದ ಕೆಲಸಗಳಲ್ಲಿಲ್ಲ. ಮತ್ತೆ ಮನೆಯ ಹೊರಗೂ ಕೂಡ ಈ ತರದ ದೈಹಿಕ ಶ್ರಮದಾಯಕ ಕೆಲಸಗಳಲ್ಲಿ ಮಹಿಳೆಯರ ಸಂಖ್ಯೆಯೇ ಅಧಿಕವಾಗಿದ್ದು ಮುಖ್ಯ ಕೆಲಸಗಳಲ್ಲಿ ಮಹಿಳೆಯರ ಪಾಲುದಾರಿಕೆ ಕಡಿಮೆ ಇರುವುದು ಕಂಡುಬರುತ್ತದೆ ಎನ್ನುವುದನ್ನು ಈ ಕೆಳಗಿನ ಕೋಷ್ಟಕ ಸ್ಪಷ್ಟಪಡಿಸುತ್ತದೆ.

**ಕರ್ನಾಟಕಕ್ಕೆ ಸಂಬಂಧಿಸಿದಂತೆ ಪ್ರದೇಶವಾರು ಮುಖ್ಯ ಮತ್ತು ಅತಿ ಸಣ್ಣ ಕೆಲಸಗಾರರ ಹಂಚಿಕೆ**

ಕೋಷ್ಟಕ : ೭.೧ (ಪ್ರತಿಶತ)

| ವರ್ಷ | ಪ್ರದೇಶ | ಮುಖ್ಯ ಕೆಲಸಗಾರರು | | ಅತಿಸಣ್ಣ ಕೆಲಸಗಾರರು | |
|---|---|---|---|---|---|
| | | ಪುರುಷ | ಮಹಿಳೆ | ಪುರುಷ | ಮಹಿಳೆ |
| ೨೦೦೧ | ಬಾಂಬೆ ಕರ್ನಾಟಕ | ೯೧.೩೯ | ೬೧.೬೭ | ೮.೬೧ | ೩೮.೩೩ |
| | ಹೈದರಾಬಾದ್ ಕರ್ನಾಟಕ | ೮೮.೭೬ | ೬೦.೭೩ | ೧೧.೨೪ | ೩೯.೨೭ |
| | ದಕ್ಷಿಣ ಕರ್ನಾಟಕ | ೯೧.೮೨ | ೬೯.೪೮ | ೮.೧೮ | ೩೦.೫೨ |
| | ಒಟ್ಟು ಕರ್ನಾಟಕ | ೯೧.೨೧ | ೬೫.೮೮ | ೮.೭೯ | ೩೪.೧೨ |
| ೧೯೯೧ | ಬಾಂಬೆ ಕರ್ನಾಟಕ | ೯೮.೯೩ | ೭೪.೧೦ | ೧.೦೭ | ೨೫.೯೦ |
| | ಹೈದರಾಬಾದ್ ಕರ್ನಾಟಕ | ೯೯.೩೯ | ೮೫.೯೩ | ೦.೬೧ | ೧೪.೦೭ |
| | ದಕ್ಷಿಣ ಕರ್ನಾಟಕ | ೯೮.೮೬ | ೭೫.೫೨ | ೧.೧೪ | ೨೪.೪೮ |
| | ಒಟ್ಟು ಕರ್ನಾಟಕ | ೯೮.೯೬ | ೭೭.೩೫ | ೧.೦೪ | ೨೨.೬೫ |

(ಕೃಪೆ: ಕರ್ನಾಟಕ ಮಾನವ ಅಭಿವೃದ್ಧಿ ವರದಿ, ೨೦೦೫)

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಕರ್ನಾಟಕದ ವಿವಿಧ ಪ್ರಾದೇಶಿಕ ವಲಯಗಳಾದ ಬಾಂಬೆ ಕರ್ನಾಟಕ, ಹೈದರಾಬಾದ್ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕಗಳಲ್ಲಿನ ಮುಖ್ಯ ಕೆಲಸಗಾರರಲ್ಲಿ ಪುರುಷರ ಸಂಖ್ಯೆ ಅಧಿಕವಾಗಿದ್ದು ಮಹಿಳೆಯರ ಪ್ರಮಾಣ ಕಡಿಮೆ ಇದೆ. ಆದರೆ ಈ ಪ್ರದೇಶಗಳಲ್ಲಿನ ಅತಿ ಸಣ್ಣ ಕೆಲಸಗಾರರ ಸಂಖ್ಯೆಯನ್ನು ಗಮನಿಸಿದಾಗ ಅಲ್ಲಿ ಮಹಿಳೆಯರ ಸಂಖ್ಯೆ ಅಧಿಕವಾಗಿದ್ದು ಪುರುಷರ ಸಂಖ್ಯೆ ಅತ್ಯಲ್ಪವಾಗಿರುವುದು ಕಂಡುಬರುತ್ತದೆ. ಇದರಿಂದ ಮುಖ್ಯ ಉದ್ಯೋಗವೆಂದು ತಿಳಿಯಲಾದ ಸಮಾಜದ ಉನ್ನತ ಮತ್ತು ಪ್ರತಿಷ್ಠಿತ ಹುದ್ದೆಗಳಿಗೆ ತೊಡಗುವಂತಹ ಕೌಶಲ್ಯ ಮತ್ತು ಅವಕಾಶ ಪುರುಷರಿಗೆ ಲಭ್ಯವಾದಂತೆ ಮಹಿಳೆಯರಿಗೆ ಲಭ್ಯವಾಗಿಲ್ಲ ಎನ್ನುವ ಅಂಶ ಸ್ಪಷ್ಟವಾಗುತ್ತದೆ. ಅಂದರೆ ಸಮಾಜದಲ್ಲಿ ಮಹಿಳೆಯರು ಮುಖ್ಯ ಕೆಲಸಗಳಿಂದ ವಂಚಿತರಾಗಿದ್ದರೆಂದು ಹೇಳಬಹುದು.

ಒಟ್ಟಿನಲ್ಲಿ ಮನೆಯ ಹೊರಗಿನ ಕೆಲಸಗಳಲ್ಲಿನ ಹಂಚಿಕೆಯಲ್ಲೂ ಪುರುಷ ಸಮಾಜದಲ್ಲಿ ಶ್ರೇಷ್ಠವೆನಿಸುವ ಮತ್ತು ಲಾಭದಾಯಕವಾದ ಹುದ್ದೆಗಳಲ್ಲಿ ಅಧಿಕವಾಗಿ ತೊಡಗಿಕೊಂಡಿರುವುದು ಕಂಡುಬರುತ್ತದೆ. ಈ ರೀತಿಯ ಕೆಲಸಗಳ ಹಂಚಿಕೆಗೆ ಅಂತಿಮವಾಗಿ ಈ ಪುರುಷ ಪ್ರಧಾನ ವ್ಯವಸ್ಥೆಯೇ ಕಾರಣವಾಗಿದೆ.

ಅಂತೆಯೇ ಕೃಷಿಯಲ್ಲಿನ ಕೆಲಸಗಳ ನಿರ್ವಹಣೆಯ ಸಂದರ್ಭದಲ್ಲಿ ಈ ಬಗೆಯ ಪುರುಷ ಹಿತಾಸಕ್ತಿ ಕೆಲಸ ಮಾಡಿರುವ ಸಾಧ್ಯತೆ ಇದೆ. ನೇಗಿಲು ಕಟ್ಟುವ, ಉಳುಮೆ ಮಾಡುವಂತಹ ಪ್ರಮುಖ ಕೆಲಸಗಳು ಪುರುಷನಿಂದ ಮಾಡಲ್ಪಡುವುದರಿಂದ ಕೃಷಿಯಲ್ಲಿ ಪುರುಷ ಪ್ರಧಾನ ಪಾತ್ರವಹಿಸುತ್ತಾನೆ ಎಂಬುದು ಮೇಲುನೋಟಕ್ಕೆ ನಿಜವೆನಿಸಿದ್ದರೂ ಮಹಿಳೆ ಈ ಕೆಲಸಗಳಲ್ಲಿ ಏಕೆ ಭಾಗಿಯಾಗುವುದಿಲ್ಲ? ಎಂಬುದನ್ನು ಕೂಡ ನಾವು ಗಮನಿಸಬೇಕಾಗುತ್ತದೆ. ಮನೆಯ ಒಳಗಿನ ಕೆಲಸ ಕಾರ್ಯಗಳಿಗೆ ಮಹಿಳೆಯನ್ನು ಅಣಿಮಾಡಿದ ಕಾರಣಕ್ಕಾಗಿಯೇ ಕೃಷಿಯಲ್ಲಿ ಮಹಿಳೆಗೆ ಆ ಬಗೆಯ ಕೆಲಸಗಳಲ್ಲಿ ತೊಡಗಿಕೊಳ್ಳಲಿಕ್ಕೆ ಆಗದೇ ಹೋಗಿರಬಹುದು. ಮಹಿಳೆ ಮನೆಯ ಒಳಗಿನ ಎಲ್ಲ ಚಟುವಟಿಕೆಗಳನ್ನು ಮುಗಿಸಿಕೊಂಡು ಇನ್ನುಳಿದ ಸಮಯವನ್ನು ಅವಳು ಹೊಲದಲ್ಲಿ ಕಳೆಯುವುದರಿಂದ ಅಥವಾ ಮನೆಯ ಒಳಗೂ ಹೊರಗೂ ಮಹಿಳೆ ಕೆಲಸ ಮಾಡಬೇಕಾಗಿದ್ದರಿಂದ ಆಕೆಗೆ ಕೃಷಿಯ ಎಲ್ಲಾ ಜವಾಬ್ದಾರಿಯನ್ನು ನಿಭಾಯಿಸಲಿಕ್ಕೆ ಸಾಧ್ಯವಾಗದೇ ಹೋಗಿರಬಹುದಾದ ಸಾಧ್ಯತೆ ಇದೆ. ಅಲ್ಲದೆ ನಿಸರ್ಗದತ್ತವಾಗಿಯೇ ಮಹಿಳೆಯ ದೈಹಿಕ ರಚನೆ ಪುರುಷನ ದೈಹಿಕ ರಚನೆಗಿಂತ ದುರ್ಬಲವಾಗಿರುವುದು ಕೂಡಾ ಕೃಷಿಯಲ್ಲಿನ ನೇಗಿಲು ಕಟ್ಟುವ, ಉಳುಮೆ ಮಾಡುವಂತಹ ಮತ್ತು ಭಾರವಾದ ವಸ್ತುಗಳನ್ನು ಎತ್ತಿ ಇಳಿಸುವಂತಹ ಕೆಲಸಗಳಿಂದ ಮಹಿಳೆ ದೂರ ಉಳಿಯುವುದಕ್ಕೆ ಕಾರಣವಾಗಿದೆ.

ಆದರೆ ಕೃಷಿಯಲ್ಲಿ ಪುರುಷನಿಂದ ಮಾಡಲ್ಪಡುತ್ತಿರುವ ಅಥವಾ ಪುರುಷ ಮಾಡಬಹುದಾದ ಕೆಲಸಗಳನ್ನು ಮಹಿಳೆಯರಿಗೆ ನಿರ್ವಹಿಸುವುದಕ್ಕೆ ಆಗದು ಎಂದು ಹೇಳಲಿಕ್ಕಾಗದು. ಏಕೆಂದರೆ ನಮ್ಮ ನಡುವೆ ಕೃಷಿಯ ಎಲ್ಲ ಕೆಲಸಗಳನ್ನು ಪುರುಷರ ಸಹಾಯವಿಲ್ಲದೆ ನಿರ್ವಹಿಸಿಕೊಂಡು ಹೋಗುವ ಮಹಿಳೆಯರೂ ಸಿಗುತ್ತಾರೆ. ಇಂತಹ ಮಹಿಳೆಯರ ಪ್ರಮಾಣ ಕಡಿಮೆ ಇರಬಹುದಾದರೂ ಒಟ್ಟಿನಲ್ಲಿ ಮಹಿಳೆ ಕೃಷಿಯ ಎಲ್ಲ ಕೆಲಸ ಕಾರ್ಯಗಳನ್ನು ನಿಭಾಯಿಸಬಲ್ಲಳು ಎಂಬುದನ್ನು ಇವರು ಸಾಬೀತು ಮಾಡಿದ್ದಾರೆ.

ಉದಾಹರಣೆಗೆ, ಶಿಗ್ಗಾಂವಿಯ ಸಾವಿತ್ರಿ ಎನ್ನುವ ಕೃಷಿ ಮಹಿಳೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಂಚಿಕೊಂಡ ಮಾತುಗಳು ಈ ರೀತಿಯಾಗಿವೆ. 'ನಾ ತವರು ಮನೆಯಲ್ಲಿ ಹೊಲದಾಗಿನ ಎಲ್ಲ ಕೆಲಸಾನೂ ಮಾಡ್ತಿದ್ದೆ. ನನಗೆ ರಂಟೆ ಹೊಡೆಯೋಕೆ, ಕುಂಟೆ ಹೊಡೆಯೋಕೆ, ಬಿರುವು ಹೊಡೆಯೋದಕ್ಕೆಲ್ಲ ಬರುತ್ತೆ. ನಮ್ದು ಹೊಲ ಇತ್ತು. ಆದ್ರೆ ನಮ್ಮ ಅಣ್ಣಂದ್ರು ಮದ್ವಿ ಮಾಡ್ಕೊಂಡು ಬೇರೆ ಮನಿ ಮಾಡಿದ್ರು. ಆವಾಗ ಅಪ್ಪ ಅವ್ವನ ನೋಡಿಕೊಳ್ಳೋರು ಯಾರು ಇರಲಿಲ್ಲ. ಹಾಗಾಗಿ ನಾನು ನಮ್ಮ ತಂಗಿ ಸೇರಿ ಹೊಲದಾಗಿನ ಕೆಲಸ ಮಾಡ್ತಿದ್ವಿ. ಆದ್ರೆ ಅವಾಗಿನ ತರಾ ಎತ್ತು ನೇಗಿಲು ಕಟ್ಟೋದು, ಹೊಲ ಹೊಡೆಯೋದು, ರಂಟೆ ಕುಂಟೆ ಹೊಡೆಯೊ ಕೆಲಸ ಮಾಡೋಲ್ಲ. ಯಾಕಂದ್ರ ಇಲ್ಲಿ ಈಗ ಆ ಕೆಲಸಾನ ನನ್ನ ಗಂಡ, ಮಕ್ಕಳು ಮಾಡತಾರ ಅವಾಗ ಅಲ್ಲಿ ಗಂಡಸರ್ಯಾರು ಇಲ್ಲದಿದ್ದಕ್ಕೆ ಅನಿವಾರ್ಯವಾಗಿ ಹೊಲದಾಗಿನ ಎಲ್ಲ ಕೆಲಸಾನು ನಾವೇ ಮಾಡ್ತಿದ್ವಿ' ಎಂದು ಹೇಳುವ ಕೃಷಿ ಮಹಿಳೆಯೊಬ್ಬಳ ಈ ಮಾತುಗಳಿಂದ, ಕೃಷಿಯಲ್ಲಿ ಪುರುಷನಿಂದ ಮಾತ್ರ ಮಾಡಲು ಸಾಧ್ಯವಾದ ಕೆಲಸಗಳು ಎಂದು ನಾವೇನು ಭಾವಿಸಿದ್ದೇವೊ ಆ ಕೆಲಸಗಳನ್ನು ಮಾಡಲು

ಮಹಿಳೆಗೆ ಸಾಧ್ಯವಿಲ್ಲ ಎಂದೇನಲ್ಲ ಸಂದರ್ಭ ಬಿದ್ದರೆ ಮಹಿಳೆ ಆ ಕೆಲಸಗಳನ್ನು ಕೂಡ ನಿಭಾಯಿಸಬಲ್ಲಳು ಎಂಬುದು ತಿಳಿದುಬರುತ್ತದೆ.

ಆದರೆ ಮಹಿಳೆಯೇ ನಿರ್ವಹಿಸಿಕೊಂಡು ಹೋಗುವ ಕೃಷಿಯ ಸಂದರ್ಭಗಳು ವಿರಳ ಮತ್ತು ಕೆಲವು ಅನಿವಾರ್ಯ ಸ್ಥಿತಿಯಲ್ಲಿ ಮಾತ್ರ ಮಹಿಳೆಯರು ಕೃಷಿಯನ್ನು ತಾವೇ ನಡೆಸಿಕೊಂಡು ಹೋಗುವುದನ್ನು ನಾವು ಕಾಣುತ್ತೇವೆ.

೧. ಮನೆಯಲ್ಲಿ ಗಂಡು ದಿಕ್ಕಿಲ್ಲದಿದ್ದಾಗ ಅಂದರೆ ಅಣ್ಣ ತಮ್ಮಂದಿರು ಯಾರು ಇಲ್ಲದಿದ್ದಾಗ ವೃದ್ಧ ತಂದೆ ತಾಯಿಗಳನ್ನು ನೋಡಿಕೊಳ್ಳುವ ಜವಾಬ್ದಾರಿ ಹೆಣ್ಣು ಮಕ್ಕಳ ಮೇಲೆಯೇ ಬಿದ್ದಾಗ ಅವರು ಕೃಷಿ ಅವಲಂಬಿತ ಕುಟುಂಬದವರಾಗಿದ್ದರೆ ಮಹಿಳೆಯು ಕೃಷಿಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಬೇಕಾದ ಅನಿವಾರ್ಯತೆ ಬರುತ್ತದೆ.

೨. ಗಂಡು ಮಕ್ಕಳು ಅಪ್ರಾಪ್ತ ವಯಸ್ಕರಾಗಿದ್ದರೆ ಮನೆಯಲ್ಲಿನ ಮಹಿಳೆಯರು ಕೃಷಿ ಮಾಡಿಕೊಂಡು ಹೋಗುತ್ತಾರೆ.

೩. ಗಂಡು ಮಕ್ಕಳಿದ್ದರೂ ವಯಸ್ಸಾದ ತಂದೆ ತಾಯಿಗಳನ್ನು ನೋಡದೆ ತನ್ನ ಹೆಂಡತಿ ಮಕ್ಕಳೊಂದಿಗೆ ಬೇರೆ ಕಡೆ ವಾಸವಾಗಿದ್ದರೆ ಅಂತಹ ಸಂದರ್ಭದಲ್ಲಿ ಕೃಷಿ ಅವಲಂಬಿತ ಕುಟುಂಬವಾಗಿದ್ದರೆ ಮನೆಯ ಹೆಣ್ಣು ಮಕ್ಕಳೇ ಕೃಷಿಯನ್ನು ನೋಡಿಕೊಂಡು ಹೋಗಬೇಕಾಗುತ್ತದೆ.

೪. ಕೃಷಿ ಕುಟುಂಬದೊಳಗಿನ ಗಂಡು ಮಕ್ಕಳಿಗೆ ಅನಾರೋಗ್ಯ, ಅಂಗ ನ್ಯೂನ್ಯತೆಯಿಂದ ಕೂಡಿದ್ದರೆ ಅಥವಾ ಅಸ್ವಸ್ಥರಾಗಿದ್ದರೆ ಅಂತಹ ಸಂದರ್ಭಗಳಲ್ಲಿ ಕೃಷಿಯನ್ನು ಮಹಿಳೆಯರು ನಿಭಾಯಿಸುತ್ತಾರೆ.

೫. ಕೃಷಿ ಕುಟುಂಬದೊಳಗಿನ ಗಂಡು ಮಕ್ಕಳು ಓದುತ್ತಿದ್ದರೆ ಅಥವಾ ಯಾವುದಾದರೂ ಬೇರೆ ಉದ್ಯೋಗದಲ್ಲಿ ತೊಡಗಿದ್ದರೆ ಆ ಕುಟುಂಬದಲ್ಲಿ ವಾಸವಾಗಿದ್ದ ಮಹಿಳೆಯರು ಅನಿವಾರ್ಯವಾಗಿಯಾದರೂ ಕೃಷಿ ಕೆಲಸಗಳನ್ನು ಮಾಡುತ್ತಿರುತ್ತಾರೆ.

೬. ಗಂಡ ಇಲ್ಲವೆ ವಯಸ್ಸಿಗೆ ಬಂದ ಮಕ್ಕಳು ಹೊಲದಲ್ಲಿ ಕೆಲಸ ಮಾಡದೆ, ಊರಲ್ಲಿ ಅಪಪೋಲಿಗಳಂತೆ ಊರಿನ ರಾಜಕೀಯ ಮಾಡಿಕೊಂಡು ತಿರುಗುತ್ತಿದ್ದರೆ, ಅಂತಹ ಕುಟುಂಬದೊಳಗಿನ ಮಹಿಳೆ ಅನಿವಾರ್ಯವಾಗಿ ಹೊಲ ಮನೆಗಳೆರಡನ್ನು ನಿಭಾಯಿಸಿಕೊಂಡು ಹೋಗುವುದು ಕಂಡು ಬರುತ್ತದೆ.

ಅಥವಾ ಮೇಲಿನ ಎಲ್ಲ ಸಮಸ್ಯೆಗಳಿದ್ದಾಗಲೂ ಸ್ವಲ್ಪ ಸ್ಥಿತಿವಂತರಾಗಿದ್ದರೆ ಅವರು ಬೇರೆಯವರ ಕೈಗೆ ಭೂಮಿಯನ್ನು ಲವಣಿ ಅಥವಾ 'ಖೋರ'ಗೆ ಕೊಟ್ಟು ವರ್ಷಕ್ಕೆ ಇಂತಿಷ್ಟು ಎಂದು ಬಂದ ಹಣದಲ್ಲಿ ಇಲ್ಲವೆ ಉತ್ಪನ್ನದಲ್ಲಿ ಜೀವನ ಸಾಗಿಸುವರು. ಇಲ್ಲವೆ ಆ ಮಹಿಳೆ ಆಳುಗಳ ಹಿಂದೆ ನಿಂತು ಅವರ ಕೈಯಿಂದ ಕೆಲಸ ಮಾಡಿಸಿಕೊಂಡು ಹೋಗುವುದನ್ನು ನೋಡುತ್ತೇವೆ. ಆಳು ಹಚ್ಚಿ ಕೆಲಸ ಮಾಡಿಸುವಷ್ಟು ಸ್ಥಿತಿವಂತರಾಗಿಲ್ಲದವರಾಗಿದ್ದರೆ, ಆಳುಗಳಿಗೆ ಕೂಲಿ ಕೊಡಲಿಕ್ಕೆ ಆಗದು ಎಂದು ಸ್ವತಃ ತಾವೇ ಕೃಷಿಯಲ್ಲಿ ತೊಡಗಿಕೊಳ್ಳುವ ಮಹಿಳೆಯರು ಇದ್ದಾರೆ.

ಕೃಷಿ ಕೂಲಿ ಮಹಿಳೆಯರಾಗಿದ್ದರೆ ಅವರಿಗೆ ದಿನಕ್ಕಿಷ್ಟು ಎಂದು ನಿರ್ದಿಷ್ಟಪಡಿಸಿದ ಕೂಲಿ ದೊರೆಯುತ್ತದೆ. ಆದರೆ ಸಣ್ಣ ಮತ್ತು ಮಧ್ಯಮ ಹಿಡುವಳಿ ಹೊಂದಿದ ಕೃಷಿ ಕುಟುಂಬಗಳಲ್ಲಿ ದುಡಿಯುತ್ತಿರುವ ಮಹಿಳೆಯರ ಪಾಡು ತುಂಬಾ ಶೋಚನೀಯವಾದದ್ದು. ಅವರು ಮನೆಯ ಒಳಗೂ ಮತ್ತು ಹೊರಗೂ ಅಂದರೆ ಹೊಲಗದ್ದೆಗಳಲ್ಲೂ ಕೆಲಸ ಮಾಡುತ್ತಾರೆ. ಈ ರೀತಿ ದ್ವಿಮುಖ ಕೆಲಸ ಕಾರ್ಯ ಮಾಡಿದಾಗಲೂ ಅವರಿಗೆ ಸಿಗುವ ಪ್ರತಿಫಲಗಳೇನು? ಪ್ರತಿ ಬೆಳೆಯ ಸಂದರ್ಭದಲ್ಲಿ ಬೀಜ ಬಿತ್ತುವುದರಿಂದ ಬೆಳೆ ಬರುವವರೆಗಿನ ಚಟುವಟಿಕೆಗಳಲ್ಲಿ ಮಹಿಳೆಯ ಪಾಲುದಾರಿಕೆ ಒಂದಲ್ಲಾ ಒಂದು ರೀತಿಯಲ್ಲಿ ಇರುವುದು ಕಂಡುಬರುತ್ತದೆ. ಆದರೆ ಕೃಷಿಯ ದುಡಿಮೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡ ಮಹಿಳೆ ಕೃಷಿ ಉತ್ಪನ್ನ ಕೈಗೆ ಬಂದ ನಂತರದ ಹಂತದಲ್ಲಿ ಎಲ್ಲೂ ಮಹಿಳೆಯ ಪಾಲುದಾರಿಕೆ ಕಂಡುಬರುವುದಿಲ್ಲ. ಬಂದ ಬೆಳೆಯನ್ನು ಮಾರಲು ನಿರ್ಧರಿಸುವಲ್ಲಾಗಲಿ, ಮಾರಿದ ಉತ್ಪನ್ನದಿಂದ ಬಂದ ಹಣವನ್ನು ಖರ್ಚು ಮಾಡುವುದರಲ್ಲಾಗಲಿ ಮಹಿಳೆಯ ಪಾತ್ರವೇನು ಕಂಡುಬರುವುದಿಲ್ಲ. ಬಂದ ಉತ್ಪನ್ನ ಮಾರುವ, ಮಾರಿದ ಉತ್ಪನ್ನದಿಂದ ಬಂದ ಗಳಿಕೆಯನ್ನು ಖರ್ಚು ಮಾಡುವುದು ಕುಟುಂಬದಲ್ಲಿ ಪುರುಷನ ಅಭಿಲಾಷೆಯ ಮೇರೆಗೆ ನಡೆಯುತ್ತಿರುತ್ತದೆಯೇ ಹೊರತು ಈ ವಿಷಯದಲ್ಲಿ ಮಹಿಳೆಗೆ ಯಾವ ರೀತಿಯ ಸ್ವಾಯತ್ತತೆಗಳಿರುವುದಿಲ್ಲ. ಎಷ್ಟೆಲ್ಲ ಶ್ರಮ ಹಾಕಿ ದುಡಿದರೂ ಅವಳ ದುಡಿಮೆ ಕುಟುಂಬಕ್ಕೆ ಮಾಡುವ ಸೇವೆಯಾಗಿಯೋ ಅದು ಅವಳ ಕರ್ತವ್ಯವಾಗಿಯೋ ಆಗಿ ಪರಿಗಣಿಸಲ್ಪಡುತ್ತದೆ. ಇದು ಎಲ್ಲ ಸಣ್ಣ ಮತ್ತು ಮಧ್ಯಮ ಭೂ ಹಿಡುವಳಿ ಹೊಂದಿದ ಕೃಷಿ ಮಹಿಳೆಯರ ಪಾಡು. ಈ ನಿರಂತರ ದುಡಿಮೆಯಿಂದ ಅವಳಿಗಾಗುವ ಲಾಭವಿಷ್ಟೆ, ಮೂರು ಹೊತ್ತು ತಿನ್ನುವುದಕ್ಕೊಂದಿಷ್ಟು ಊಟ, ವರ್ಷಕ್ಕೊಂದು ಜೊತೆ ಬಟ್ಟೆ. ಅದು ಕೂಡ ನಿಶ್ಚಿತವಲ್ಲ.

ಇನ್ನು ಕೃಷಿಯಲ್ಲಿ ದುಡಿಯುವ ಕೂಲಿ ಮಹಿಳೆಯರಾದರೆ ಅವರು ತಾವು ದುಡಿದ ದುಡಿಮೆಗೆ ಇಂತಿಷ್ಟು ಎಂದು ಕೂಲಿ ತೆಗೆದುಕೊಳ್ಳುತ್ತಾರೆ. ಆದರೂ ಅದು ಅತ್ಯಂತ ಕಡಿಮೆ ಪ್ರಮಾಣದ ಕೂಲಿಯಾಗಿರುತ್ತದೆ. ಈ ಕೂಲಿಯಲ್ಲಿ ಕೂಡ ಲಿಂಗಾಧಾರಿತ ತಾರತಮ್ಯಗಳಿರುವುದು ಕಂಡುಬರುತ್ತದೆ. ಇದು ಒಂದು ಹಳ್ಳಿ, ಊರು, ಜಿಲ್ಲೆಯಲ್ಲಿ ಕಂಡುಬರುವ ಸಮಸ್ಯೆ ಮಾತ್ರವಲ್ಲ. ಇಡೀ ರಾಜ್ಯ ಹಾಗೂ ದೇಶದಲ್ಲಿಯೇ ಪುರುಷ ಮತ್ತು ಮಹಿಳಾ ಕೃಷಿ ಕೂಲಿಯ ನಡುವೆ ತಾರತಮ್ಯಗಳಿರುವುದು ಕಂಡುಬರುತ್ತದೆ.

## ಕರ್ನಾಟಕದಲ್ಲಿ ಜಿಲ್ಲಾವಾರು ಗ್ರಾಮೀಣ ಕೃಷಿ ಕಾರ್ಮಿಕರ ಕೂಲಿಗಳು

ಕೋಷ್ಟಕ : ೭.೨

(ರೂ.ಗಳಲ್ಲಿ

| ಪ್ರದೇಶ | ಜಿಲ್ಲೆ | ಗ್ರಾಮೀಣ ಕಾರ್ಮಿಕರ ಕೃಷಿಕೂಲಿಗಳು | | | | | | | |
|---|---|---|---|---|---|---|---|---|---|
| | | ೧೯೯೧ | | | | ೨೦೦೧ | | | |
| | | ಪುರುಷ | ಮಹಿಳೆ | ಪು.ಮ. ವ್ಯತ್ಯಾಸ | ಶೇಕಡಾವಾರು ವ್ಯತ್ಯಾಸ | ಪುರುಷ | ಮಹಿಳೆ | ಪು.ಮ. ವ್ಯತ್ಯಾಸ | ಶೇಕಡಾವಾರು ವ್ಯತ್ಯಾಸ |
| ದ.ಕರ್ನಾಟಕ | ಬೆಂಗಳೂರು ಗ್ರಾ. | ೧೯.೩೨ | ೧೬.೨೬ | ೩.೦೬ | ೧೮.೮೨ | ೬೨.೮೫ | ೩೭.೨೫ | ೨೫.೬ | ೬೮.೭೨ |
| | ಬೆಂಗಳೂರು ನ. | ೨೧.೮೦ | ೧೮.೦೦ | ೩.೮೦ | ೨೧.೧೧ | ೫೭.೪೫ | ೪೪.೩೧ | ೧೩.೧೪ | ೨೯.೬೫ |
| | ಚಿತ್ರದುರ್ಗ | ೧೭.೨೨ | ೧೨.೫೬ | ೪.೬೬ | ೩೭.೧೦ | ೩೯.೨೬ | ೨೭.೪೭ | ೧೧.೭೯ | ೪೨.೯೨ |
| | ದಾವಣಗೆರೆ | ೧೭.೨೨ | ೧೨.೫೬ | ೪.೬೬ | ೩೭.೧೦ | ೪೨.೮೪ | ೨೯.೮೮ | ೧೨.೯೬ | ೪೩.೩೭ |
| | ಕೋಲಾರ | ೨೪.೩೨ | ೧೮.೨೫ | ೬.೦೭ | ೩೩.೨೬ | ೫೩.೭೫ | ೩೫.೮೩ | ೧೭.೯೨ | ೫೦.೦೧ |
| | ಶಿವಮೊಗ್ಗ | ೧೫.೦೧ | ೧೪.೦೫ | ೦.೯೬ | ೬.೮೩ | ೫೪.೦೬ | ೪೨.೯೦ | ೧೧.೧೬ | ೨೬.೦೧ |
| | ತುಮಕೂರು | ೧೫.೨೭ | ೧೩.೧೨ | ೨.೧೫ | ೧೬.೩೯ | ೫೧.೪೮ | ೩೦.೭೪ | ೨೦.೭೪ | ೬೭.೪೭ |
| | ಚಾಮರಾಜನಗರ | ೧೯.೪೦ | ೧೩.೩೫ | ೫.೯೫ | ೪೪.೨೪ | ೫೪.೨೮ | ೨೯.೮೩ | ೨೪.೪೫ | ೮೧.೯೬ |
| | ಚಿಕ್ಕಮಂಗಳೂರು | ೨೧.೮೮ | ೧೬.೯೭ | ೪.೯೧ | ೨೮.೯೩ | ೫೫.೬೯ | ೪೨.೩೧ | ೧೩.೩೮ | ೩೧.೬೨ |
| | ದಕ್ಷಿಣ ಕನ್ನಡ | ೨೬.೭೭ | ೧೬.೭೨ | ೧೦.೦೫ | ೬೦.೧೧ | ೮೦.೦೦ | ೫೫.೦೦ | ೨೫.೦೦ | ೪೫.೪೫ |
| | ಹಾಸನ | ೧೪.೮೨ | ೧೩.೦೪ | ೧.೭೮ | ೧೩.೬೫ | ೩೭.೩೫ | ೨೬.೬೪ | ೧೦.೭೧ | ೪೦.೨೦ |
| | ಕೊಡಗು | ೨೭.೨೭ | ೨೫.೨೫ | ೨.೦೨ | ೮.೦೦ | ೬೦.೦೦ | ೪೬.೬೭ | ೧೩.೩೩ | ೨೮.೫೬ |
| | ಮಂಡ್ಯ | ೨೫.೯೨ | ೧೬.೯೭ | ೮.೯೫ | ೫೨.೭೪ | ೬೧.೦೭ | ೩೫.೪೮ | ೨೫.೫೯ | ೭೨.೧೩ |
| | ಮೈಸೂರು | ೧೯.೪೦ | ೧೩.೪೫ | ೫.೯೫ | ೪೪.೨೪ | ೫೬.೭೫ | ೩೦.೮೭ | ೨೫.೮೮ | ೮೩.೮೪ |
| | ಉಡುಪಿ | ೨೬.೭೭ | ೧೬.೭೨ | ೧೦.೦೫ | ೬೦.೧೧ | ೭೦.೦೦ | ೪೪.೩೩ | ೨೫.೬೭ | ೫೭.೯೧ |
| ಬಾಂಬೆ ಕರ್ನಾಟಕ | ಬಾಗಲಕೋಟೆ | ೧೬.೯೯ | ೧೧.೦೧ | ೫.೯೮ | ೫೪.೩೧ | ೪೮.೨೭ | ೨೬.೫೭ | ೨೧.೭೦ | ೮೧.೬೭ |
| | ಬೆಳಗಾವಿ | ೧೬.೯೩ | ೧೧.೯೨ | ೫.೦೧ | ೪೨.೦೩ | ೪೬.೭೪ | ೩೧.೫೯ | ೧೫.೧೫ | ೪೭.೯೬ |
| | ಬಿಜಾಪುರ | ೧೬.೯೯ | ೧೧.೦೧ | ೫.೯೮ | ೫೪.೩೧ | ೬೮.೦೫ | ೪೪.೨೦ | ೨೩.೮೫ | ೫೩.೯೬ |
| | ಧಾರವಾಡ | ೧೦.೨೫ | ೭.೬೮ | ೨.೫೭ | ೩೩.೪೬ | ೫೨.೯೬ | ೩೫.೪೯ | ೧೭.೪೭ | ೪೯.೨೩ |
| | ಗದಗ | ೧೦.೨೫ | ೭.೬೮ | ೨.೫೭ | ೩೩.೪೬ | ೩೯.೯೫ | ೩೧.೯೩ | ೮.೦೨ | ೨೫.೧೨ |
| | ಹಾವೇರಿ | ೧೦.೨೫ | ೭.೬೮ | ೨.೫೭ | ೩೩.೪೬ | ೪೨.೯೮ | ೩೭.೩೫ | ೫.೬೩ | ೧೫.೦೭ |
| | ಉತ್ತರ ಕನ್ನಡ | ೨೧.೩೭ | ೧೬.೧೫ | ೫.೨೨ | ೩೨.೩೨ | ೬೩.೬೧ | ೪೭.೯೨ | ೧೫.೬೯ | ೩೨.೭೪ |
| ಹೈದ್ರಾಬಾದ್ ಕರ್ನಾಟಕ | ಬಳ್ಳಾರಿ | ೧೨.೯೧ | ೧೦.೬೫ | ೨.೨೬ | ೨೧.೨೨ | ೪೧.೮೨ | ೨೮.೫೬ | ೧೩.೨೬ | ೪೬.೪೩ |
| | ಬೀದರ | ೧೭.೩೦ | ೧೪.೮೩ | ೨.೪೭ | ೧೬.೬೬ | ೬೧.೬೮ | ೨೭.೦೫ | ೩೪.೬೩ | ೧೨೮.೦೨ |
| | ಗುಲ್ಬರ್ಗಾ | ೧೯.೫೧ | ೧೨.೯೬ | ೬.೫೫ | ೫೦.೫೪ | ೫೭.೬೨ | ೨೬.೧೫ | ೩೧.೪೭ | ೧೨೦.೩೪ |
| | ಕೊಪ್ಪಳ | ೧೧.೯೫ | ೮.೩೨ | ೩.೬೩ | ೪೩.೬೩ | ೫೨.೫೭ | ೨೩.೮೧ | ೨೮.೭೬ | ೧೨೦.೭೯ |
| | ರಾಯಚೂರು | ೧೧.೯೫ | ೮.೩೨ | ೩.೬೩ | ೪೩.೬೩ | ೪೬.೭೯ | ೨೮.೯೩ | ೧೭.೮೬ | ೬೧.೭೪ |
| ಕರ್ನಾಟಕ | | ೧೮.೧೧ | ೧೩.೫೪ | ೪.೫೭ | ೩೩.೭೫ | ೫೪.೦೭ | ೩೫.೧೫ | ೧೮.೯೨ | ೫೩.೮೩ |

ಟಿಪ್ಪಣಿ : ಶೇಕಡವಾರು ವ್ಯತ್ಯಾಸದ ಅಂಕಣವು ಆ ಜಿಲ್ಲೆಯಲ್ಲಿ ಮಹಿಳೆಯರ ಕೂಲಿಗಳ ಶೇ. ಪ್ರಮಾಣವಾಗಿ ಪುರುಷರು ಮತ್ತು ಮಹಿಳೆಯರ ಕೂಲಿಗಳ ನಡುವಣ ವ್ಯತ್ಯಾಸವನ್ನು ಸೂಚಿಸುತ್ತದೆ.

ಮೂಲ : ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ

ಕೃಪೆ : ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಕೃಷಿ ಕೂಲಿಕಾರರಲ್ಲಿ ಲಿಂಗಾಧಾರಿತ ತಾರತಮ್ಯ ಇರುವ ಅಂಶ ಸ್ಪಷ್ಟವಾಗುತ್ತದೆ. ಪ್ರತಿ ಜಿಲ್ಲೆಯಲ್ಲೂ ಮಹಿಳಾ ಕೂಲಿಕಾರ್ಮಿಕರು ಕಡಿಮೆ ಕೂಲಿಗೆ ದುಡಿಯುತ್ತಿದ್ದು ಪುರುಷ ಕೂಲಿಗೆ ಹೋಲಿಸಿದರೆ ಮಹಿಳೆಯ ಕೂಲಿಯ ದರ ಪುರುಷರ ಕೂಲಿಯ ದರಕ್ಕಿಂತ ಕಡಿಮೆ ಇರುವುದು ಕಂಡುಬರುತ್ತದೆ.

ಅಂತೆಯೇ ಹಾವೇರಿ ಜಿಲ್ಲೆಯಲ್ಲಿ ೧೯೯೧ರ ಅವಧಿಯಲ್ಲಿ ಪುರುಷರ ಕೃಷಿ ಕೂಲಿಯ ದರ ಸರಾಸರಿ ೧೦.೨೫ ರೂ.ಗಳಿದ್ದು, ಮಹಿಳೆಯರ ಕೃಷಿ ಕೂಲಿಯ ದರ ೭.೬೮ ರೂ.ಗಳಷ್ಟಿದೆ. ಇಲ್ಲಿ ಪುರುಷ ಮತ್ತು ಮಹಿಳೆಯ ಕೂಲಿ ದರದಲ್ಲಿ ೨.೫೭ ರೂ.ಗಳಷ್ಟು ಅಂದರೆ ಪ್ರತಿಶತ ೩೩.೪೬ ರಷ್ಟು ವ್ಯತ್ಯಾಸವಿರುವುದು ಕಂಡುಬರುತ್ತದೆ. ಅದೇ ರೀತಿ ೨೦೦೧ ರ ಅವಧಿಯಲ್ಲಿ ಈ ಜಿಲ್ಲೆಯಲ್ಲಿನ ಕೃಷಿಕೂಲಿ ದರಗಳನ್ನು ಗಮನಿಸಿದಾಗ ಪುರುಷರ ಕೂಲಿ ದರ ೪೨.೯೮ ರೂ.ಗಳಿದ್ದು, ಮಹಿಳೆಯ ಕೂಲಿದರ ೩೭.೩೫ ರೂ.ಗಳಷ್ಟಿದೆ. ಇಲ್ಲೂ ಕೂಡಾ ಪುರುಷ ಮತ್ತು ಮಹಿಳೆಯರ ಕೂಲಿ ದರದ ನಡುವೆ ವ್ಯತ್ಯಾಸಗಳಿದ್ದು, ಆ ವ್ಯತ್ಯಾಸದ ಪ್ರಮಾಣ ೫.೬೩ ರೂ.ಗಳಷ್ಟಿದೆ. ಅಂದರೆ ಪ್ರತಿಶತ ೧೫.೦೭% ರಷ್ಟು ಸ್ತ್ರೀ ಮತ್ತು ಪುರುಷರ ಕೂಲಿಯ ನಡುವೆ ವ್ಯತ್ಯಾಸವಿರುವುದು ತಿಳಿದುಬರುತ್ತದೆ. ಆದರೆ ೧೯೯೧ರ ಅವಧಿಯಲ್ಲಿದ್ದ ಸ್ತ್ರೀ ಮತ್ತು ಪುರುಷರ ಕೃಷಿಕೂಲಿ ದರವು ೨೦೦೧ ರಷ್ಟೊತ್ತಿಗೆ ಅಧಿಕವಾಗಿರುವುದು ಕಂಡುಬರುತ್ತದೆ. ಆದರೂ ಸ್ತ್ರೀ ಪುರುಷರ ಕೂಲಿಯ ನಡುವಿನ ಅಂತರ ಮಾತ್ರ ಹಾಗೆ ಉಳಿದುಕೊಂಡು ಬಂದಿದೆ.

ಸಮಾನ ಕೆಲಸವನ್ನು ಸಮಾನ ಅವಧಿಯಲ್ಲಿ ಮಾಡಿದರೂ ಪುರುಷ ಮಾಡಿದ ಕೆಲಸವನ್ನು ಶ್ರೇಷ್ಠ ಎಂತಲೂ ಮಹಿಳೆ ಮಾಡಿದ ಕೆಲಸವನ್ನು ಕನಿಷ್ಠ ಎಂತಲೂ ಭಾವಿಸಿರುವುದರಿಂದ ಮಹಿಳೆಯರನ್ನು ಕಡಿಮೆ ಕೂಲಿಗೆ ದುಡಿಸಿಕೊಳ್ಳುವುದನ್ನು ಕೃಷಿಯಲ್ಲಿ ಕಾಣುತ್ತೇವೆ.

ಕೃಷಿ ಚಟುವಟಿಕೆಗಳಲ್ಲಿ ಮಹಿಳೆಯರು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಎಲ್ಲ ಚಟುವಟಿಕೆಗಳಲ್ಲಿ ಭಾಗಿಗಳಾಗಿರುತ್ತಾರೆ. ಆದರೆ ಕೂಲಿಗಾಗಿ ದುಡಿಯುವ ಮಹಿಳೆಯರು ದುಡಿಮೆಗಾರರೆನಿಸಿದರೂ ಪುರುಷ ದುಡಿಮೆಗಾರರಿಗೆ ಸಮವಲ್ಲ ಎನ್ನುವಂತೆ ಅಸಮಾನ ಕೂಲಿಯನ್ನು ಪಡೆಯುತ್ತಿದ್ದಾರೆ. ಅಲ್ಲದೆ ಕೃಷಿ ಭೂಮಿಯನ್ನು ಹೊಂದಿರುವ ಕುಟುಂಬಗಳಲ್ಲಿ ಮಹಿಳೆಯು ತಮ್ಮ ಹೊಲಗದ್ದೆಗಳಲ್ಲಿ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಾರೆಯಾದರೂ ಅವರ ಕೆಲಸ ದುಡಿಮೆ ಎಂದೂ ಪರಿಗಣಿಸಲ್ಪಡದೆ ಇರುವುದರಿಂದ ಅವರು ಆರ್ಥಿಕವಾಗಿ ಇತರರ ಮೇಲೆ ಅವಲಂಬನೆ ಹೊಂದಿರಬೇಕಾಗುತ್ತದೆ. ಅಲ್ಲದೆ ಪುರುಷರ ಕೃಷಿ ಚಟುವಟಿಕೆಗಳನ್ನು ಮಹಿಳೆಯು ಪೂರೈಸಬೇಕಾಗುತ್ತದೆ. ಹೀಗೆ ಪುರುಷನಿಗೆ ನೆರವಾಗುವ ಯಾವ ಕಾರ್ಯವು ಮಹಿಳೆಯ ದುಡಿಮೆಯೆಂದು ಪರಿಗಣಿತವಾಗುತ್ತಿಲ್ಲ. ಕೌಟುಂಬಿಕ ಕೆಲಸ ಕಾರ್ಯಗಳಂತೆ, ಕೃಷಿಯಲ್ಲಿನ ದುಡಿಮೆಯೂ Under value, unrecognised and unpaid ಆಗಿದೆ. "ಮಹಿಳೆಯ ದುಡಿಮೆಯು ಅಪಮೌಲ್ಯೀಕರಣ, ಅಮೌಲ್ಯೀಕರಣಗಳು ಸಮಾಜದಲ್ಲಿಯ ಆಕೆಯ ಸ್ಥಾನಮಾನಗಳು ಆಕೆಗಿರುವ ಅವಕಾಶಗಳು ಮತ್ತು ಲಿಂಗ ನಿರಪೇಕ್ಷ ನೀತಿಗಳ ಮೇಲೆ ಪರಿಣಾಮ ಬೀರುತ್ತದೆ" (HDR, 1995, 87). ಬಹುಪಾಲು ಸಮಾಜದಲ್ಲಿ ಮಹಿಳೆ ಪುರುಷನಿಗಿಂತ ದೀರ್ಘಕಾಲದ ಕೆಲಸಕಾರ್ಯಗಳನ್ನು ಮಾಡುತ್ತಾಳೆ.

ಆದರೆ ಆಕೆಯು ಪಡೆಯುವ ದುಡಿಮೆಯ ಪ್ರತಿಫಲ ಮಾತ್ರ ಯಾವಾಗಲೂ ಪುರುಷನಿಗಿಂತಲೂ ಕಡಿಮೆಯಾಗಿರುತ್ತದೆ. ಒಟ್ಟು ದುಡಿಮೆಯಲ್ಲಿ ಮಹಿಳೆಯು ಅರ್ಧಕ್ಕಿಂತಲೂ ಅಧಿಕವಾಗಿ ದುಡಿಮೆಯಲ್ಲಿ ಪಾಲ್ಗೊಳ್ಳುತ್ತಾರೆ. ಆದರೂ ವರಮಾನದಲ್ಲಿ ಪುರುಷನೇ ಸಿಂಹಪಾಲನ್ನು ಪಡೆದಿರುತ್ತಾನೆ. ಪುರುಷರ ದುಡಿಮೆಯು ಆರ್ಥಿಕತೆಗೆ ಕೊಡುಗೆಯಾಗಿ ಪರಿಣಮಿಸಿದರೆ ಮಹಿಳೆಯ ದುಡಿಮೆಯು Unpaid, unrecognised and undervalued ಆಗಿಯೇ ಮುಂದುವರೆಯುತ್ತದೆ.

**೨. ಕೃಷಿ ಒಡೆತನದಲ್ಲಿ ಮಹಿಳೆಯ ಪಾತ್ರ :**

ಕೃಷಿಯಲ್ಲಿ ಮಹಿಳೆ ಏನೆಲ್ಲಾ ಕಾರ್ಯ ನಿರ್ವಹಿಸಿದಾಗಲೂ ಕೃಷಿ ಎನ್ನುವುದು ಪುರುಷ ಪ್ರಧಾನ ಕಸುಬು ಎಂಬ ಮನೋಭಾವ ರೂಢಿಗತವಾಗಿದೆ. ಅಲ್ಲದೆ ಕೃಷಿಯಲ್ಲಿ ಮಹಿಳೆಗೆ ಯಾವುದೇ ರೀತಿಯ ಅಧಿಕಾರಯುತ ಸ್ಥಾನಮಾನಗಳಿರುವುದು ಕಂಡುಬರುವುದಿಲ್ಲ.

ಆದರೆ ಭಾರತ ಸಂವಿಧಾನದಲ್ಲಿ ೧೯೫೬ ರಲ್ಲಿ ಹಿಂದೂ ಉತ್ತರಾಧಿಕಾರತ್ವದ ಕಾಯ್ದೆ (The Hindu Succession Act of 1956)ಯನ್ನು ಜಾರಿಗೆ ತರಲಾಗಿದೆ. ಈ ಕಾಯಿದೆಯು ಆಸ್ತಿಯ ಉತ್ತರಾಧಿಕಾರತ್ವದ ವಿಷಯದಲ್ಲಿ ಸ್ತ್ರೀಯರಿಗೆ ಮತ್ತು ಪುರುಷರಿಗೆ ಸರಿಸಮಾನವಾದ ಹಕ್ಕುಗಳನ್ನು ನೀಡಿದೆ. ಇದು ಆಸ್ತಿಯ ಹಕ್ಕನ್ನು ರಕ್ತ ಸಂಬಂಧದ ಆಧಾರದ ಮೇಲೆ ನಿರ್ಧರಿಸುತ್ತದೆ. ಸಾಂಪ್ರದಾಯಿಕ ಹಿಂದೂ ಸಂಹಿತೆಯ ಪ್ರಕಾರ ಸ್ತ್ರೀಯರಿಗೆ ಆಸ್ತಿಯ ಉತ್ತರಾಧಿಕಾರತ್ವದ ಹಕ್ಕಿರಲಿಲ್ಲ. ಕೇವಲ ಗಂಡು ಮಕ್ಕಳಿಗೆ ಮಾತ್ರ ತಮ್ಮ ತಂದೆಯ ಆಸ್ತಿಗೆ ಉತ್ತರಾಧಿಕಾರಿಗಳಾಗುವ ಅವಕಾಶವಿತ್ತು. ಆದರೆ ಈ ಕಾಯ್ದೆಯ ಪ್ರಕಾರ ವ್ಯಕ್ತಿಯ ಮರಣದ ನಂತರ ಆತನ ಆಸ್ತಿಯು ಆತನ ಪತ್ನಿ, ವಿವಾಹಿತ ಹಾಗೂ ಅವಿವಾಹಿತ ಗಂಡು ಮಕ್ಕಳು ಹಾಗೂ ಹೆಣ್ಣು ಮಕ್ಕಳಿಗೆ ಸಮಾನವಾಗಿ ಹಂಚಲ್ಪಡುತ್ತದೆ. ಈ ಕಾಯಿದೆಯು ಹೆಣ್ಣು ಮಕ್ಕಳಿಗೂ ತಮ್ಮ ತಂದೆಯ ಆಸ್ತಿಗೆ ಉತ್ತರಾಧಿಕಾರಿಯಾಗುವ ಅವಕಾಶ ಕಲ್ಪಿಸಿದೆ. ಇಂದು ಹೆಣ್ಣು ಮಕ್ಕಳೂ ಸಹ ತಮ್ಮ ತಂದೆಯ ಆಸ್ತಿಯಲ್ಲಿ ತನ್ನ ಸಹೋದರರಿಗೆ ಸರಿಸಮಾನವಾಗಿ ಆಸ್ತಿಯಲ್ಲಿ ಭಾಗ ಪಡೆಯಬಹುದಾಗಿದೆ. ಅಲ್ಲದೆ ಅದನ್ನು ಸ್ವತಃ ಅನುಭೋಗಿಸುವ ಮತ್ತು ಮಾರುವ ಸಂಪೂರ್ಣ ಹಕ್ಕನ್ನು ಅವಳು ಪಡೆದಿರುತ್ತಾಳೆ.

ಅಲ್ಲದೆ ಆಸ್ತಿಯ ವಿಷಯಕ್ಕೆ ಸಂಬಂಧಿಸಿದಂತೆ ಸಂವಿಧಾನದಲ್ಲಿ ಉಲ್ಲೇಖಿತವಾದ ಇನ್ನೊಂದು ಕಾಯಿದೆ ಎಂದರೆ ೧೯೫೬ರಲ್ಲಿ ಅಪ್ರಾಪ್ತ ವಯಸ್ಸು ಮತ್ತು ಪೋಷಕರ ಕಾಯಿದೆಯನ್ನು ಜಾರಿಗೆ ತರಲಾಗಿದೆ. ಅಪ್ರಾಪ್ತ ಮಕ್ಕಳಿಗೋಸ್ಕರ ಪೋಷಕರನ್ನು ನೇಮಿಸುವ ವಿಷಯದಲ್ಲಿ ಪುರುಷರಿಗಿದ್ದ ಹಕ್ಕನ್ನು ಸ್ತ್ರೀಯರಿಗೂ ಕಲ್ಪಿಸಿಕೊಡುವ ಸದುದ್ದೇಶದಿಂದ ಈ ಕಾಯಿದೆಯನ್ನು ಜಾರಿಗೆ ತರಲಾಗಿದೆ. ಈ ಕಾಯಿದೆಯ ಪ್ರಕಾರ ಗಂಡನು ಮರಣ ಹೊಂದಿದ್ದರೆ ಆತನು ಹಿಂದೂ ಧರ್ಮವಿಂದ ಬೇರೆ ಧರ್ಮಕ್ಕೆ ಮತಾಂತರ ಹೊಂದಿದರೆ ಇಲ್ಲವೆ ಸನ್ಯಾಸತ್ವ ಸ್ವೀಕರಿಸಿದರೆ ಹೆಂಡತಿಯಾದವಳು ಅಪ್ರಾಪ್ತ ಮಕ್ಕಳ ಸಂರಕ್ಷಕರನ್ನು ನೇಮಿಸುವ ಹಕ್ಕನ್ನು ಪಡೆದಿದ್ದಾಳೆ.

ಆದರೆ ಆಸ್ತಿಯ ಹಕ್ಕನ್ನು ಮಹಿಳೆಯರಿಗೆ ಕೊಡಮಾಡಿದರೂ ಸಾಮಾಜಿಕ ವ್ಯವಸ್ಥೆಯಲ್ಲಿ ಅಂತಹ ಗಣನೀಯ ಬದಲಾವಣೆಗಳೇನು ಕಾಣಿಸದು. ಈಗಾಗಲೇ ಸಂವಿಧಾನದಲ್ಲಿ ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ಕೊಡಮಾಡಿದ ಈ ಸಂದರ್ಭದಲ್ಲೂ ಸಹ ಭೂಮಿಯ ಒಡೆತನ ಪುರುಷನ ಹೆಸರಿನಲ್ಲಿಯೇ ಇರುವುದನ್ನು ನಾವು ನೋಡುತ್ತೇವೆ. ಉದಾಹರಣೆಗೆ, ಹಾವೇರಿ ಜಿಲ್ಲೆಯ 'ಶಿಗ್ಗಾಂವ' ಎಂಬ ಊರಿನಲ್ಲಿರುವ ಭೂ ಒಡೆತನ ಹೊಂದಿದವರ ವಿವರಗಳನ್ನು ಗಮನಿಸಿದರೆ,

**ಶಿಗ್ಗಾಂವ ಗ್ರಾಮದಲ್ಲಿ ಭೂ ಒಡೆತನ ಹೊಂದಿದವರ ವಿವರ**

ಕೋಷ್ಟಕ : ೭.೩

| ಜಾತಿವಾರು | ಮಹಿಳೆಯರ ಸಂಖ್ಯೆ | ಹೊಂದಿರುವ ಜಮೀನು (ಎಕರೆ-ಗುಂಟೆ) | ಪುರುಷರ ಸಂಖ್ಯೆ | ಹೊಂದಿರುವ ಜಮೀನು (ಎಕರೆ-ಗುಂಟೆ) |
|---|---|---|---|---|
| ಪರಿಶಿಷ್ಟ ಜಾತಿ | ೦೬ | ೨೯.೦೪ | ೪೨ | ೧೬೮.೩೨ |
| ಪರಿಶಿಷ್ಟ ಪಂಗಡ | ೦೩ | ೪.೧೭ | ೦೯ | ೩೨.೨೧ |
| ಹಿಂದುಳಿದ ವರ್ಗ | ೧೩೭ | ೭೮೪.೦೭ | ೧೦೮೮ | ೫೨೬೧.೧೩ |
| ಒಟ್ಟು | ೧೪೬ | ೮೧೭.೨೮ | ೧೧೩೯ | ೫೪೬೨.೨೬ |

ಮಾಹಿತಿ ನೀಡಿದವರು ಶ್ರೀ ಹೆಚ್.ಪಾಟೀಲ (ಗ್ರಾಮಸೇವಕರು, ಗ್ರಾಮಲೆಕ್ಕಾಧಿಕಾರಿಗಳ ಕಚೇರಿ)

ಈ ಮೇಲಿನ ಕೋಷ್ಟಕವನ್ನು ಗಮನಿಸಿದಾಗ, ಶಿಗ್ಗಾಂವನಲ್ಲಿ ಪರಿಶಿಷ್ಟ ಜಾತಿಯವರಲ್ಲಿ ಒಟ್ಟು ೬ ಜನ ಮಹಿಳೆಯರು ಮಾತ್ರ ಭೂ ಒಡೆತನ ಹೊಂದಿದ್ದು, ಅವರು ಹೊಂದಿರುವ ಸಾಗುವಳಿ ಕ್ಷೇತ್ರ ೨೯ ಎಕರೆ ೪ ಗುಂಟೆಯಾಗಿದೆ. ಅದೇ ರೀತಿ ಪರಿಶಿಷ್ಟ ಜಾತಿಯ ಪುರುಷರಲ್ಲಿ ಭೂ ಒಡೆತನ ಹೊಂದಿದ ಪುರುಷರ ಸಂಖ್ಯೆ ೪೨ ಇದ್ದು, ಇವರು ಹೊಂದಿರುವ ಜಮೀನು ೧೬೮ ಎಕರೆ ೩೨ ಗುಂಟೆಗಳಷ್ಟಿದೆ. ಇನ್ನು ಈ ಊರಿನಲ್ಲಿ ಒಟ್ಟು ಪರಿಶಿಷ್ಟ ಪಂಗಡಗಳಲ್ಲಿ ೩ ಮಹಿಳೆಯರು ಮಾತ್ರ ಭೂ ಒಡೆತನ ಹೊಂದಿದ್ದು, ಅವರು ಹೊಂದಿರುವ ಒಟ್ಟು ಸಾಗುವಳಿ ಭೂಮಿ ಕೇವಲ ೪ ಎಕರೆ ೧೭ ಗುಂಟೆಯಾಗಿದೆ. ಅದೇ ರೀತಿ ಪರಿಶಿಷ್ಟ ಪಂಗಡದ ಪುರುಷರಲ್ಲಿ ಭೂ ಒಡೆತನ ಹೊಂದಿದವರ ಸಂಖ್ಯೆ ೯ ಇದ್ದು, ಅವರು ಹೊಂದಿರುವ ಜಮೀನು ೩೨ ಎಕರೆ ೨೧ ಗುಂಟೆಯಾಗಿದೆ. ಅಂತೆಯೇ ಹಿಂದುಳಿದ ವರ್ಗದವರಲ್ಲಿ ಭೂ ಒಡೆತನ ಹೊಂದಿದ ಮಹಿಳೆಯರು ೧೩೭ ಜನರಿದ್ದು, ಈ ಮಹಿಳೆಯರು ಹೊಂದಿರುವ ಭೂಮಿ ೭೮೪ ಎಕರೆ ೭ ಗುಂಟೆಯಾಗಿದೆ. ಅಂತೆಯೇ ಹಿಂದುಳಿದ ವರ್ಗದ ಪುರುಷರಲ್ಲಿ ೧೦೮೮ ಜನ ಭೂ ಹಿಡುವಳಿಯನ್ನು ಹೊಂದಿದ್ದು, ಅವರು ಹೊಂದಿರುವ ಒಟ್ಟು ಭೂ ಹಿಡುವಳಿ ಕ್ಷೇತ್ರ ೫೨೬೧ ಎಕರೆ ೧೩ ಗುಂಟೆಯಾಗಿದೆ.

ಇಲ್ಲಿ ಒಟ್ಟು ಜಮೀನು ಖಾತೆಯನ್ನು ಹೊಂದಿದವರು ಅಂದರೆ ಭೂ ಒಡೆತನವನ್ನು ಹೊಂದಿರುವವರು ೧೨೮೫ ರಷ್ಟು ಜನರಿದ್ದಾರೆ. ಇದರಲ್ಲಿ ೧೧೩೯ ಜನ ಪುರುಷರಿದ್ದರೆ, ಜಮೀನು ಖಾತೆ ಹೊಂದಿದ ಅಥವಾ ಭೂ ಒಡೆತನ ಹೊಂದಿದ ಮಹಿಳೆಯರು ೧೪೬ ಜನ ಮಾತ್ರವೇ ಇದ್ದಾರೆ. ಅಂದರೆ ಇಲ್ಲಿ ಭೂ ಒಡೆತನ ಹೊಂದಿದ ಪುರುಷರ ಸಂಖ್ಯೆಗಿಂತ ಮಹಿಳೆಯರ ಸಂಖ್ಯೆ ಕಡಿಮೆ ಇರುವುದು ಕಂಡುಬರುತ್ತದೆ. ಅಲ್ಲದೆ ಈ ಊರಿನ ಒಟ್ಟು ಸಾಗುವಳಿ ಕ್ಷೇತ್ರ ೬೨೮೦ ಎಕರೆ ೧೪ ಗುಂಟೆ ಇದೆ. ಇದರಲ್ಲಿ ಪುರುಷರ ಹೆಸರಿನಲ್ಲಿ ೫೪೬೨ ಎಕರೆ ೨೬ ಗುಂಟೆಯಷ್ಟು ಸಾಗುವಳಿ ಕ್ಷೇತ್ರವಿದ್ದರೆ, ಮಹಿಳೆಯರ ಹೆಸರಿನಲ್ಲಿ ೮೧೭ ಎಕರೆ ೨೮ ಗುಂಟೆ ಮಾತ್ರವೇ ಇದೆ. ಅಂದರೆ ಮಹಿಳೆಯ ಒಡೆತನವಿರುವ ಸಾಗುವಳಿ ಭೂಮಿಯ ಪ್ರಮಾಣವು ಪುರುಷರ ಒಡೆತನದಲ್ಲಿರುವ ಸಾಗುವಳಿ ಭೂಮಿಯ ಪ್ರಮಾಣಕ್ಕಿಂತ ಕಡಿಮೆ ಇರುವುದನ್ನು ಕಾಣುತ್ತೇವೆ.

ಈ ಮೇಲಿನ ವಿವರಗಳಿಂದ ಭೂ ಒಡೆತನ ಹೊಂದಿದವರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗಿಂತ ಹಿಂದುಳಿದ ವರ್ಗಗಳ ಸಂಖ್ಯೆ ಅಧಿಕವಾಗಿದ್ದು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಸಂಖ್ಯೆ ಅತ್ಯಂತ ಕಡಿಮೆ ಪ್ರಮಾಣದಲ್ಲಿದೆ. ಅದೇ ರೀತಿ ಇಲ್ಲಿ ಕಂಡುಬರುವ ಬಹುಮುಖ್ಯವಾದ ಮತ್ತೊಂದು ಅಂಶವೆಂದರೆ, ಹಿಂದುಳಿದ ವರ್ಗದಲ್ಲಾಗಲಿ, ಪರಿಶಿಷ್ಟ ಜಾತಿಯಲ್ಲಾಗಲಿ ಇಲ್ಲವೆ ಪರಿಶಿಷ್ಟ ಪಂಗಡದವರಲ್ಲಾಗಲಿ ಭೂ ಒಡೆತನ ಹೊಂದಿದವರಲ್ಲಿ ಪುರುಷರ ಸಂಖ್ಯೆ ಅಧಿಕವಾಗಿದ್ದು, ಭೂ ಒಡೆತನ ಹೊಂದಿದ ಮಹಿಳೆಯರ ಸಂಖ್ಯೆ ಕಡಿಮೆ ಇರುವುದು ಕಂಡುಬರುತ್ತದೆ. ಅಂತೆಯೇ ಮಹಿಳೆ ಮತ್ತು ಪುರುಷರ ಪಾಲು ಅಧಿಕವಾಗಿದ್ದು, ಮಹಿಳೆಯರು ಹೊಂದಿರುವ ಭೂಮಿಯ ಪ್ರಮಾಣ ಕಡಿಮೆ ಇರುವುದನ್ನು ಕಾಣುತ್ತೇವೆ. ಆದರೆ ಈ ಊರಿನಲ್ಲಿ ಭೂ ಒಡೆತನ ಹೊಂದಿದವರ ಸಂಖ್ಯೆಗಿಂತ ಕೃಷಿ ಕಾರ್ಮಿಕರ ಸಂಖ್ಯೆ ಅಧಿಕವಾಗಿದೆ. ಇಲ್ಲಿ ಒಟ್ಟು ೬೯೦೫ ಜನ ಕೃಷಿ ಕಾರ್ಮಿಕರಿದ್ದು, ಅದರಲ್ಲಿ ೩೧೪೯ ಜನ ಮಹಿಳಾ ಕೃಷಿ ಕಾರ್ಮಿಕರಿದ್ದಾರೆ. ಈ ಮಹಿಳೆಯರು ಭೂಮಿಯನ್ನು ಹೊಂದಿರುವುದಿಲ್ಲ. ಅದಕ್ಕಾಗಿ ಕೃಷಿ ಕೂಲಿಯನ್ನು ಅವಲಂಬಿಸಿದ್ದಾರೆ. ಹೀಗೆ ಕೃಷಿ ಕೂಲಿಯನ್ನು ಅವಲಂಬಿಸಿದ ಮಹಿಳೆಯರ ಪ್ರಮಾಣ ಅಧಿಕವಾಗಿದೆ.

ಕೇವಲ ಹಾವೇರಿ ಜಿಲ್ಲೆಯ ಶಿಗ್ಗಾಂವದಲ್ಲಿ ಮಾತ್ರವಲ್ಲದೆ, ಭೂ ಒಡೆತನ ಹೊಂದಿದವರ ಸಂಖ್ಯೆಯನ್ನು ಗಮನಿಸಿದರೆ, ಭೂ ಒಡೆತನ ಹೊಂದಿದ ಪುರುಷರು ಅಧಿಕವಾಗಿಯೂ, ಮಹಿಳಾ ಭೂ ಒಡೆತನ ಹೊಂದಿದವರು ವಿರಳವಾಗಿರುವುದನ್ನು ಕಾಣುತ್ತೇವೆ. ಸಂವಿಧಾನದಲ್ಲಿ ಮಹಿಳೆಯರಿಗೆ ಆಸ್ತಿಯ ಹಕ್ಕು ನೀಡಿ ೫೧ ವರ್ಷಗಳು ಕಳೆದರೂ ಅದು ವಾಸ್ತವದಲ್ಲಿ ಇನ್ನೂ ಕನಸಿನ ಮಾತಾಗಿಯೇ ಉಳಿದಿರುವುದು ಈ ಮೇಲಿನ ವಿವರಗಳಿಂದ ತಿಳಿದುಬರುತ್ತದೆ. ಆಸ್ತಿಯ ಅಥವಾ ಒಡೆತನದ ಹಕ್ಕು ಕೆಲವು ಮಹಿಳೆಯರಿಗೆ ದಕ್ಕಿದೆಯಾದರೂ ಅದು ಕೇವಲ ನಾಮಕಾವಸ್ತೆಯದ್ದಾಗಿರುತ್ತದೆ. ಏಕೆಂದರೆ ಆಸ್ತಿಯೇನೊ ಮಹಿಳೆಯ ಹೆಸರಿನಲ್ಲಿರುತ್ತದೆ. ಆದರೆ ಅದರ ಮೇಲೆ ಯಾವುದೇ ಬಗೆಯ ನಿರ್ಣಯಾತ್ಮಕವಾದ ಹಕ್ಕು ಅವಳಿಗಿರದು. ಆಕೆಯ ಗಂಡ ಇಲ್ಲವೆ, ಆಕೆಯ ಮಾವ,

ಭಾವ, ಭಾಮೈದುನರ ಇಲ್ಲವೆ, ಆಕೆಯ ಸಹೋದರರ ಅನುಕೂಲಕ್ಕೆ ತಕ್ಕಂತೆ ಆ ಭೂಮಿ ಅಥವಾ ಆಸ್ತಿ ಬಳಕೆಯಾಗುತ್ತದೆ.

ಕೆಲವು ಕುಟುಂಬಗಳಲ್ಲಿ ಮಹಿಳೆಯ ಹೆಸರಿನಲ್ಲಿ ಆಸ್ತಿ ಇರುವುದೇನೋ ನಿಜ ಆದರೆ ಇದು ಮಹಿಳೆ ಆರ್ಥಿಕವಾಗಿ ಸಬಲಳಾಗಲಿ ಎಂದಾಗಲಿ ಅಥವಾ ಮಹಿಳೆಯ ಮೇಲಿನ ಇನ್ನಾವುದೋ ಕಾಳಜಿಯಿಂದಾಗಲಿ ಆಸ್ತಿಯನ್ನು ಅವಳ ಹೆಸರಿಗೆ ಮಾಡಿರುವುದಿಲ್ಲ. ಹೀಗೆ ಮಹಿಳೆಯ ಹೆಸರಿಗೆ ಆಸ್ತಿ ಮಾಡಿರುವ ಹಿಂದೆಯೂ ಬಲವಾದ ರಾಜಕಾರಣವಿದೆ. ತುಂಬಾ ಶ್ರೀಮಂತ ಕುಟುಂಬಗಳಲ್ಲಿ ಆಸ್ತಿ ಅಧಿಕವಾಗಿರುವುದು ಸಹಜ. ಆಗ ಒಬ್ಬ ವ್ಯಕ್ತಿಯ ಹೆಸರಿನಲ್ಲಿಯೇ ಎಲ್ಲ ಆಸ್ತಿಯೂ ಇದ್ದರೆ ಸರಕಾರ ವಿಧಿಸಿದ ಆದಾಯ ಮಿತಿಗಿಂತ ಅಧಿಕವಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಹೆಂಡತಿಯ ಹೆಸರಿನಲ್ಲೋ, ತಾಯಿಯ ಹೆಸರಿನಲ್ಲೋ ಆಸ್ತಿಯನ್ನು ವರ್ಗಾಯಿಸಲಾಗುತ್ತದೆ. ಹೀಗೆ ಆಸ್ತಿ ವರ್ಗಾಯಿಸುವುದರಿಂದ ಸರಕಾರ ವಿಧಿಸುವ ಆಸ್ತಿಯ ಮೇಲಿನ ಹೆಚ್ಚುವರಿ ತೆರಿಗೆಯಿಂದ ಮುಕ್ತವಾಗಬಹುದೆಂಬ ಉದ್ದೇಶದಿಂದ ಮಹಿಳೆಗೆ ಇಲ್ಲಿ ಒಡೆತನ ಸಿಕ್ಕಿರುತ್ತದೆಯೇ ಹೊರತು ಅದು ಮಹಿಳೆಗೆ ದೊರೆತ ನೈಜ ಒಡೆತನವಾಗಿರದೆ ಕೇವಲ ನಾಮಮಾತ್ರ ಒಡೆತನವಾಗಿರುತ್ತದೆ.

ಇನ್ನು ಕೆಲವು ಬೆರಳೆಣಿಕೆಯ ಮಧ್ಯಮ ವರ್ಗದ ಕುಟುಂಬಗಳಲ್ಲಿ ಆಸ್ತಿಯು ಮಹಿಳೆಯರ ಹೆಸರಿನಲ್ಲಿರುವುದು ಕಂಡುಬರುತ್ತದೆ. ಇಲ್ಲೂ ಕೂಡ ಅಷ್ಟೆ, ಮಹಿಳೆ ನಾಮಮಾತ್ರ ಒಡೆತನ ಹೊಂದಿದವಳಾಗಿದ್ದು ನೈಜ ಒಡೆತನ ಪುರುಷನಿಂದಲೇ ನಡೆಯುತ್ತಿರುತ್ತದೆ. ಸರಕಾರ ಕಾಲಕಾಲಕ್ಕೆ ರೈತರಿಗಾಗಿ ಕೊಡಮಾಡುವ ಬ್ಯಾಂಕ್ ಲೋನ್, ರೈತರಿಗೆ ಕೊಡುವ ಸಬ್ಸಿಡಿ.... ಇತ್ಯಾದಿ. ಈ ರೀತಿಯ ಸರಕಾರದ ಸೌಲಭ್ಯವನ್ನು ಪಡೆಯುವ ಉದ್ದೇಶದಿಂದ ಮಹಿಳೆಯರ ಹೆಸರಿಗೆ ಆಸ್ತಿಯನ್ನು ಮಾಡಿರುತ್ತಾರೆಯೇ ಹೊರತು ಬೇರಾವ ಕಾರಣಗಳಿಂದಲ್ಲ.

ಸಂವಿಧಾನ ಬದ್ಧವಾದ ಮಹಿಳೆಯರಿಗೆ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕಿದ್ದಾಗಲೂ ಮಹಿಳೆಯರ ಬದುಕಿನಲ್ಲಾಗಲಿ ಅವರ ಸ್ಥಿತಿಗತಿಗಳಲ್ಲಾಗಲಿ ಅಂತಹದ್ದೇನು ವಿಶೇಷವಾದ ಇಲ್ಲವೆ ಗುರುತರವಾದ ಬದಲಾವಣೆಯಾಗದೆ ಇದು ಅವಳನ್ನು ಮತ್ತಷ್ಟು ಸಂಕಷ್ಟಕ್ಕೆ ತಂದೊಡ್ಡಿದೆ. ಏಕೆಂದರೆ ಮಹಿಳೆಗೆ ಆಸ್ತಿಯಲ್ಲಿ ಪಾಲು ನೀಡಿ ಅವಳನ್ನು ಆರ್ಥಿಕವಾಗಿ ಸಬಲಳನ್ನಾಗಿ ಮಾಡಬೇಕೆಂಬ ಸಂವಿಧಾನದ ಆಲೋಚನೆಯೇನೋ ಒಳ್ಳೆಯದೆ. ಆದರೆ ಅದು ವಾಸ್ತವದಲ್ಲಿ ನಡೆಯುತ್ತಿರುವುದೇ ಬೇರೆಯಾಗಿದೆ.

ತಂದೆಯ ಸಾವಿನ ನಂತರ ಮದುವೆಯಾಗಿ ಹೋದ ಹೆಣ್ಣು ಮಕ್ಕಳು ತಮ್ಮ ಸಹೋದರರಲ್ಲಿ ಆಸ್ತಿಯನ್ನು ಕೇಳುವುದರಿಂದ ಅನೇಕ ಸಂಬಂಧಗಳು ಒಡೆದು ಹೋಗುತ್ತಿವೆ. ಅಂದರೆ ಇಲ್ಲಿ ಆ ಹೆಣ್ಣು ಆಸ್ತಿಯನ್ನು ಪಡೆದುಕೊಳ್ಳಬೇಕೋ ಇಲ್ಲವೆ ತನ್ನ ತವರಿನ ಸಂಬಂಧವನ್ನು ಉಳಿಸಿಕೊಳ್ಳಬೇಕೋ ಎನ್ನುವ ಸಂದಿಗ್ಧ ಪರಿಸ್ಥಿತಿ ಎದುರಾಗುತ್ತದೆ. ಅವಳೇನಾದರೂ ಆಸ್ತಿಯಲ್ಲಿ ಪಾಲು ತೆಗೆದುಕೊಂಡರೆ ತನ್ನ ತವರಿನ ಸಂಬಂಧಿಕರನ್ನು ದೂರ ಮಾಡಿಕೊಳ್ಳಬೇಕಾದ ಪರಿಸ್ಥಿತಿಗಳೇ ಹೆಚ್ಚು ಹೆಚ್ಚಾಗಿ ಕಂಡುಬರುತ್ತವೆ.

ಕೆಲವು ಸಂದರ್ಭಗಳಲ್ಲಿ ಆಸ್ತಿಯ ಹಕ್ಕಿನಲ್ಲಿ ಹೆಣ್ಣಿಗೆ ಕೊಡಮಾಡಿದ ಅವಕಾಶ, ಮದುವೆಯಾದ ಹೆಣ್ಣಿನ ಮಾನಸಿಕ ನೆಮ್ಮದಿಯನ್ನು ಹಾಳು ಮಾಡುತ್ತದೆ. ಇತ್ತ ಗಂಡನ ಮನೆಯ ಕಡೆಯವರು ತವರುಮನೆಯಿಂದ ಆಸ್ತಿಯನ್ನು ತೆಗೆದುಕೊಂಡು ಬಾ ಎಂದು ಅವಳನ್ನು ಹಿಂಸಿಸುವಂತಹದ್ದು, ಅತ್ತ ಆಸ್ತಿಯನ್ನು ಕೇಳಿದರೆ ತನ್ನ ತವರಿನ ಸಂಬಂಧಗಳನ್ನು ಕಡಿದುಕೊಳ್ಳಬೇಕಾದಂತಹ ಅಥವಾ ಸಹೋದರ ವರ್ಗದವರಿಂದ ದೂಷಣೆಗೆ ಒಳಗಾಗುವಂತಹ ಪರಿಸ್ಥಿತಿ ಮಹಿಳೆಯದು. ತಂದೆಯ ಆಸ್ತಿಯಲ್ಲಿ ಭಾಗ ಕೇಳಿದರೆ ತವರಿನವರು ದೂರಾಗುತ್ತಾರೆ. ಆಸ್ತಿ ತರದಿದ್ದರೆ ಗಂಡನ ಕಡೆಯವರನ್ನು ದೂರ ಮಾಡಿಕೊಂಡು ತವರು ಸೇರಬೇಕಾದ ಪರಿಸ್ಥಿತಿ ಬಂದೊದಗುತ್ತದೆ. ಅಂದರೆ ಮಹಿಳೆಗೆ ಹಕ್ಕುಗಳನ್ನು ಕೊಡಮಾಡಿದಾಗಲೂ ಅವುಗಳನ್ನು ಪಡೆದುಕೊಳ್ಳಲಾಗದ ಮತ್ತು ಅನುಭವಿಸಲಾಗದ ಸಂದಿಗ್ಧತೆಯಲ್ಲಿ ಮಹಿಳೆ ಇರುವಳು.

**ಮಹಿಳಾ ಒಡೆತನದಲ್ಲಿರುವ ಕೃಷಿಯ ಬಗೆಗಿನ ಸಾಮಾಜಿಕ ಅಭಿಪ್ರಾಯ**

ಕೃಷಿಯಲ್ಲಿ ಮಹಿಳೆ ಮುಖ್ಯವಾಹಿನಿಯಲ್ಲಿ ಕಾಣಿಸಿಕೊಂಡಿದ್ದೆಯಾದ ಸಂದರ್ಭದಲ್ಲಿ ಸಮಾಜ ಅಂತಹದ್ದನ್ನು ಸಹಜವಾಗಿ ಕಾಣುವುದಿಲ್ಲ. ಸಮಾಜ ಅವರನ್ನು ವಿಶೇಷವಾದ ದೃಷ್ಟಿಯಿಂದಲೇ ನೋಡುತ್ತಿರುತ್ತವೆ. ಮಹಿಳೆಯ ಒಡೆತನದಲ್ಲಿ ಮಾಡುವ ಕೃಷಿಯ ಬಗೆಗೆ ಸಮಾಜಕ್ಕೆ ಒಳ್ಳೆಯ ಅಭಿಪ್ರಾಯವಿದ್ದಂತೆ ಕಾಣಿಸದು. ಅಂತಹ ಕೃಷಿಯ ಬಗೆಗೆ ಜನರಿಗೆ ಅಸಹನೆ ಇದೆ. ಆ ಕಾರಣಕ್ಕಾಗಿಯೇ ಒಡೆಯನಿಲ್ಲದ ಭೂಮಿ ಕೆಡುಕಿಗೆ ಕಾರಣ ಎನ್ನುವಂತಹ ನಂಬಿಕೆಯೊಂದು ಜನರಲ್ಲಿರುವುದನ್ನು ನಾವು ಕಾಣುತ್ತೇವೆ. ಪರೋಕ್ಷವಾಗಿ ಇದು ಭೂಮಿಗೆ ಒಡೆಯನೆಂಬುವವ ಇರಬೇಕು ಎನ್ನುವುದನ್ನು ಧ್ವನಿಸುತ್ತದೆ. ಇದರಿಂದ ಒಡೆತನದ ವಿಷಯದಲ್ಲಿ ಪುರುಷನಿಗೆ ಪ್ರಾಶಸ್ತ್ಯಕೊಟ್ಟಿರುವುದು ತಿಳಿದುಬರುತ್ತದೆ. ಅಲ್ಲದೆ ಒಡೆಯನಿಲ್ಲದಿದ್ದರೆ ಭೂಮಿ ಕೆಡುಕಿಗೆ ಕಾರಣವಾಗುತ್ತದೆ ಎನ್ನುವ ಮಾತಲ್ಲಿ ಭೂಮಿ ಒಡೆಯನ ಅನುಪಸ್ಥಿತಿಯಲ್ಲಿ ಆತನ ಹೆಂಡತಿ ಇಲ್ಲವೆ ಆಳುಕಾಳುಗಳ ಕೈ ಸೇರುತ್ತದೆ. ಹಾಗೆ ಒಡೆಯನ ದೇಕರೇಕಿ(ಮುತುವರ್ಜಿ)ಯಿಂದ ದೂರವಾದ ಭೂಮಿ ಹಾಳಾಗುತ್ತದೆ ಎಂಬುದನ್ನು ಇದು ತಿಳಿಸುತ್ತದೆ. ಒಂದರ್ಥದಲ್ಲಿ ಇದು ಮಹಿಳಾ ಒಡೆತನಕ್ಕೂ ಅನ್ವಯಿಸುವ ಮಾತಾಗಿದೆ. ಇದರಿಂದ ಮಹಿಳಾ ಒಡೆತನ ಇರುವ ಕೃಷಿಯ ಬಗೆಗೆ ಸಮಾಜದ ಧೋರಣೆ ಎಂತಹದ್ದು ಎಂಬುದು ತಿಳಿದುಬರುತ್ತದೆ. ಮಹಿಳೆಯ ನೇತೃತ್ವದಲ್ಲಿ ವ್ಯವಸಾಯ ಮಾಡಲ್ಪಡುತ್ತಿದ್ದರೆ ಅಂತಹ ಮನೆಯ ಕಮ್ತ (ಕೃಷಿ) ಇನ್ನೇನು ಏಳಿಗೆ ಆಗೊಲ್ಲ (ಉದ್ಧಾರ ಆಗೊಲ್ಲ) ನೆಲಕಚ್ಚಿ ಹೋಗುತ್ತದೆ ಎನ್ನುವ ರೀತಿಯಲ್ಲಿ ಅಸಮಾಧಾನವನ್ನು ವ್ಯಕ್ತಪಡಿಸುವರನ್ನು ನಾವು ಈಗಲೂ ಕಾಣುತ್ತೇವೆ.

ಒಟ್ಟಿನಲ್ಲಿ ಮಹಿಳೆ ಪುರುಷ ಹಿಡಿತದಿಂದ ಮುಕ್ತವಾಗುವ ಬಗೆಗೆ ಆರ್ಥಿಕವಾಗಿ ಸಬಲಳಾಗುವ ಬಗೆಗೆ ಸಮಾಜದ ವಿರೋಧವಿದ್ದಂತೆ ಕಾಣುತ್ತದೆ. ಆ ಕಾರಣಕ್ಕೆ ಆಸ್ತಿಯನ್ನು ಮಹಿಳೆಗೆ ಬಿಟ್ಟು ಕೊಡಬೇಕಾಗಿ ಬಂದ ಕೆಲವು ಅನಿವಾರ್ಯ ಸಂದರ್ಭಗಳಲ್ಲೂ ಅನೇಕ ವಾದ-ವಿವಾದಗಳು ಉದ್ಭವಿಸುತ್ತವೆ.

ಆಸ್ತಿಯ ಹಕ್ಕನ್ನು ಮಹಿಳೆಗೆ ಕೊಡಮಾಡಿದಾಗಲೂ ಅದನ್ನು ತನ್ನಿಚ್ಛೆಯಂತೆ ತನ್ನ ಸಬಲೀಕರಣಕ್ಕಾಗಿ ಬಳಸುವ ನಿಜವಾದ ಅಧಿಕಾರವನ್ನು ಮಹಿಳೆಗೆ ಪುರುಷ ಪ್ರಧಾನ ವ್ಯವಸ್ಥೆ ಇನ್ನೂ ಕೊಡಮಾಡಿರುವುದಿಲ್ಲ. ಹಾಗಾಗಿ ಮಹಿಳೆಯರ ಬಗೆಗಿನ ನಮ್ಮ ಸಾಮಾಜಿಕ ನಿಲುವುಗಳು, ಮೌಲ್ಯಗಳು ಬದಲಾಗದ ಹೊರತು ಇಂತಹ ನೂರೆಂಟು ಕಾಯ್ದೆಗಳು ಬಂದರೂ ಮಹಿಳೆಯ ಸ್ಥಿತಿಗತಿಗಳು ಬದಲಾಗುವುದು ಸಂದೇಹವೇ. ಆದರೂ ಮಹಿಳೆಯರಿಗೆ ಸಂವಿಧಾನ ಬದ್ಧವಾಗಿಯಾದರೂ ಆಸ್ತಿಯ ಹಕ್ಕನ್ನು ಕೊಡಮಾಡಿದ್ದು ಪ್ರಶಂಸನಾರ್ಹವೇ ಸರಿ. ಕೊನೆ ಪಕ್ಷ ಮಹಿಳೆ ಕುಟುಂಬದಲ್ಲಿ ತನ್ನ ಅಸ್ತಿತ್ವ ಕಳೆದುಕೊಳ್ಳಬೇಕಾದ ಸಂದರ್ಭದಲ್ಲಿ ಆಸ್ತಿಯಲ್ಲಿ ತನ್ನದು ಹಕ್ಕಿದೆ ಎಂದು ಧ್ವನಿಯೆತ್ತುವುದಕ್ಕಾದರೂ ಕಾನೂನು ಸಹಾಯಕವಾಗಿದೆ. ಅಲ್ಲದೆ ಭೂ ಒಡೆತನ ಹೊಂದಿದ ಮಹಿಳೆಯರೆಲ್ಲರೂ ಸಂಪೂರ್ಣವಾಗಿ ಅದರ ಲಾಭ ಪಡೆಯುತ್ತಿಲ್ಲ ಎಂದು ಹೇಳಲಿಕ್ಕಾಗದು. ಏಕೆಂದರೆ ಕೆಲವು ವಿಧವೆಯರ ಬಾಳಿಗೆ ಈ ಆಸ್ತಿಯ ಹಕ್ಕು ಇರುವುದು ಆಶಾಕಿರಣವಾಗಿದೆ. ಗಂಡನನ್ನು ಕಳೆದುಕೊಂಡು ನಿರ್ಗತಿಕರಾಗುವ ಇಲ್ಲವೆ ಪರಾವಲಂಬಿಗಳಾಗಿ ಬದುಕು ಸಾಗಿಸಬೇಕಾದ ಅನಿವಾರ್ಯತೆಯನ್ನು ತಪ್ಪಿಸಿ ಅವರು ಸಹಾ ಸಮಾಜದಲ್ಲಿ ಇತರರಂತೆ ಸ್ವಾವಲಂಬಿಗಳಾಗಿ ಬದುಕುವುದಕ್ಕೆ ದಾರಿ ಮಾಡಿಕೊಟ್ಟಿರುವ ನಿದರ್ಶನಗಳು ಸಹ ನಮ್ಮ ನಡುವಿರುವುದನ್ನು ಕಾಣುತ್ತೇವೆ.

ನಿಜವಾಗಿಯೂ ಕೃಷಿ ಕ್ಷೇತ್ರದಲ್ಲಿ ಶ್ರಮವಹಿಸಿ ದುಡಿಯುತ್ತಿರುವ ಕೃಷಿ ಕಾರ್ಮಿಕರ ಸಂಖ್ಯೆಯನ್ನು ಗಮನಿಸಿದರೆ ಅಲ್ಲಿ ಪುರುಷ ದುಡಿಮೆಗಾರರಿಗಿಂತ ಮಹಿಳಾ ದುಡಿಮೆಗಾರರ ಸಂಖ್ಯೆ ಅಧಿಕವಾಗಿರುವುದನ್ನು ಕಾಣುತ್ತೇವೆ.

**ಹಾವೇರಿ ಜಿಲ್ಲೆಯ ಕೃಷಿಕಾರ್ಮಿಕರು**

ಕೋಷ್ಟಕ : ೭.೪

| ಕ್ರ.ಸಂ. | ತಾಲ್ಲೂಕು | ಗಂಡು | ಹೆಣ್ಣು | ಒಟ್ಟು |
|---|---|---|---|---|
| ೧ | ಬ್ಯಾಡಗಿ | ೧೦೭೭೭ | ೧೫೨೩೬ | ೨೬೦೧೩ |
| ೨ | ಹಾನಗಲ್ಲು | ೨೨೫೪೦ | ೨೪೬೮೭ | ೪೭೨೨೮ |
| ೩ | ಹಾವೇರಿ | ೨೪೩೭೩ | ೨೬೯೭೦ | ೫೧೩೪೩ |
| ೪ | ಹಿರೇಕೆರೂರು | ೧೮೨೦೦ | ೨೪೪೪೦ | ೪೨೬೪೦ |
| ೫ | ರಾಣೆಬೆನ್ನೂರು | ೨೨೯೫೯ | ೩೦೭೦೪ | ೫೩೬೬೩ |
| ೬ | ಸವಣೂರು | ೧೭೦೧೨ | ೧೬೫೯೯ | ೩೩೬೧೧ |
| ೭ | ಶಿಗ್ಗಾಂವ | ೧೮೧೧೫ | ೧೮೬೬೨ | ೩೬೭೭೭ |
| | ಒಟ್ಟು | ೧೩೩೯೭೭ | ೧೫೭೨೯೮ | ೨೯೧೨೭೫ |

(ಕೃಪೆ : ಹಾವೇರಿ ಜಿಲ್ಲಾ ಅಂಕಿ-ಅಂಶಗಳ ನೋಟ, ೨೦೦೪-೦೫)

ಹಾವೇರಿ ಜಿಲ್ಲೆಯಲ್ಲಿ ಒಟ್ಟು ೨೯೧೨೭೫ ಜನ ಕೃಷಿ ಕಾರ್ಮಿಕರಿದ್ದು, ಅದರಲ್ಲಿ ಪುರುಷ ಕೃಷಿಕಾರ್ಮಿಕರ ಸಂಖ್ಯೆ ೧೩೩೯೭೭ ಇದ್ದು, ಮಹಿಳಾ ಕೃಷಿ ಕಾರ್ಮಿಕರ ಸಂಖ್ಯೆ ೧೫೭೨೯೮ ರಷ್ಟಿದೆ. ಇದರಿಂದ ಹಾವೇರಿ ಜಿಲ್ಲೆಯಲ್ಲಿ ಕೃಷಿಯಲ್ಲಿ ದುಡಿಯುವ ಕಾರ್ಮಿಕರಲ್ಲಿ ಮಹಿಳೆಯರ ಸಂಖ್ಯೆ

ಅಧಿಕವಾಗಿರುವುದು ಕಂಡುಬರುತ್ತದೆ. ಕೇವಲ ಹಾವೇರಿ ಜಿಲ್ಲೆಯಲ್ಲಿ ಅಷ್ಟೇ ಅಲ್ಲದೆ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಕೂಡಾ ಕೃಷಿ ಕಾರ್ಮಿಕರಲ್ಲಿ ಮಹಿಳಾ ದುಡಿಮೆಗಾರರೇ ಅಧಿಕವಾಗಿರುವುದು ಕಂಡುಬರುತ್ತದೆ.

**ಕರ್ನಾಟಕದ ಜಿಲ್ಲಾವಾರು ಕೃಷಿ ಕಾರ್ಮಿಕರು-೨೦೦೧**

ಕೋಷ್ಟಕ : ೭.೫ (ಪ್ರತಿಶತ)

| ಪ್ರದೇಶ | ಜಿಲ್ಲೆ | ಕೃಷಿಕಾರ್ಮಿಕರು | |
|---|---|---|---|
| | | ಪುರುಷರು | ಮಹಿಳೆಯರು |
| ದಕ್ಷಿಣ ಕರ್ನಾಟಕ | ಬೆಂಗಳೂರು ಗ್ರಾಮೀಣ | ೧೩.೫೬ | ೩೩.೦೩ |
| | ಬೆಂಗಳೂರು ನಗರ | ೧.೬೩ | ೫.೩೮ |
| | ಚಿತ್ರದುರ್ಗ | ೨೧.೨೪ | ೫೨.೭೧ |
| | ದಾವಣಗೆರೆ | ೨೩.೩೧ | ೫೭.೧೦ |
| | ಕೋಲಾರ | ೧೮.೬೭ | ೪೦.೪೫ |
| | ಶಿವಮೊಗ್ಗ | ೨೧.೫೪ | ೫೨.೬೦ |
| | ತುಮಕೂರು | ೧೪.೬೨ | ೩೭.೭೩ |
| | ಚಾಮರಾಜನಗರ | ೩೪.೬೩ | ೫೯.೯೪ |
| | ಚಿಕ್ಕಮಗಳೂರು | ೧೪.೫೧ | ೩೩.೯೦ |
| | ದಕ್ಷಿಣ ಕನ್ನಡ | ೫.೧೧ | ೩.೫೧ |
| | ಹಾಸನ | ೮.೪೫ | ೨೪.೪೬ |
| | ಕೊಡಗು | ೩.೪೮ | ೫.೩೫ |
| | ಮಂಡ್ಯ | ೧೬.೭೧ | ೩೮.೭೦ |
| | ಮೈಸೂರು | ೧೬.೧೧ | ೩೮.೨೬ |
| | ಉಡುಪಿ | ೧೨.೮೮ | ೨೫.೧೯ |
| ಬಾಂಬೆ ಕರ್ನಾಟಕ | ಬಾಗಲಕೋಟೆ | ೨೬.೨೮ | ೬೧.೭೦ |
| | ಬೆಳಗಾವಿ | ೨೦.೧೯ | ೫೦.೮೯ |
| | ಬಿಜಾಪುರ | ೨೫.೯೫ | ೬೬.೫೧ |
| | ಧಾರವಾಡ | ೧೬.೧೮ | ೪೯.೭೯ |
| | ಗದಗ | ೨೪.೩೫ | ೬೧.೮೫ |
| | ಹಾವೇರಿ | ೩೦.೭೩ | ೬೭.೩೭ |
| ಹೈದ್ರಾಬಾದ್ ಕರ್ನಾಟಕ | ಉತ್ತರ ಕನ್ನಡ | ೯.೪೬ | ೨೫.೩೧ |
| | ಬಳ್ಳಾರಿ | ೨೫.೩೦ | ೬೦.೯೦ |
| | ಬೀದರ | ೨೫.೯೬ | ೫೯.೩೩ |
| | ಗುಲ್ಬರ್ಗಾ | ೨೩.೩೫ | ೬೫.೧೯ |
| | ಕೊಪ್ಪಳ | ೨೬.೫೫ | ೬೩.೯೬ |
| | ರಾಯಚೂರು | ೨೮.೦೭ | ೭೧.೩೧ |
| ಕರ್ನಾಟಕ | | ೧೭.೨೦ | ೪೩.೪೫ |
| ಭಾರತ | | ೨೦.೮೫ | ೩೮.೮೭ |

ಮೂಲ : ರಿಜಿಸ್ಟ್ರಾರ್ ಜನರಲ್ ಆಫ್ ಇಂಡಿಯಾ, ಜನಗಣತಿ ೨೦೦೧

ಕೃಪೆ : ಕರ್ನಾಟಕ ಮಾನವ ಅಭಿವೃದ್ಧಿ ವರದಿ, ೨೦೦೫

ಈ ಅಂಕಿ-ಅಂಶಗಳಿಂದ ದಕ್ಷಿಣ ಕನ್ನಡ ಜಿಲ್ಲೆಯೊಂದನ್ನು ಹೊರತುಪಡಿಸಿದರೆ ಕರ್ನಾಟಕದ ಉಳಿದೆಲ್ಲಾ ಜಿಲ್ಲೆಗಳ ಕೃಷಿಕಾರ್ಮಿಕರಲ್ಲಿ ಪುರುಷರಿಗಿಂತ ಮಹಿಳೆಯರೇ ಅಧಿಕವಾಗಿರುವುದು ಕಂಡುಬರುತ್ತದೆ. ಇದರಿಂದ ಕೃಷಿ ದುಡಿಮೆಯಲ್ಲಿ ಮಹಿಳೆಯರ ಪಾಲುದಾರಿಕೆ ಪ್ರಧಾನವಾದುದು ಮತ್ತು ಕೃಷಿಗೆ ಮಹಿಳೆಯ ಕೊಡುಗೆ ಅಧಿಕವಾಗಿದೆ ಎಂಬ ಅಂಶ ಸ್ಪಷ್ಟವಾಗುತ್ತದೆ.

ಕೃಷಿಯಲ್ಲಿ ಮಹಿಳೆಯರು ಎಲ್ಲಿ ಕಾಣಿಸಿಕೊಳ್ಳುತ್ತಾರೆ ಮತ್ತು ಎಲ್ಲಿ ಅದೃಶ್ಯಗೊಳ್ಳಲ್ಪಡುತ್ತಾರೆ ಎನ್ನುವುದು ಮತ್ತು ಪುರುಷರ ಪಾಲುದಾರಿಕೆ ಎಲ್ಲಿ ಅಧಿಕವಾಗಿರುತ್ತದೆ ಎನ್ನುವ ಅಂಶವನ್ನು ಇಲ್ಲಿ ಗಮನಿಸಿದಾಗ ಅಧಿಕಾರ, ಆಸ್ತಿ ಮೇಲಿನ ಒಡೆತನದ ಸಂದರ್ಭದಲ್ಲಿ ಅಧಿಕ ಸಂಖ್ಯೆಯಲ್ಲಿ ಕಾಣಿಸಿಕೊಳ್ಳುವ ಪುರುಷ ವರ್ಗ ದುಡಿಮೆಯ ವರ್ಗಕ್ಕೆ ಬಂದಾಗ ಏಕೆ ಅವರ ಸಂಖ್ಯೆ ಗೌಣವಾಗುತ್ತದೆ? ನಮ್ಮದು ಪುರುಷ ಪ್ರಧಾನ ವ್ಯವಸ್ಥೆಯಾಗಿದ್ದರಿಂದ ಮಹಿಳೆಗೆ ಸಿಗುವ ಆದ್ಯತೆ ಕೌಟುಂಬಿಕ ವಲಯದಲ್ಲಾಗಿರಬಹುದು, ಇಲ್ಲವೆ ಸಾಮಾಜಿಕ ವಲಯದಲ್ಲಾಗಿರಬಹುದು ಅದು ಪುರುಷನ ಆದ್ಯತೆಯ ನಂತರದ್ದು. ಹಾಗಾಗಿಯೇ ವ್ಯವಸ್ಥೆಗೆ ಪುರುಷರ ಹಿತಾಸಕ್ತಿ, ಪುರುಷರ ಸೌಖ್ಯ, ಪುರುಷರ ಯೋಗಕ್ಷೇಮ ಮುಖ್ಯವಾಗುತ್ತದೆಯೇ ಹೊರತು ಮಹಿಳೆಯರ ಬಗೆಗಲ್ಲ. ಹಾಗಾಗಿ ಎಲ್ಲಿ ದುಡಿಮೆಯ ನಿರಂತರತೆ, ದುಡಿಮೆಯ ಏಕತಾನತೆ ಇದ್ದು ಅಧಿಕವಾಗಿ ಭೌತಿಕ ಶ್ರಮವನ್ನು ವಿನಿಯೋಗ ಮಾಡಬೇಕಾಗುತ್ತೋ ಅಲ್ಲಿ ಪುರುಷರ ಪಾಲುದಾರಿಕೆ ಕಡಿಮೆ ಇರುತ್ತದೆ. ಎಲ್ಲಿ ಸುಲಭವಾಗಿ ಲಾಭ, ಹೆಗ್ಗಳಿಕೆ ದೊರೆಯುತ್ತದೊ, ಎಲ್ಲಿ ಸುಲಭವಾಗಿ ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆಯೋ ಅಲ್ಲಿ ಪುರುಷನ ಪಾಲುದಾರಿಕೆ ಅಧಿಕವಾಗಿರುತ್ತದೆ. ಹಾಗಾಗಿಯೇ ದುಡಿಯುವ ವರ್ಗದಲ್ಲಿ ವಿರಳವಾಗಿದ್ದ ಪುರುಷರ ಪಾಲುದಾರಿಕೆಯ ಸಂಖ್ಯೆ, ಅಧಿಕಾರ ಆಸ್ತಿಯ ಮೇಲಿನ ಒಡೆತನದ ಸಂದರ್ಭಕ್ಕೆ ಬಂದಾಗ ಅಧಿಕವಾಗಿರುವುದು ಕಂಡುಬರುತ್ತದೆ.

ಸ್ವಂತ ಭೂ ಹಿಡುವಳಿ ಹೊಂದಿದ ಕುಟುಂಬಗಳಲ್ಲಿ ಪುರುಷನಂತೆ ಮಹಿಳೆಯೂ ಕೂಡ ಕೃಷಿ ಚಟುವಟಿಕೆಗಳಲ್ಲಿ ಪ್ರತ್ಯಕ್ಷ ಇಲ್ಲವೆ ಪರೋಕ್ಷವಾಗಿ ತೊಡಗಿಕೊಂಡಿದ್ದರೂ ಒಡೆತನದ ವಿಷಯದಲ್ಲಿ ಪುರುಷ ಮತ್ತು ಮಹಿಳೆಯರ ನಡುವೆ ತಾರತಮ್ಯ ಇರುವುದು ತಿಳಿದುಬರುತ್ತದೆ. ಮತ್ತು ಕೃಷಿಯಲ್ಲಿ ದುಡಿಯುವ ವರ್ಗಕ್ಕೆ ಬಂದಾಗ ಮಹಿಳೆಯ ಪಾಲುದಾರಿಕೆ ಅಧಿಕವಾಗಿದ್ದನ್ನು ಕಾಣುತ್ತೇವೆ. ಇದರಿಂದ ಕೃಷಿ ಸಮಾಜದಲ್ಲಿ ಮಹಿಳೆಯ ಸ್ಥಿತಿ ಯಾವ ರೀತಿಯದು ಎಂಬುದು ತಿಳಿದುಬರುತ್ತದೆ. ಅಲ್ಲದೆ ಕೃಷಿ ವಲಯದಲ್ಲಿ ದುಡಿಯುವ ವರ್ಗದ ಮಹಿಳೆಯರ ಪ್ರಮಾಣ ಹೆಚ್ಚಾಗಿರುವುದರಿಂದ ಮಹಿಳೆಯರನ್ನು ಅತ್ಯಂತ ಕಡಿಮೆ ಕೂಲಿಗೆ ದುಡಿಸಿಕೊಳ್ಳಲಾಗುವುದು. ಅದು ಕೂಡಾ ಮಹಿಳಾ ದುಡಿಮೆಗಾರರ ಶೋಷಣೆಯೇ ಆಗಿದೆ.

ಒಟ್ಟಾರೆ ಕೃಷಿಯಲ್ಲಿ ಮಹಿಳೆ ಬೀಜ ಬಿತ್ತನೆಯಿಂದ ಹಿಡಿದು ಬೆಳೆಯ ಕೊಯ್ಲಿನವರೆಗಿನ ಕೆಲಸ ಕಾರ್ಯಗಳಲ್ಲಿ ಪಾಲ್ಗೊಂಡಿದ್ದಾಗಲೂ ಕೊನೆಗೆ ಹೊಲ ಮಾಡಿದ ಹೆಗ್ಗಳಿಕೆ ಪುರುಷನಿಗೆ ಸಲ್ಲುತ್ತದೆ.

ಮಹಿಳೆ ಹಿನ್ನೆಲೆಗೆ ಸರಿಯಲ್ಪಟ್ಟಿದ್ದಾಳೆ. ಕೇವಲ ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಮುಖ್ಯವಾಹಿನಿಯಲ್ಲಿ ಕಾಣಿಸಿಕೊಳ್ಳುತ್ತಾಳೆ. ಅಂದರೆ ಪುರುಷನ ಅನುಪಸ್ಥಿತಿಯಲ್ಲಿ ಮಾತ್ರ ಕೃಷಿಯಲ್ಲಿ ಮಹಿಳೆ ಮುಖ್ಯವಾಹಿನಿಗೆ ಬರುವಳು. ಭೂಮಿಯ ಮೇಲಾಗಲಿ, ಬೆಳೆದ ಬೆಳೆಯ ಮೇಲಾಗಲಿ ಅವಳಿಗೆ ಯಾವುದೇ ರೀತಿಯ ಅಧಿಕಾರವಿರುವುದಿಲ್ಲ. ತಾನು ದಿನವೂ 'ನಮ್ಮ ಹೊಲ' ಅಥವಾ 'ಮನಿ ಹೊಲ' ಎಂದು ಮೈಮುರಿದು ದುಡಿಯುವ ಹೊಲ ಅಥವಾ ಹೊಲದ ರೂಪದ ಆಸ್ತಿ ವಾಸ್ತವವಾಗಿ ಅವಳದಾಗಿರುವುದಿಲ್ಲ. ಹೊಲದ ಮತ್ತು ಹೊಲದ ಉತ್ಪನ್ನಗಳ ಮೇಲೆ ಅವಳಿಗೆ ಅಧಿಕಾರಯುತವಾದ ಹಕ್ಕಿರುವುದಿಲ್ಲ. ಅಂದರೆ ಮಹಿಳೆ ಹೊಲದಲ್ಲಿ ಕೆಲಸ ಮಾಡುವ ಕೆಲಸಗಾರಳು ಮಾತ್ರವೇ ಆಗಿದ್ದಾಳೆ. ಆ ಭೂಮಿಯ ಒಡೆತನ ಅಥವಾ ಆ ಹೊಲ (ಆಸ್ತಿ) ಇರುವುದು ಅವಳ ಗಂಡನ ಹೆಸರಿನಲ್ಲೋ ಇಲ್ಲವೆ ಗಂಡನ ತಂದೆಯ ಹೆಸರಿನಲ್ಲಿಯೋ ಇರುತ್ತದೆ. ಅವರ ನಂತರ ಆ ಭೂಮಿ ಅವಳ ಮಗನ ಹೆಸರಿಗೆ ವರ್ಗಾಯಿಸಲ್ಪಡುತ್ತದೆ. ಹೀಗೆ ಹೊಲದ ಮೇಲಿನ ಒಡೆತನವೆಲ್ಲವೂ ಬಹುಪಾಲು ಪುರುಷನಿಗೇ ಸಂಬಂಧಿಸಿರುತ್ತದೆ. ಹಾಗಾಗಿ ಭೂ ಒಡೆತನಕ್ಕೆ ಸಂಬಂಧಿಸಿದ ವಿಚಾರಗಳ ಹಿಂದೆ ಪುರುಷ ರಾಜಕಾರಣವಿದೆ. ಮಹಿಳೆಗೆ ಆಸ್ತಿಯಲ್ಲಿ ಪಾಲನ್ನು ಕೊಡುವುದರಿಂದ ಅವಳ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳು ತನಗಿಂತ ಉತ್ತಮವಾಗಿ ತನ್ನ ಸ್ಥಾನಮಾನಗಳಲ್ಲಿ ಕಡಿಮೆಯಾಗುತ್ತದೊ ಎನ್ನುವ ಆತಂಕ ಈ ಪುರುಷ ವ್ಯವಸ್ಥೆಯದು. ಮಹಿಳೆ ಆರ್ಥಿಕವಾಗಿ ಪ್ರಬಲವಾದರೆ ಎಲ್ಲಿ ಅವಳ ಮೇಲಿನ ತನ್ನ ನಿಯಂತ್ರಣ, ಹಿಡಿತ ಕೈತಪ್ಪಿ ಹೋಗುತ್ತದೋ ಎನ್ನುವ ಹಿನ್ನೆಲೆಯಿಂದಲೇ ಹಿಂದೆ ಮಹಿಳೆಯರಿಗೆ ಆಸ್ತಿಯ ಹಕ್ಕನ್ನು ನಿರಾಕರಿಸಲಾಗಿತ್ತು. ಇಂದು ಮಹಿಳೆಯರಿಗೆ ಆಸ್ತಿ ಹಕ್ಕು ನೀಡಿದ್ದರೂ ಅದು ಕೂಡ ಸಂಪೂರ್ಣವಾಗಿ ಪುರುಷ ನಿಯಂತ್ರಣದಿಂದ ಮುಕ್ತಗೊಂಡಿರುವಂತಹುದ್ದೇನಲ್ಲ. ಇದನ್ನೆಲ್ಲ ಗಮನಿಸಿದರೆ ಕೃಷಿಕ್ಷೇತ್ರದಲ್ಲಿ ಮಹಿಳೆಯ ಪಾತ್ರ 'ಆಟಕ್ಕುಂಟು ಲೆಕ್ಕಕ್ಕಿಲ್ಲ' ಎನ್ನುವ ರೀತಿಯದು.

### ೭.೨ ಆಧುನಿಕತೆ : ಕೃಷಿ ಮತ್ತು ಮಹಿಳೆ

ಸಾಮಾನ್ಯವಾಗಿ ಕೈಗಾರಿಕಾ ಕ್ರಾಂತಿಯ ನಂತರದ ದಿನಗಳನ್ನು ನಾವು ಆಧುನಿಕತೆಯ ಕಾಲಘಟ್ಟವಾಗಿ ಗುರುತಿಸುತ್ತೇವೆ. ಮತ್ತು ಕೈಗಾರಿಕಾ ಕ್ರಾಂತಿಯ ಪರಿಣಾಮದಿಂದಾಗಿ ತಂತ್ರಜ್ಞಾನದ ಬೆಳವಣಿಗೆ ಮತ್ತದರ ಪರಿಣಾಮಗಳನ್ನು ಆಧುನಿಕತೆಯ ಪರಿಣಾಮ ಎಂತಲೇ ಪರಿಭಾವಿಸುತ್ತೇವೆ. ತಂತ್ರಜ್ಞಾನವು ಬೇರೆ ಬೇರೆ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಯನ್ನು ತಂದಿದೆ. ಹೀಗಾದ ಬದಲಾವಣೆಯಲ್ಲಿ ಸಕಾರಾತ್ಮಕ ಮತ್ತು ನಕಾರಾತ್ಮಕ ಪರಿಣಾಮಗಳು ಇವೆ. ಅಂತೆಯೇ ಕೃಷಿ ಕ್ಷೇತ್ರದಲ್ಲೂ ಆಧುನಿಕತೆಯಿಂದಾಗಿ ಹಲವಾರು ಬದಲಾವಣೆಗಳಾಗಿರುವುದನ್ನು ನಾವು ಕಾಣುತ್ತೇವೆ.

ಕೃಷಿ ಪರಂಪರಾಗತವಾಗಿ ಬೆಳೆದುಕೊಂಡು ಬಂದ ಬಹುದೀರ್ಘ ಪರಂಪರೆಯನ್ನು ಹೊಂದಿರುವಂತಹದ್ದು ಅಲ್ಲದೆ ದೇಶದ ಎಲ್ಲಾ ವರ್ಗದ ಜನರಿಗೆ ಅನ್ನವನ್ನು ಒದಗಿಸುತ್ತ ಬಂದಿರುವ ಖ್ಯಾತಿ ಕೃಷಿ ವಲಯಕ್ಕಿದೆ. ಆದರೆ ಹೆಚ್ಚುತ್ತಿರುವ ಜನಸಂಖ್ಯೆಯಿಂದಾಗಿ ಸ್ವತಂತ್ರೋತ್ತರ ದಿನಗಳಲ್ಲಿ

ಆಹಾರದ ಅಭಾವದಿಂದಾಗಿ ಆಹಾರ ಪೂರೈಸುವುದೊಂದು ಬಹುದೊಡ್ಡ ಸಮಸ್ಯೆಯಾಗಿತ್ತು. ಕಾರಣ ಕೃಷಿ ಮುನ್ನೆಡೆಗಾಗಿ ಪಂಚವಾರ್ಷಿಕ ಯೋಜನೆಗಳ ಮೂಲಕ ಕೃಷಿಯ ಕಡೆಗೆ ಹೆಚ್ಚು ಗಮನಕೊಡಲಾಯಿತು. ಈ ಪ್ರಯತ್ನಗಳ ಫಲವಾಗಿ ೧೯ನೇ ಶತಮಾನದಲ್ಲಿ ಕೃಷಿಯಲ್ಲಿ ಹಲವು ಹೊಸ ಆವಿಷ್ಕಾರಗಳಾದವು. ಅಧಿಕ ಇಳುವರಿ ಕೊಡುವ ಹೊಸ ಹೊಸ ತಳಿಗಳನ್ನು ಶೋಧಿಸಲಾಯಿತು. ಅಧಿಕ ಉತ್ಪಾದನೆಯ ಹಂಬಲದಿಂದ ಬೆಳೆಗಳಿಗೆ ರಾಸಾಯನಿಕ ಗೊಬ್ಬರಗಳನ್ನು ಬಳಸುವುದು ಮತ್ತು ಕ್ರಿಮಿನಾಶಕಗಳನ್ನು ಬಳಸುವುದು ಹೆಚ್ಚಾಯಿತು. ಇದರಿಂದಾಗಿ ಕೃಷಿಯಲ್ಲಿ ೧೯೬೦ರ ದಶಕದಲ್ಲಿ ಹಸಿರುಕ್ರಾಂತಿಯನ್ನು ಸಾಧಿಸಲಾಯಿತು. ವೈಜ್ಞಾನಿಕ ಕೃಷಿಯಿಂದ ಆಹಾರೋತ್ಪಾದನೆಯ ಮಟ್ಟವನ್ನು ಹೆಚ್ಚಿಸಲಾಯಿತೆನ್ನುವುದೇನೋ ನಿಜ. ಆದರೆ ಆ ನಂತರದಲ್ಲಿ ಅದರಿಂದ ಅನೇಕ ಅನಾನುಕೂಲಗಳನ್ನು ಎದುರಿಸಬೇಕಾಯಿತು. ಅಲ್ಲದೆ ಇಂದಿಗೂ ಆಧುನಿಕ ಕೃಷಿ ಪದ್ಧತಿಯನ್ನು ಹೆಚ್ಚಾಗಿ ಅನುಸರಿಸುತ್ತಿರುವುದರಿಂದ ಅನೇಕ ರೀತಿಯ ತೊಂದರೆಗಳನ್ನು ಎದುರಿಸಬೇಕಾಗಿದೆ.

ಹೀಗೆ ಆಧುನಿಕ ತಂತ್ರಜ್ಞಾನಾಧರಿತ ಕೃಷಿ ವಿಧಾನಗಳಿಂದ ಕೃಷಿ ಮತ್ತು ಕೃಷಿ ಅವಲಂಬಿತ ಮಹಿಳಾ ದುಡಿಮೆಗಾರರ ಮೇಲೆ ಹಾಗೂ ಪಾರಂಪರಿಕ ಕೃಷಿ ಜ್ಞಾನ ಮತ್ತು ಕೃಷಿಯ ಸಾಂಸ್ಕೃತಿಕ ಪರಿಸರದ ಮೇಲಾದ ಪರಿಣಾಮಗಳ ಬಗೆಗೆ ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಅ. ಆಧುನಿಕತೆಯಿಂದ ಕೃಷಿ ಮತ್ತು ಕೃಷಿ ಅವಲಂಬಿತ ಮಹಿಳಾ ದುಡಿಮೆಗಾರರ ಮೇಲಾದ ಪರಿಣಾಮ**

ಆಧುನಿಕತೆಯಿಂದಾಗಿ ಕೃಷಿಯಲ್ಲಿ ಅನೇಕ ರೀತಿಯ ಬದಲಾವಣೆಗಳುಂಟಾದವು. ಆಧುನಿಕ ತಂತ್ರಜ್ಞಾನದ ಬಳಕೆಯಿಂದ ಕೃಷಿ ಮತ್ತು ಕೃಷಿ ಅವಲಂಬಿತ ದುಡಿಮೆಗಾರರ ಮೇಲೆ ಅದರಲ್ಲಿ ಮಹಿಳಾ ದುಡಿಮೆಗಾರರ ಮೇಲೆ ಹಲವು ರೀತಿಯ ಪರಿಣಾಮಗಳುಂಟಾದವು. ಅವುಗಳನ್ನು ಈ ಕೆಳಗೆ ಒಂದೊಂದಾಗಿ ಚರ್ಚಿಸಲಾಗಿದೆ.

**೧. ಉದ್ಯೋಗಾವಕಾಶಗಳ ಕಡಿತ :**

ವ್ಯವಸಾಯೋತ್ಪನ್ನಗಳನ್ನು ಹೆಚ್ಚಿಸಲು ಮತ್ತು ಅವುಗಳ ಉತ್ಪಾದನಾ ವೆಚ್ಚವನ್ನು ತಗ್ಗಿಸುವ ಉದ್ದೇಶದಿಂದ ಭೂಮಿಯನ್ನು ಉಳುಮೆ ಮಾಡುವುದರಿಂದ ವ್ಯವಸಾಯೋತ್ಪನ್ನಗಳ ಸಾಗಾಣಿಕೆಯವರೆಗಿನ ಎಲ್ಲ ಹಂತಗಳಲ್ಲೂ ಯಂತ್ರಗಳ ಬಳಕೆಯನ್ನು ವ್ಯವಸಾಯದಲ್ಲಿ ಕ್ರಮೇಣವಾಗಿ ಅಳವಡಿಸಿಕೊಳ್ಳುತ್ತಾ ಬರಲಾಗಿದೆ. ಇದರಿಂದ ಯಾರಿಗೆ ಲಾಭ? ಮತ್ತು ಯಾರಿಗೆ ನಷ್ಟ? ಎಂಬುದನ್ನು ನಾವು ಆಲೋಚಿಸಬೇಕಾಗುತ್ತದೆ. ಯಂತ್ರೋಪಕರಣಗಳ ಬಳಕೆ ಮೇಲ್ವರ್ಗದವರಿಗೆ ಮತ್ತು ದೊಡ್ಡ ಭೂ ಹಿಡುವಳಿದಾರರಿಗೆ ವರದಾನವಾಗಿವೆಯೇ ಹೊರತು ದುಡಿಯುವ ವರ್ಗದವರಿಗಲ್ಲ. ಏಕೆಂದರೆ ಕೃಷಿಯಲ್ಲಿ ಹೆಚ್ಚು ಹೆಚ್ಚು ಯಂತ್ರೋಪಕರಣಗಳನ್ನು ಬಳಸತೊಡಗಿದಂತೆಲ್ಲಾ ಅವು ಮನುಷ್ಯನ ಕೆಲಸವನ್ನು ಕಬಳಿಸುತ್ತಿವೆ.

ಹಾಗಾಗಿ ಕೃಷಿಕ್ಷೇತ್ರದಲ್ಲಿ ಉದ್ಯೋಗ ಅವಕಾಶಗಳು ಕಡಿಮೆಯಾಗುತ್ತಿವೆ. ಹತ್ತಾರು ಜನ ದೀರ್ಘಾವಧಿಯಲ್ಲಿ ಮಾಡುವ ಕೆಲಸವನ್ನು ಯಂತ್ರವೊಂದೇ ಒಂದೇ ದಿನದಲ್ಲಿ ಅಥವಾ ಕೆಲವೇ ಗಂಟೆಗಳಲ್ಲಿ ಮಾಡಿ ಮುಗಿಸುವುದರಿಂದ ಕೆಲಸ ವೇಗವಾಗಿ ಆಗುತ್ತದೆ ಎಂಬುದೇನೋ ನಿಜ. ಆದರೆ ಕೆಲಸವನ್ನು ಅವಲಂಬಿಸಿದ ಜನರಿಗೆ ಕೆಲಸ ಇಲ್ಲದಂತಾಗುತ್ತದೆ. ಇದರಿಂದ ಹೆಚ್ಚು ಹೆಚ್ಚು ನಿರುದ್ಯೋಗ ಸೃಷ್ಟಿಯಾಗುತ್ತಿದೆ.

ಅದರಲ್ಲೂ ಕೃಷಿ ದುಡಿಮೆಯ ಮೇಲೆ ಹೆಚ್ಚು ಅವಲಂಬಿತರಾಗಿದ್ದವರಲ್ಲಿ ಮಹಿಳೆಯರೇ ಅಧಿಕವಾಗಿದ್ದರಿಂದ ಯಂತ್ರೋಪಕರಣಗಳ ಬಳಕೆಯಿಂದಾಗಿ ಹೆಚ್ಚಾಗಿ ಮಹಿಳೆಯರ ಕೆಲಸಗಳಿಗೆ ಹೊಡೆತ ಬೀಳುತ್ತಿದೆ. ಏಕೆಂದರೆ ಕೃಷಿಯ ದುಡಿಮೆಗಾರರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಮಹಿಳೆಯರೇ ಇದ್ದಾರೆ. ಹಾಗಾಗಿ ಕೃಷಿಯಲ್ಲಿ ಯಂತ್ರೋಪಕರಣಗಳ ಬಳಕೆ ಹೆಚ್ಚು ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವಂತಹದ್ದು. ಒಂದೆಡೆ ಕೆಲಸ ಕಳೆದುಕೊಂಡು ನಿರುದ್ಯೋಗಿಗಳಾಗುತ್ತಿದ್ದಾರೆ. ಮತ್ತೊಂದೆಡೆ ಇದ್ದ ಕಡಿಮೆ ಕೆಲಸಗಳಿಗೆ ಹೆಚ್ಚು ಜನ ಅವಲಂಬಿತರಾಗುತ್ತಿರುವುದರಿಂದ ಅವರನ್ನು ಭೂಮಾಲೀಕರು ಕಡಿಮೆ ಕೂಲಿಗೆ ಹೆಚ್ಚು ಹೆಚ್ಚು ದುಡಿಸಿಕೊಳ್ಳುತ್ತಿರುವುದು ಕಂಡುಬರುತ್ತಿದೆ. ಹೆಚ್ಚಾಗಿ ಮಹಿಳಾ ಕೃಷಿ ಕೂಲಿಕಾರ್ಮಿಕರೇ ಈ ರೀತಿಯ ಶೋಷಣೆಗೆ ಒಳಗಾಗುತ್ತಿರುವುದನ್ನು ನಾವು ಕಾಣುತ್ತೇವೆ.

ಅಲ್ಲದೆ ಆಧುನಿಕ ಯಂತ್ರೋಪಕರಣಗಳ ಬಳಕೆಯಿಂದಾಗಿ ಕೃಷಿ ಅವಲಂಬಿತ ಇತರ ಪಾರಂಪರಿಕ ಕುಲಕಸುಬುಗಳಾದ ಬಡಿಗ, ಕಮ್ಮಾರ, ಚಮ್ಮಾರ ಮುಂತಾದ ವೃತ್ತಿಗಳು ಮೂಲೆಗುಂಪಾಗುತ್ತಿವೆ. ಆಧುನಿಕ ಯಂತ್ರೋಪಕರಣಗಳಿಂದಾಗಿ ಕೃಷಿ ವಲಯದಲ್ಲಿ ಇವರಿಗೆ ಬೇಡಿಕೆ ಕಡಿಮೆಯಾಗುತ್ತಿರುವುದರಿಂದ ಈ ವೃತ್ತಿ ಅವಲಂಬಿತ ಜನರಿಗೆ ಉದ್ಯೋಗವಿಲ್ಲದಂತಾಗುತ್ತಿದೆ.

**೨. ಬಿತ್ತನೆಯ ಬೀಜಗಳ ಮೇಲೆ ಹತೋಟಿ ಇಲ್ಲದಾಗುತ್ತಿದೆ :**

ಆಧುನೀಕರಣಗೊಳ್ಳುತ್ತಿರುವ ಕೃಷಿಯಲ್ಲಿ ರೈತರಿಗೆ ತಾವು ಯಾವ ಬೀಜ ಬಿತ್ತಿ ಬೆಳೆಯಬೇಕೆಂಬ ನಿರ್ಧಾರ ಕೂಡ ಅವರದಾಗಿರುವುದಿಲ್ಲ. ಏಕೆಂದರೆ ಇಂದು ಬಹುಪಾಲು ರೈತರು ಅಧಿಕ ಇಳುವರಿ ಪಡೆಯುವ ಮತ್ತು ಹೆಚ್ಚು ಲಾಭ ಪಡೆಯಬೇಕೆಂಬ ಉದ್ದೇಶದಿಂದ ಹಾಗೂ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿರುವುದರಿಂದಾಗಿ ಮಾರುಕಟ್ಟೆಯಲ್ಲಿ ಸಿದ್ಧರೂಪದಲ್ಲಿ ದೊರೆಯುವ ಬಹುರಾಷ್ಟ್ರೀಯ ಕಂಪನಿಗಳಿಂದ ತಯಾರಿಸಲ್ಪಟ್ಟ ಬೀಜಗಳನ್ನು ಉಪಯೋಗಿಸುತ್ತಿರುವುದರಿಂದ ಬೀಜಕ್ಕಾಗಿ ಕೃಷಿಕರು ಇಂದು ಪರಾವಲಂಬಿಯಾಗಿದ್ದಾರೆ. ಹಾಗಾಗಿ ಮಾರುಕಟ್ಟೆಯಲ್ಲಿ ಯಾವ ಬೀಜ ಲಭ್ಯವಿದೆ ಮತ್ತು ಯಾವಾಗ ಬೀಜಗಳು ಲಭ್ಯವಾಗುತ್ತವೆ ಎನ್ನುವುದರ ಮೇಲೆ ಅವರ ಬಿತ್ತನೆಯ ಕಾರ್ಯ ನಡೆಯುತ್ತದೆ. ಅಂದರೆ ಬೀಜಗಳ ಬಿತ್ತನೆಯ ಮೇಲೆ ಕೃಷಿಕರಿಗಿದ್ದ ಹತೋಟಿ ಇಂದು ಕೈತಪ್ಪಿ ಹೋಗುತ್ತಿದೆ.

ಆದರೆ ಹಿಂದೆ ಬಿತ್ತನೆಯ ಬೀಜಗಳನ್ನು ಸ್ವತಃ ರೈತರೇ ಸಂರಕ್ಷಿಸಿಕೊಳ್ಳುತ್ತಿದ್ದರು. ಸಂರಕ್ಷಿಸುವ ಕೆಲಸ ಮನೆಯಲ್ಲಿನ ಮಹಿಳೆಯರದೇ ಆಗಿರುತ್ತಿತ್ತು. ತಾವು ಬೆಳೆದ ಬೆಳೆಯಲ್ಲಿಯೇ ಉತ್ತಮವಾದ

ಬೀಜಗಳನ್ನು ಬಿತ್ತನೆಗೆಂದು ಪ್ರತ್ಯೇಕಿಸಿ ಅವುಗಳನ್ನು ಹಸನು ಮಾಡಿ ಹದಗೊಳಿಸಿ ಸಂಸ್ಕರಿಸುವ ಕೆಲಸ ಬಹುಪಾಲು ಮಹಿಳೆಯರಿಂದಲೇ ನಡೆಯುತ್ತಿತ್ತು. ಒಂದೊಂದು ರೀತಿಯ ಬೀಜವನ್ನು ಒಂದೊಂದು ಬಗೆಯಲ್ಲಿ ಸಂಸ್ಕರಿಸುವ ಜ್ಞಾನ ಮತ್ತು ಕೌಶಲ್ಯ ಅವರಲ್ಲಿತ್ತು. ಅವರ ಈ ಕೆಲಸಕ್ಕೆ ಸಂಭಾವನೆಯ ರೂಪದ ಪ್ರತಿಫಲ ಸಿಗದಿದ್ದರೂ, ಆ ಕೆಲಸ ಮಾಡುತ್ತಿದ್ದ ಕಾರಣಕ್ಕಾಗಿ ಮನೆಯಲ್ಲಿ ಅವರು ಒಂದು ಬಗೆಯ ಗೌರವಕ್ಕೆ ಪಾತ್ರರಾಗುತ್ತಿದ್ದರು. ಆದರೆ ಇಂದು ಮಾರುಕಟ್ಟೆಯಲ್ಲಿ ಸಿದ್ಧ ಬೀಜಗಳನ್ನು ತರುವುದರಿಂದ ಮಹಿಳೆಯರು ಆ ಕೆಲಸ ಮಾಡಬೇಕಾದ ಅನಿವಾರ್ಯತೆ ಉಳಿದುಕೊಂಡಿಲ್ಲ. ಅಲ್ಲದೆ ಆ ಕೆಲಸದಿಂದ ಮಹಿಳೆಗೆ ಮೊದಲು ಮನೆಯ ಮಂದಿಯಿಂದ ಸಿಗುತ್ತಿದ್ದ ಮೆಚ್ಚುಗೆ-ಪ್ರಶಂಸೆಗಳು ಇಂದು ಇಲ್ಲದಂತಾಗಿವೆ.

**೩. ಕೃಷಿ ವಾಣಿಜ್ಯೀಕರಣಗೊಳ್ಳುತ್ತಿರುವುದರಿಂದ ಆಹಾರ ಬೆಳೆಗಳಿಗಿಂತ ವಾಣಿಜ್ಯ ಬೆಳೆಗಳಿಗೆ ಪ್ರಾಮುಖ್ಯತೆ ಹೆಚ್ಚಾಗುತ್ತದೆ :**

ಹಿಂದೆ ರೈತರ ಮನೆಯಲ್ಲಿ ಎಲ್ಲಿ ನೋಡಿದರೂ ಅವರು ಬೆಳೆದ ಬೆಳೆಗಳ ಚೀಲದ ನಿಟ್ಟುಗಳು ಕಾಣುತ್ತಿದ್ದವು. ಆದರೆ ಇಂದು ಸಾಮಾನ್ಯವಾಗಿ ಆಹಾರ ಬೆಳೆಗಳ ಸಂಗ್ರಹ ರೈತರಲ್ಲಿ ಅಷ್ಟಾಗಿ ಇರುವುದಿಲ್ಲ. ಏಕೆಂದರೆ ಕೃಷಿಯು ಇಂದು ಲಾಭದ ದೃಷ್ಟಿಯಿಂದ ವಾಣಿಜ್ಯೀಕರಣದತ್ತ ಮುಖ ಮಾಡುತ್ತಿರುವುದರಿಂದ ಆಹಾರ ಧಾನ್ಯಗಳ ಬದಲಾಗಿ ಬಹುರಾಷ್ಟ್ರೀಯ ಕಂಪನಿಗಳಿಗೆ ಬೇಕಾಗುವಂತಹ ಕಚ್ಚಾವಸ್ತುಗಳನ್ನು ಪೂರೈಸುವ ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿರುವುದರಿಂದ ಆಹಾರ ಬೆಳೆ ಬೆಳೆಯುತ್ತಿದ್ದ ಸಂದರ್ಭದಲ್ಲಿ ಪ್ರಧಾನವಾಗಿ ತೊಡಗಿಕೊಳ್ಳುತ್ತಿದ್ದ ಮಹಿಳೆಯ ಭಾಗವಹಿಸುವಿಕೆಯನ್ನು ವಾಣಿಜ್ಯ ಬೆಳೆಗಳು ದೂರ ಮಾಡಿವೆ.

ಅಲ್ಲದೆ ಇಂದು ಬೆಳೆಯುತ್ತಿರುವ ವಾಣಿಜ್ಯ ಬೆಳೆಗಳನ್ನು ಕಟಾವು ಮಾಡಿದ ಕೆಲವೇ ದಿನಗಳಲ್ಲಿ ಮಾರುಕಟ್ಟೆಗೆ ಒಯ್ದು ಮಾರಿಬಿಡಲಾಗುತ್ತದೆ. ಆದರೆ ಆಹಾರ ಬೆಳೆಗಳನ್ನೇ ಪ್ರಧಾನವಾಗಿ ಬೆಳೆಯುತ್ತಿದ್ದ ದಿನಗಳಲ್ಲಿ ಬಂದ ಬೆಳೆಗಳಲ್ಲಿ ಮನೆಗೆ ತಿನ್ನುವುದಕ್ಕೆಂದು ಮನೆಗೆ ಒಂದು ವರ್ಷವಿಡೀ ಸಾಕಾಗುವಷ್ಟು ದವಸಧಾನ್ಯಗಳನ್ನು ಮನೆಯಲ್ಲೇ ಇರಿಸಿಕೊಳ್ಳುತ್ತಿದ್ದರು. ಇದರಿಂದ ಮಹಿಳೆಯರಿಗೂ ಒಂದು ಬಗೆಯ ಧೈರ್ಯವಿರುತಿತ್ತು. ಗಂಡಸರಿಲ್ಲದೆ ಇದ್ದಾಗ ಅನಿವಾರ್ಯವಾಗಿ ಬರುವ ಮನೆಯ ಸಣ್ಣಪುಟ್ಟ ಖರ್ಚುಗಳನ್ನು ತೂಗಿಸಿಕೊಂಡು ಹೋಗುವಲ್ಲಿ ಮಹಿಳೆಗೆ ಆಗ ಧೈರ್ಯವಿರುತ್ತಿತ್ತು. ಏಕೆಂದರೆ ಮನೆಯಲ್ಲಿ ಕಾಳು ಕಡಿಗಳಿರುತ್ತಿದ್ದರಿಂದ ಅನಿವಾರ್ಯವಾದಾಗ ಅಂಗಡಿಗೆ ಸ್ವಲ್ಪ ಕಾಳು ಹಾಕಿ ಮನೆಯ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದರು. ಮಹಿಳೆಗೆ ಕುಟುಂಬದಲ್ಲಿ ಸಂಪೂರ್ಣ ಆರ್ಥಿಕ ಸ್ವಾಯತ್ತತೆ ಇರದಿದ್ದರೂ ಈ ರೀತಿ ತಾವು ಬೆಳೆದ ಕಾಳುಕಡಿಗಳ ಮೇಲೆ ಸ್ವಲ್ಪಮಟ್ಟಿನ ಸ್ವಾಯತ್ತತೆ ಇರುತ್ತಿತ್ತು. ಆದರೆ ಕೃಷಿ ಮಹಿಳೆಗೆ ಕುಟುಂಬದೊಳಗಿದ್ದ ಈ ಅಲ್ಪ ಪುಡಿಕಾಸಿನ ಸ್ವಾಯತ್ತತೆಯೂ ಇಂದು ಇಲ್ಲದಂತಾಗುತ್ತಿದೆ.

ಹೀಗೆ ಆಧುನಿಕ ಕೃಷಿಯಿಂದಾಗಿ ಮಹಿಳೆಯ ಬದುಕಿನಲ್ಲಿ ಪುರುಷರಿಗೆ ಅಧೀನವಾಗಿರಬೇಕಾಗಿದ್ದ ಅನಿವಾರ್ಯತೆಗಳು ಮತ್ತಷ್ಟು ಹೆಚ್ಚಾಗುತ್ತಿವೆ.

**೬. ಮಹಿಳೆಯರ ಕೆಲಸದ ಹೊರೆ ಹೆಚ್ಚುತ್ತದೆ :**

ಹೆಚ್ಚು ಹೆಚ್ಚು ಉತ್ಪಾದಿಸಬೇಕೆನ್ನುವ ಆಲೋಚನೆಯಿಂದಾಗಿ ಕೃಷಿ ಭೂಮಿಯನ್ನು ವಿಸ್ತರಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಅರಣ್ಯಗಳ ನಾಶವೂ ನಡೆಯುತ್ತಿದೆ. ಈ ರೀತಿಯ ಅರಣ್ಯಗಳ ನಾಶದಿಂದ ಜಲ ಮೂಲಗಳು ನಾಶವಾಗುತ್ತವೆ. ಇದರಿಂದ ಗದ್ದೆಗಳಲ್ಲಿ ಕಷ್ಟಪಟ್ಟು ದುಡಿಯುವ ಮಹಿಳೆಗೆ ಉರುವಲಿನ ಕಟ್ಟಿಗೆಗಾಗಿ, ಕುಡಿಯುವ ನೀರಿಗಾಗಿ ಬಹುದೂರ ಅಲೆಯಬೇಕಾದ ಕೆಲಸದ ಹೊರೆ ಬೀಳುತ್ತದೆ.

**೭. ಅಭಿವೃದ್ಧಿಯ ಹೆಸರಿನಲ್ಲಿ ಕೃಷಿಕರನ್ನು ಭೂ ಹೀನರನ್ನಾಗಿ ಮಾಡಲಾಗುತ್ತಿದೆ :**

ಸರ್ಕಾರ ಇಂದು ಕಾರ್ಖಾನೆಗಳನ್ನು ಸ್ಥಾಪಿಸುವ ಮತ್ತು ರಸ್ತೆಗಳ ವಿಸ್ತರಣೆ ಮಾಡುವ ಉದ್ದೇಶದಿಂದ ರೈತರ ಭೂಮಿಯನ್ನು ಕಬಳಿಸಿಕೊಳ್ಳುತ್ತಿದೆ. ಇದರಿಂದ ಸರಕಾರ, ಭೂಮಿಗೆ ಮೌಲ್ಯ ಮಾಡಿದ ಹಣ ರೈತರಿಗೆ ದೊರೆಯುತ್ತಾದರೂ ರೈತರಿಗೆ ಇದ್ದ ಭೂಮಿಯನ್ನು ಕಳೆದುಕೊಳ್ಳುವುದರಿಂದ ಆ ಭೂಮಿಯನ್ನು ಅವಲಂಬಿಸಿ ದುಡಿಯುತ್ತಿದ್ದ ಜನರ ಕೆಲಸವನ್ನೆಲ್ಲ ಅದು ಇಲ್ಲವಾಗಿಸುತ್ತಿದೆ. ಇದು ಕೂಡಾ ಹೆಚ್ಚಾಗಿ ಮಹಿಳಾ ದುಡಿಮೆಗಾರರ ಮೇಲೆಯೇ ಪರಿಣಾಮ ಬೀರುವಂತಹದ್ದಾಗಿದೆ. ಏಕೆಂದರೆ ಕೃಷಿಯಲ್ಲಿ ಪುರುಷರಿಗಿಂತಲೂ ಅಧಿಕ ಸಂಖ್ಯೆಯಲ್ಲಿ ಮಹಿಳಾ ದುಡಿಮೆಗಾರರೇ ತೊಡಗಿಕೊಂಡಿದ್ದಾರೆ.

ಈ ರೀತಿಯಲ್ಲಿ ಕೃಷಿವಲಯದಲ್ಲಿ ದಿನೇ ದಿನೇ ವಿವಿಧ ಕಾರಣಕ್ಕಾಗಿ ಉದ್ಯೋಗದ ಪ್ರಮಾಣ ಕಡಿಮೆಗೊಂಡಂತೆ ಮತ್ತು ಇಲ್ಲವಾದಂತೆ ಆ ದುಡಿಮೆ ಅವಲಂಬಿತ ಜನ ಬೀದಿಪಾಲಾಗುತ್ತಾರೆ. ಅಲ್ಲದೆ ಕೃಷಿಯನ್ನೇ ಅವಲಂಬಿಸಿ ದುಡಿಯುತ್ತಿದ್ದ ಮಹಿಳೆಯರಿಗೆ ಕೃಷಿ ಕೆಲಸದಲ್ಲಿ ನೈಪುಣ್ಯತೆ ಇದ್ದಂತೆ ಬೇರೆ ಕೆಲಸಗಳನ್ನು ಮಾಡಿ ಅಭ್ಯಾಸ ಇಲ್ಲದ ಕಾರಣ ಇದ್ದಕ್ಕಿದ್ದಂತೆ ಬೇರೆ ಕೆಲಸಗಳಿಗೆ ಹೊಂದಾಣಿಕೆ ಮಾಡಿಕೊಳ್ಳುವುದು ಕಷ್ಟವಾಗುತ್ತದೆ. ಅಲ್ಲದೆ ಇವರು ಬೇರೆ ಬೇರೆ ಉದ್ಯೋಗವನ್ನು ಅರಿಸಿಕೊಂಡು ಹೋದರೂ ಸಹಾ ಕೃಷಿವಲಯದಲ್ಲಿ ದುಡಿಯುತ್ತಿದ್ದ ಬಹುಪಾಲು ಮಹಿಳೆಯರು ಅಶಿಕ್ಷಿತರಾಗಿದ್ದರಿಂದ ಮತ್ತೆ ಇವರಿಗೆ ಲಭ್ಯವಾಗುವ ಕೆಲಸಗಳು ಅಧಿಕ ದೈಹಿಕ ಶ್ರಮ ಹಾಕಬೇಕಾದಂತಹ ಕೆಲಸಗಳೇ ಆಗಿರುತ್ತವೆ. ಅಲ್ಲದೆ ಮಹಿಳೆ ಎನ್ನುವ ಕಾರಣಕ್ಕೆ ಅವಳು ಮಾಡುವ ದುಡಿಮೆಗೆ ಕಡಿಮೆ ಕೂಲಿ ಕೊಟ್ಟು ಹೆಚ್ಚು ದುಡಿಸಿಕೊಳ್ಳುವುದನ್ನು ಕಾಣುತ್ತೇವೆ.

ಹೀಗೆ ಗ್ರಾಮೀಣ ಜನರ ಹಿತಾಸಕ್ತಿಯನ್ನು ಕಾಪಾಡುವುದಕ್ಕಿಂತ ಮುಖ್ಯವಾಗಿ ಬಹುರಾಷ್ಟ್ರೀಯ ಕಂಪನಿಗಳನ್ನು ನಮ್ಮ ದೇಶಕ್ಕೆ ಆಹ್ವಾನಿಸುತ್ತಿರುವುದು ಮತ್ತವುಗಳಿಗೆ ಬೇಕಾದ ಸೌಲಭ್ಯಗಳನ್ನು ಮುಕ್ತವಾಗಿ ದೊರಕಿಸಿಕೊಡುತ್ತಿರುವುದು ಕಂಡುಬರುತ್ತದೆ. ಅಲ್ಲದೆ ಅಭಿವೃದ್ಧಿ ಹೆಸರಿನಲ್ಲಿ ಕೃಷಿಕರಿಗೆ ಸಂಕಷ್ಟವನ್ನು ತಂದೊಡ್ಡಲಾಗುತ್ತಿದೆ.

ಒಟ್ಟಾರೆ ಕೃಷಿ ದುಡಿಮೆಯಲ್ಲಿ ಅಧಿಕ ಸಂಖ್ಯೆಯಲ್ಲಿ ಮಹಿಳೆಯರೇ ತೊಡಗಿಕೊಂಡಿರುವುದರಿಂದ ಇಂದು ಆಧುನೀಕರಣದಿಂದ ಕೃಷಿಯಲ್ಲಿ ಉಂಟಾಗುವ ಯಾವುದೇ ಪರಿಣಾಮ ಬಹುಪಾಲು ಮಹಿಳೆಯರ ಮೇಲೆ ಉಂಟಾಗುತ್ತಿದೆ ಎಂದರೆ ತಪ್ಪಾಗಲಾರದು.

**ಆ. ಆಧುನಿಕತೆಯಿಂದ ಪಾರಂಪರಿಕ ಕೃಷಿ ಜ್ಞಾನ ಮತ್ತು ಕೃಷಿಯ ಸಾಂಸ್ಕೃತಿಕ ಪರಿಸರದ ಮೇಲಾದ ಪರಿಣಾಮ**

ಆಧುನಿಕ ತಂತ್ರಜ್ಞಾನದ ಪರಿಣಾಮವಾಗಿ ಆಹಾರ ಉತ್ಪಾದನೆಯ ಕ್ರಮದಲ್ಲಾದ ಬದಲಾವಣೆಯಿಂದ ಸಹಜವಾಗಿಯೇ ಉತ್ಪಾದನಾ ಪರಿಸರ ಮತ್ತು ಪ್ರಕ್ರಿಯೆಯೊಂದಿಗಿದ್ದ ನೇರವಾದ ಮತ್ತು ನಿಕಟವಾದ ಸಂಬಂಧಗಳು ದೂರವಾಗುತ್ತಿವೆ. ಇದರಿಂದಾಗಿ ಪರಂಪರಾಗತ ಜೀವನ ವಿಧಾನಕ್ಕಿಂತ ಭಿನ್ನವಾದ ಸಮಕಾಲೀನ ಜೀವನ ವಿಧಾನವೊಂದು ರೂಪಗೊಳ್ಳುತ್ತದೆ. ಹೀಗೆ ರೂಪಗೊಳ್ಳುತ್ತಿರುವ ಕೃಷಿಯ ಇವತ್ತಿನ ಸಾಂಸ್ಕೃತಿಕ ಸ್ವರೂಪ ಯಾವ ರೀತಿಯಲ್ಲಿದೆ ಎಂಬುದನ್ನು ಈ ಕೆಳಗೆ ವಿವರಿಸಲಾಗಿದೆ.

**೧. ಆರ್ಥಿಕ ಬದುಕು ಬದಲಾದಂತೆ ಕೃಷಿಕರ ಸಾಂಸ್ಕೃತಿಕ ಅಭಿವ್ಯಕ್ತಿ ಮತ್ತು ಅಭಿರುಚಿಗಳಲ್ಲಿ ಬದಲಾವಣೆಗಳಾಗುತ್ತವೆ :**

ಕಳೆ ತೆಗೆಯುವ, ಬೆಳೆ ಕೊಯ್ಯುವ, ಹಂತಿ ಕಟ್ಟುವ ಇನ್ನೂ ಮುಂತಾದ ಕೃಷಿ ಕೆಲಸಗಳು ಯಂತ್ರಗಳಿಂದ ಮಾಡಲ್ಪಡುವುದರಿಂದ ಆ ಕ್ರಿಯೆಗಳು ನಡೆಯುವಾಗ ಜರುಗುತ್ತಿದ್ದ ಜನಪದರ ಪ್ರಕ್ರಿಯೆಗಳು ಇಂದು ಕಾಣಸಿಗುತ್ತಿಲ್ಲ. ಅಂದರೆ ಈ ಕೆಲಸಗಳನ್ನೆಲ್ಲ ಮಾಡುವಾಗ ಕೃಷಿಕರು ತಮ್ಮ ದುಡಿಮೆಯೊಂದಿಗೆ ಹೊತ್ತುಗಳೆಯುವುದಕ್ಕಾಗಿ ಇಲ್ಲವೆ ತಮ್ಮ ದುಡಿಮೆಯ ದಣಿವು ಮರೆಯುವುದಕ್ಕಾಗಿ ಹೇಳುತ್ತಿದ್ದ ಜನಪದ ಹಾಡುಗಳಾಗಲಿ, ಹಂತಿ ಪದಗಳಾಗಲಿ, ಸವಾಲ್ ಜವಾಬ್, ರಾವಣ ಸಾಹಿತ್ಯವಾಗಲಿ ಇಂದು ಹೊಲಗದ್ದೆಗಳಲ್ಲಿ ಕಾಣಸಿಗುವುದಿಲ್ಲ. ಈ ಎಲ್ಲ ಕೆಲಸಗಳು ಮನುಷ್ಯನಿಂದ ದೂರವಾದಂತೆಯೇ ಅದರ ಸುತ್ತ ನಡೆಯುವ ಈ ತರದ ಚಟುವಟಿಕೆಗಳು ಇಲ್ಲದಾಗುತ್ತವೆ.

ರೈತರಿಗೆ ಇಂದು ಕಡಿಮೆ ಅವಧಿಯಲ್ಲಿ ಹೆಚ್ಚು ಕೆಲಸಗಳಾಗಬೇಕೆನ್ನುವ ನಿರೀಕ್ಷೆ ಮತ್ತು ಅಪೇಕ್ಷೆಗಳಿರುವುದರಿಂದ ರೈತನಿಗೆ ಹಾಡಿಕೊಂಡಿರುವುದಕ್ಕೆ ಸಮಯವಿಲ್ಲ. ಬದಲಾಗಿ ರೇಡಿಯೋನಲ್ಲಿ ಬರುವ ಸಿನಿಮಾ ಗೀತೆಗಳನ್ನು ಆಲಿಸುವ ಇಲ್ಲವೇ ತನ್ನಷ್ಟಕ್ಕೆ ತಾನು ಸಿನಿಮಾಗೀತೆಗಳನ್ನು ಗುನುಗುವ ಪ್ರವೃತ್ತಿ ಇಂದಿನ ಕೃಷಿಕರಲ್ಲಿ ಕಂಡು ಬರುತ್ತದೆ. ಹೀಗೆ ಆರ್ಥಿಕ ಬದುಕು ಬದಲಾದಂತೆ ಅವರ ಸಾಂಸ್ಕೃತಿಕ ಅಭಿರುಚಿಗಳು ಬದಲಾಗುತ್ತದೆ.

**೨. ಬಿತ್ತನೆ ಬೀಜಗಳಿಗಾಗಿ ಪರಾವಲಂಬನೆಯ ಸ್ಥಿತಿ ನಿರ್ಮಾಣವಾಗುತ್ತದೆ :**

ಇಂದು ಮಾರುಕಟ್ಟೆಯಲ್ಲಿ ದೊರೆಯುವ ಸಿದ್ಧ ಬೀಜಗಳನ್ನು ತಂದು ಬಿತ್ತುವ ಕ್ರಮ ಪ್ರಚಲಿತದಲ್ಲಿ ಇರುವುದರಿಂದ ಹಿಂದಿನಂತೆ ಬೀಜಗಳನ್ನು ಸಂರಕ್ಷಿಸುವ ಪ್ರವೃತ್ತಿ ಕಂಡುಬರುತ್ತಿಲ್ಲ. ಹಾಗಾಗಿ ಮುಂದೊಂದು

ದಿನ ನಾವು ನಮ್ಮ ದೇಶಿಯ ಬೀಜತಳಿಗಳನ್ನೆಲ್ಲ ಕಳೆದುಕೊಳ್ಳುವ ಸ್ಥಿತಿಯನ್ನು ತಲುಪಬಹುದು. ಅಲ್ಲದೆ ಬೀಜ ಸಂರಕ್ಷಿಸುವ ನಮ್ಮ ದೇಶೀಯ ಜ್ಞಾನ ಮತ್ತು ಕೌಶಲ್ಯ ಕೂಡ ಮರೆತು ಹೋಗಬಹುದಾದ ಸಾಧ್ಯತೆಗಳಿವೆ.

ಅಲ್ಲದೆ ಇಂದು ಮಾರುಕಟ್ಟೆಯಲ್ಲಿ ಲಭ್ಯವಾಗುವ ಬೀಜಗಳಿಂದ ಬೆಳೆದ ಬೆಳೆಗಳು ಬೀಜರಹಿತ (Seed less) ಬೆಳೆಗಳಾಗಿರುತ್ತವೆ. ಇಲ್ಲವೆ ಆ ಬೆಳೆಯಿಂದ ಬಂದ ಬೀಜಗಳನ್ನು ಮತ್ತೆ ಬಿತ್ತನೆಗೆ ಬಳಸಲು ಬರುವುದಿಲ್ಲ. ಹಾಗಾಗಿ ಮುಂದೊಂದು ದಿನ ಬಿತ್ತನೆಯ ಬೀಜಗಳಿಗಾಗಿ ರೈತರು ಸಂಪೂರ್ಣವಾಗಿ ಬಹುರಾಷ್ಟ್ರೀಯ ಕಂಪನಿಗಳಿಗೆ ದಾಸರಾಗಬೇಕಾದ ಪರಿಸ್ಥಿತಿ ಬಂದೊದಗಬಹುದು.

**೩. ಪೂರ್ವಿಕರ ಕೃಷಿ ಜ್ಞಾನ ನಿರ್ಲಕ್ಷ್ಯಕ್ಕೆ ಒಳಪಡುತ್ತಿದೆ :**

ಇಂದು ಆಧುನಿಕ ಕೃಷಿ ಪದ್ಧತಿಯನ್ನು ಅನುಸರಿಸುತ್ತಿದ್ದ ರೈತರು ಅಧಿಕ ಇಳುವರಿ ಪಡೆಯುವುದಕ್ಕಾಗಿ ಹೆಚ್ಚು ಹೆಚ್ಚು ರಾಸಾಯನಿಕ ಗೊಬ್ಬರಗಳನ್ನು ಮತ್ತು ಬೆಳೆಗಳಿಗೆ ತಗಲುವ ರೋಗಗಳ ನಿಯಂತ್ರಣಕ್ಕಾಗಿ ಅಪಾಯಕಾರಿಯಾದ ಕೀಟನಾಶಕಗಳನ್ನು ಬಳಸುತ್ತಿದ್ದಾರೆ. ಆದರೆ ಹಿಂದೆ ಇವುಗಳ ಬದಲಾಗಿ ನಮ್ಮ ಪೂರ್ವಿಕರು ಬಳಸುತ್ತಿದ್ದ ದೇಶೀ ಜ್ಞಾನಗಳನ್ನು ಮರೆಯಲಾಗುತ್ತಿದೆ. ಜೊತೆಗೆ 'ಹಿತ್ತಲಗಿಡ ಮದ್ದಲ್ಲ' ಎನ್ನುವಂತೆ ಪೂರ್ವಿಕರ ಕೃಷಿ ಜ್ಞಾನವನ್ನು ನಿರ್ಲಕ್ಷಿಸಲಾಗುತ್ತಿದೆ. ಈಗಿನಂತೆ ಹಿಂದೆಯೂ ಕೀಟಗಳ ಹಾವಳಿ ಇತ್ತು. ಆದರೆ ಅವುಗಳ ನಿಯಂತ್ರಣಕ್ಕಾಗಿ ಬಳಸುತ್ತಿದ್ದ ವಿಧಾನಗಳು ಅತ್ಯಂತ ಉಪಯುಕ್ತವೂ ಮತ್ತು ಆರೋಗ್ಯಕರವೂ ಆಗಿರುತ್ತಿದ್ದವು.

ಉದಾಹರಣೆಗೆ, ಬೆಳೆಗಳಿಗೆ ರೋಗ ಬಂದಾಗ ಸಸ್ಯಮೂಲ ಔಷಧಿಗಳನ್ನು ಕೀಟನಾಶಕವಾಗಿ ಬಳಸುತ್ತಿದ್ದರು. 'ಎಂಡೋಸಲ್ಫಾನ್' ಬದಲು 'ಬೇವಿನಎಣ್ಣೆ'ಯನ್ನು ಕೀಟನಾಶಕವಾಗಿ ಬಳಸುತ್ತಿದ್ದರು. 'ಯೂರಿಯಾ' 'ಸಫಲಾ'ಗಳಂತ ರಾಸಾಯನಿಕ ಗೊಬ್ಬರಗಳಿಗೆ ಬದಲಾಗಿ ಮನೆಯ ಹಿತ್ತಲಲ್ಲೆ ಸಂಗ್ರಹಿಸಿದ ಸಗಣಿ ಮತ್ತು ಇತರ ಕೃಷಿ ತ್ಯಾಜ್ಯ ವಸ್ತುಗಳಿಂದಾದ ಜೈವಿಕ ಗೊಬ್ಬರವನ್ನು ಬಳಸುತ್ತಿದ್ದರು. ಇವು ಬೆಳೆಗಳ ಪೋಷಣೆ ಜೊತೆಗೆ ಭೂಮಿಯ ಫಲವತ್ತತೆಯ ದೃಷ್ಟಿಯಿಂದಲೂ ಉತ್ತಮ ವಿಧಾನಗಳಾಗಿದ್ದವು.

ಅಂತೆಯೇ ಕೃಷಿಕರಲ್ಲಿ ಚರಗ ಚೆಲ್ಲುವ ಆಚರಣೆಯೊಂದಿದೆ. ಈಗಲೂ ಕೆಲವು ಕಡೆಗಳಲ್ಲಿ ಈ ಆಚರಣೆ ಪ್ರಚಲಿತದಲ್ಲಿದೆ. ಚರಗ ಚೆಲ್ಲುವ ಈ ಆಚರಣೆಯ ಹಿಂದಿರುವ ನಮ್ಮ ಪೂರ್ವಿಕರ ಆಲೋಚನೆ ತುಂಬಾ ಅರ್ಥಪೂರ್ಣವಾದಂತಹದ್ದು. ಚರಗ ಚೆಲ್ಲುವ ಆಚರಣೆಯಲ್ಲಿ ಹೊಲದ ತುಂಬೆಲ್ಲ ಅನ್ನವನ್ನು ಎರಚಲಾಗುತ್ತದೆ. ಇದರಿಂದ ಅನ್ನದ ಅಗಳನ್ನು ಆಯಲು ಬಂದ ಪಕ್ಷಿಗಳು ಬೆಳೆಗಳ ತೆನಿಯಲ್ಲಿದ್ದ ಕಾಳುಗಳಿಗೆ ಅಂಟಿದ ಹುಳುಗಳನ್ನು ಆಯ್ದು ತಿನ್ನುತ್ತವೆ ಎನ್ನುವ ಹಿನ್ನೆಲೆಯಲ್ಲಿ ಈ ಆಚರಣೆ ರೂಢಿಗೆ ಬಂದಿದೆ.

ಅದೇ ರೀತಿಯಾಗಿ ಕೀಟಗಳ ನಿರ್ವಹಣೆಯ ಹಿನ್ನೆಲೆಯಲ್ಲಿ ಮಲೆನಾಡಿನ ಕೃಷಿಕರಿಂದ ಆಚರಿಸಲ್ಪಡುವ ದೀಪೋಳಿಗೆ ಎನ್ನುವ ಆಚರಣೆಯಲ್ಲಿ ಗದ್ದೆಗೆ ಹೋಗಿ ದೀಪಗಳನ್ನು ಹಚ್ಚಿಟ್ಟು ಬರುವರು. ದೀಪಾವಳಿಯ ಸಂದರ್ಭದಲ್ಲಿ ಮಾಡಲಾಗುವ ಈ ಆಚರಣೆಯ ಅವಧಿಯಲ್ಲಿ ಬೆಳೆಗಳು ಕಾಳುಗಟ್ಟಿ ಕೊಯ್ಯಲಿಗೆ ಬಂದಿರುವ ಅವಧಿಯಾಗಿರುತ್ತದೆ. ಬೆಳೆದ ಬೆಳೆಯ ಕಾಳುಗಳನ್ನು ಹಾನಿಗೊಳಿಸುವ ಕೀಟಗಳು ದೀಪದ ಆಕರ್ಷಣೆಗೆ ಬಂದು ಹಣತೆಯಲ್ಲಿದ್ದ ಎಣ್ಣೆಯಲ್ಲಿ ಬಿದ್ದು ಸಾಯುತ್ತವೆ. ಅಂದರೆ ಈ ಆಚರಣೆ ಒಂರ್ಥದಲ್ಲಿ ಕೀಟಗಳಿಂದ ಬೆಳೆಯನ್ನು ರಕ್ಷಣೆ ಮಾಡುವಂತದ್ದಾಗಿರುತ್ತದೆ.

ಅದೇ ರೀತಿ ಮಲೆನಾಡು ಪ್ರದೇಶಗಳಲ್ಲಿ ಬತ್ತದ ಬೆಳೆಗೆ ಕೀಟಗಳ ಹಾವಳಿಯನ್ನು ತಡೆಗಟ್ಟಲು ಪ್ರತಿ ಹಾಳೆಯ ಮಡೆ ಬಾಯಿಗೆ ಮುಕ್ಕಡದ ಸೊಪ್ಪನ್ನು ಇಡುತ್ತಾರೆ. ಹರಿಯುವ ನೀರು ಮುಕ್ಕಡದ ಸೊಪ್ಪಿನ ರಸವನ್ನು ಹಾಳೆಗಳಿಗೆ ತೆಗೆದುಕೊಂಡು ಹೋಗುತ್ತದೆ. ಆಗ ಆ ಹಾಳೆಯಲ್ಲಿರುವ ಹುಳು ಹುಪ್ಪಟೆಗಳೆಲ್ಲ ಸತ್ತು ಹೋಗುತ್ತವೆ (ಸಂಗ್ರಹ : ಎಂ.ಜಿ. ಈಶ್ವರಪ್ಪ, ೧೯೯೯, ಪು.೭೫). ಹೆಸರು, ಹಲಸಂದಿ ಮುಂತಾದ ಬೆಳೆಗಳಿಗೆ ಕಂಬಳಿಹುಳು ಅಥವಾ ಕೋರಿಹುಳು ಬಿದ್ದರೆ ಹೊಲದ ಸುತ್ತ ಹಚ್ಚ ಹಸಿರು ಬಣ್ಣದ ಹುಲ್ಲು ಅಥವಾ ಚಿಟ್ಟಟ್ಟೆ ಸೊಪ್ಪು ತಂದು ಹಾಕುತ್ತಾರೆ. ಹಸಿರು ಬಣ್ಣಕ್ಕೆ ಆಕರ್ಷಿತವಾದ ಹುಳುಗಳು ಅಲ್ಲಿಗೆ ಧಾವಿಸುತ್ತವೆ. ಆಗ ಅವುಗಳನ್ನು ಅಲ್ಲಿಯೇ ಸಾಯಿಸಲಾಗುತ್ತದೆ. ಅಥವಾ ಹುಲ್ಲು ತಿಂದು ಅಲ್ಲಿಯೇ ಗೂಡುಕಟ್ಟಿ ಚಿಟ್ಟೆಗಳಾಗಿ ಹಾರಿಹೋಗುತ್ತವೆ (ಅದೇ, ಪು. ೭೫)

ಈ ರೀತಿಯಾಗಿ ನಮ್ಮ ಪಾರಂಪರಿಕ ಕೃಷಿಯಲ್ಲಿ ನಮ್ಮ ಪೂರ್ವಿಕರು ತಮ್ಮ ಅನುಭವದ ಹಿನ್ನೆಲೆಯಲ್ಲಿ ಕೃಷಿಯಲ್ಲಿ ಅಳವಡಿಸಿದ ಈ ರೀತಿಯ ವಿಧಾನಗಳು ಅಪಾಯಕಾರಿಯಲ್ಲದವುಗಳು ಮತ್ತು ಕಡಿಮೆ ಖರ್ಚಿನಲ್ಲಿ ಸುಲಭವಾಗಿ ನಿಭಾಯಿಸಬಹುದಾದ ಮೌಲ್ಯಯುತ ವಿಧಾನಗಳಾಗಿವೆ. ಆದರೆ ಆಧುನಿಕತೆಯ ವ್ಯಾಮೋಹಕ್ಕೊಳಗಾದ ರೈತ ಇಂದು ಈ ಎಲ್ಲ ಪಾರಂಪರಿಕ ಕೃಷಿಯ ಪದ್ಧತಿಗಳನ್ನು ನಿರ್ಲಕ್ಷಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ.

**೪. ಕೃಷಿಯೊಟ್ಟಿಗಿನ ಒಡನಾಟ ಮತ್ತು ಸಾಂಸ್ಕೃತಿಕ ಸಂಬಂಧಗಳು ದೂರವಾಗುತ್ತಿವೆ :**

ರೈತನಿಗೆ ಬೆಳೆ ಬೆಳೆಯುವುದಕ್ಕೆ ಸಹಾಯಕವಾಗಿದ್ದ ಭೂಮಿಯ ಬಗೆಗೆ, ಮಳೆಯ ಬಗೆಗೆ ಮತ್ತು ತಮ್ಮೊಂದಿಗೆ ಹೆಗಲುಕೊಟ್ಟು ದುಡಿಯುವ ಎತ್ತುಗಳ ಬಗೆಗೆ ಹಾಗೂ ಕೃಷಿಗಾಗಿ ಬಳಸುತ್ತಿದ್ದ ಸಾಧನ ಸಲಕರಣೆಗಳ ಬಗೆಗೆ ಒಂದು ಬಗೆಯಲ್ಲಿ ದೈವತ್ವದ ಭಾವನೆಯಿತ್ತು. ಅವು ಶ್ರೇಷ್ಠವೆಂದು ಭಾವಿಸಿದ್ದರಿಂದ ಅವುಗಳ ಸುತ್ತ ಕೆಲವು ನಂಬಿಕೆಗಳನ್ನು ಕಟ್ಟಿಕೊಂಡಿದ್ದರಿಂದ ಅವುಗಳನ್ನು ಪೂಜ್ಯ ಭಾವನೆಯಿಂದ ಕಾಣುತ್ತಿದ್ದರು. ಆದರೆ ಆಧುನಿಕ ಯುಗದಲ್ಲಿ ಕೃಷಿ ಎನ್ನುವುದು ವ್ಯವಹಾರಿಕವಾಗಿದ್ದರಿಂದ ಅದು ಒಂದು ಬಿತ್ತಿ ಬೆಳೆಯುವ ಕ್ರಮ ಮಾತ್ರವೇ ಆಗಿ ಉಳಿದಿದ್ದರಿಂದ ಕೃಷಿ ವಲಯದಲ್ಲಿಂದು ಭೂಮಿ, ದೈವ, ಪ್ರಾಣಿ ಮತ್ತು ಪ್ರಕೃತಿಗೆ ಸಂಬಂಧಿಸಿದಂತೆ ನಡೆಯುವ ಕೆಲವು ಆಚರಣೆಗಳು ಹಿಂದಿನಂತೆ ಸಂಭ್ರಮದಿಂದ

ನಡೆಯದಿದ್ದರೂ ಸಾಂಪ್ರದಾಯಿಕವಾಗಿಯಾದರೂ ಉಳಿದುಕೊಂಡು ಬಂದಿವೆ. ಈ ರೀತಿಯಲ್ಲಿ ರೈತನಿಗಿದ್ದ ಭೂಮಿಯೊಟ್ಟಿಗಿನ ಮತ್ತು ಪ್ರಾಣಿಗಳ ಜೊತೆಗಿನ ಅವಿನಾಭಾವತೆ ಸ್ವಲ್ಪ ಮಟ್ಟಿಗೆ ಕಡಿಮೆಯಾಗಿದ್ದು, ರೈತರು ಇಂದು ವ್ಯವಹಾರಿಕ ಮನೋಭಾವ ಬೆಳೆಸಿಕೊಂಡಿರುವುದು ಕಂಡುಬರುತ್ತದೆ.

ಅನ್ನದಾತರಾದ ಕೃಷಿಕರು ಕೃಷಿಗಾಗಿ ಇತರ ವೃತ್ತಿಯ ಜನರನ್ನು ಅವಲಂಬಿಸಿದ್ದರು. ಗ್ರಾಮೀಣ ಪರಿಸರದಲ್ಲಿ ವಿವಿಧ ಜಾತಿ ಜನಾಂಗದ ಮತ್ತು ವಿವಿಧ ವೃತ್ತಿಯನ್ನು ಹೊಂದಿದ ಜನರಿದ್ದು ಇವರೆಲ್ಲ ಹಳ್ಳಿಯಲ್ಲಿ ಅನೋನ್ಯ ಸಂಬಂಧಗಳನ್ನು ಇಟ್ಟುಕೊಂಡಿದ್ದು ಒಬ್ಬರಿಗೊಬ್ಬರು ನೆರವಾಗುತ್ತಿದ್ದರು. ಹಾಗೆಯೇ ಅನ್ನದಾತರಾದ ಕೃಷಿಕರು ಕೃಷಿಗಾಗಿ ಬಡಿಗ, ಕಮ್ಮಾರ, ಚಮ್ಮಾರ ಮುಂತಾದ ವೃತ್ತಿಯ ಜನರನ್ನು ಅವಲಂಬಿಸಿರುತ್ತಿದ್ದರು. ಇವರ ಹತ್ತಿರ ತನ್ನ ಕೃಷಿಗೆ ಪೂರಕವಾದ ಕೆಲಸಗಳಾದ ಕುಡ ಹಣಿಸುವ, ಕೂರ್ಗಿ, ನೇಗಿಲು, ರಂಟಿ-ಕುಂಟಿಗಳನ್ನು ತಯಾರಿಸುವಂತಹ ಕೆಲಸಗಳನ್ನು ರೈತ ಮಾಡಿಸಿಕೊಂಡು ಅವರು ಮಾಡಿದ ಕೆಲಸಕ್ಕೆ ಸುಗ್ಗಿಯ ಕಾಲದಲ್ಲಿ ತಾನು ಬೆಳೆದ ಬೆಳೆಗಳಲ್ಲಿ ವರ್ಷಕ್ಕೆ ಇಂತಿಷ್ಟು ಪಾಲು ಎಂದು ಅವರಿಗೆ ದಾನ ಅಥವಾ ಆಯ ಕೊಡುತ್ತಿದ್ದರು.

ಅಲ್ಲದೆ ಊರಲ್ಲಿ ಊರಿನ ಹಿತಕ್ಕಾಗಿ ಅಥವಾ ಮನೆಯಲ್ಲಿ ನಡೆಯುವ ಕೆಲವು ಶುಭಕಾರ್ಯ ಇಲ್ಲವೆ ಸೂತಕದ ಕಾರ್ಯಗಳಲ್ಲಿ ಭಾಗಿಯಾಗುತ್ತಿದ್ದ ಸಮುದಾಯಗಳಾದ ಪೂಜಾರಿಗಳಿಗೆ, ಅಗಸರಿಗೆ, ಚಲುವಾದಿಗಳಿಗೆ, ಐನಾರಿಗೆ, ತಳವಾರರಿಗೆ ಕೂಡಾ ರೈತರು ಆಯ ಕೊಡುತ್ತಿದ್ದರು. ಆಯ ಸ್ವೀಕರಿಸುತ್ತಿದ್ದ ಇವರನ್ನೆಲ್ಲ ಆಯಗಾರರು ಎಂದು ಕರೆಯಲಾಗುತ್ತಿತ್ತು. ಆದರೆ ಆಧುನಿಕ ದಿನಮಾನಗಳಲ್ಲಿ ಕೃಷಿಯು ಇಂದು ವ್ಯವಹಾರಿಕ ಮತ್ತು ಲಾಭದ ದೃಷ್ಟಿಯಿಂದ ಮಾಡುತ್ತಿರುವ ಒಂದು ಕಮರ್ಶಿಯಲ್ ವೃತ್ತಿಯಾಗಿದ್ದರಿಂದ ರೈತರಲ್ಲಿ ಈಗ ತಾನು ಬೆಳೆದ ಬೆಳೆಯನ್ನು ಹಂಚಿ ತಿನ್ನುವ ಮನೋಭಾವ ದೂರವಾಗಿದೆ. ಹಾಗಾಗಿ ಇಂದು ಕೃಷಿಯಲ್ಲಿ ಆಯ ಕೊಡುವ ಪದ್ಧತಿ ಕ್ರಮೇಣ ಕಡಿಮೆಯಾಗಿದೆ. ಕೃಷಿಕ ತನ್ನ ಮತ್ತು ಕುಟುಂಬದ ಹಿತಾಸಕ್ತಿಯ ಬಗೆಗೆ ಮಾತ್ರ ಆಲೋಚಿಸುವ ಸಂಕುಚಿತ ಮನೋಭಾವ ಬೆಳೆಸಿಕೊಂಡಿದ್ದರಿಂದ ಕೃಷಿಕನಿಗೆ ಊರೊಟ್ಟಿಗಿದ್ದ ಸಂಬಂಧಗಳು ದೂರವಾಗುತ್ತಿವೆ.

ಈ ರೀತಿಯಾಗಿ ಸಮಕಾಲೀನ ಮಾನವ ಬದುಕಿನ ಎಲ್ಲ ಸ್ತರದಲ್ಲೂ ಚಲನಾತ್ಮಕ ಪ್ರವೃತ್ತಿ ಇರುವಂತೆ ಕೃಷಿಕ್ಷೇತ್ರದಲ್ಲೂ ಚಲನಾತ್ಮಕ ಪ್ರವೃತ್ತಿ ಇರುವುದು ಕಂಡುಬರುತ್ತದೆ. ಹೀಗೆ ಹೊಸದೊಂದು ಕಾಣಿಸಿಕೊಳ್ಳುತ್ತಿರುವಾಗ ಅದರ ಹಿಂದಿನ ವ್ಯವಸ್ಥೆಯಲ್ಲಿದ್ದ ಎಷ್ಟೋ ಭೌತಿಕವಾದ, ಭಾವನಾತ್ಮಕವಾದ ಮತ್ತು ಸಾಂಸ್ಕೃತಿಕವಾದ ಅಂಶಗಳು ಕಳೆದುಹೋಗುತ್ತಿರುತ್ತವೆ. ಆದರೆ ಆಧುನಿಕತೆ ಎನ್ನುವುದು ಸಹಜ ಪ್ರಕ್ರಿಯೆಯಾದ್ದರಿಂದ ಬದುಕಿನ ಎಲ್ಲಾ ಮಗ್ಗಲುಗಳನ್ನು ವ್ಯಾಪಿಸಿಕೊಂಡಿದೆ. ಹಾಗಾಗಿ ಅದನ್ನು ತಡೆದು ನಿಲ್ಲಿಸಲಾಗದು. ಆದರೆ ಯಾವುದನ್ನು ಸ್ವೀಕರಿಸಬೇಕು ಮತ್ತು ಯಾವುದನ್ನು ನಿರಾಕರಿಸಬೇಕೆಂಬ ಸೂಕ್ಷ್ಮ ಎಚ್ಚರಿಕೆ ಬೇಕಾಗುತ್ತದೆ. ಏಕೆಂದರೆ ಹೆಚ್ಚು ಉತ್ಪಾದಿಸಬೇಕೆಂಬ ಹಂಬಲದಿಂದ ಆಧುನಿಕ ಕೃಷಿ ವಿಧಾನಗಳ ವ್ಯಾಮೋಹಕ್ಕೆ ಒಳಗಾದರೆ ಕೊನೆಗೆ ನಮ್ಮತನವನ್ನು ಕಳೆದುಕೊಳ್ಳಬೇಕಾದ ಪರಿಸ್ಥಿತಿ ಬಂದೊದಗಬಹುದು.

**ಕೊನೆಟಿಪ್ಪಣಿ**

೧. ದೇಶದಲ್ಲಿ ಒಂಭತ್ತು ಕೋಟಿ ನಲವತ್ತು ಲಕ್ಷ ಹೆಕ್ಟೇರುಗಳಿಗೂ ಹೆಚ್ಚು ಭೂಮಿ ಕೃಷಿಗಾಗಿ ಮಳೆಯನ್ನೇ ಅವಲಂಬಿಸಿರುತ್ತದೆ. ಇದು ಸಾಗುವಳಿಯಾಗಿರುವ ಒಟ್ಟು ಪ್ರದೇಶದ ಸುಮಾರು ಶೇ. ೬೫ ರಷ್ಟಿದೆ. ಆಹಾರೋತ್ಪಾದನೆಯ ಶೇಕಡಾ ನಲವತ್ತರಷ್ಟು ಭಾಗವನ್ನು ಇಂತಹ ಭೂಮಿಯಲ್ಲೇ ಬೆಳೆಯಲಾಗುತ್ತದೆ. ಈ ಆಹಾರದಿಂದ ದೇಶದ ಜನಸಂಖ್ಯೆಯ ಶೇ. ೪೦ರಷ್ಟು ಜನರ ಆಹಾರದ ಅಗತ್ಯಗಳನ್ನು ಪೂರೈಸಲಾಗುತ್ತದೆ. (ಡಾ.ಐ.ಸಿ. ಭಾಟಿಯಾ ಮತ್ತು ಹೆಚ್.ಪಿ. ಸಿಂಗ್, ಯೋಜನಾ ಫೆಬ್ರವರಿ, ೨೦೦೧)

೨. ಹಾವೇರಿ ಜಿಲ್ಲೆಯಲ್ಲಿ ಒಂದು ವರ್ಷಕ್ಕೆ ೧೪,೮೨೧ ಟನ್ನ ಸಾರಜನಕ, ೯,೭೮೭ ಟನ್ನ ರಂಜಕ, ೪,೪೩೬ ಟನ್ನು ಪೊಟ್ಯಾಸ್ ಹೀಗೆ ಒಟ್ಟು ೨,೯೦೪೪ ಟನ್ ರಾಸಾಯನಿಕ ಗೊಬ್ಬರ ವಿತರಣೆಯಾಗಿರುವುದು ತಿಳಿದು ಬಂದಿದೆ. (ಆಧಾರ : ಹಾವೇರಿ ಜಿಲ್ಲಾ ಅಂಕಿ-ಅಂಶಗಳ ನೋಟ: ೨೦೦೪-೦೫)

೩. ಹಾವೇರಿ ಜಿಲ್ಲೆಯಲ್ಲಿ ೨೦೦೧ರ ಜನಗಣತಿಯ ಪ್ರಕಾರ ಕೃಷಿಯಲ್ಲಿ ದುಡಿಯುತ್ತಿರುವ ಕಾರ್ಮಿಕರಲ್ಲಿ ಒಟ್ಟು ೨,೯೧,೨೭೫ ಜನರಿದ್ದು, ಅದರಲ್ಲಿ ೧,೩೩,೯೭೭ ರಷ್ಟು ಜನ ಪುರುಷ ಕಾರ್ಮಿಕರಿದ್ದಾರೆ. ೧,೫೭,೨೯೮ ಜನ ಮಹಿಳಾ ಕಾರ್ಮಿಕರಿರುವರು. ಈ ಅಂಕಿಅಂಶಗಳಿಂದ ಕೃಷಿಯಲ್ಲಿ ದುಡಿಯುವ ವರ್ಗದಲ್ಲಿ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ತೊಡಗಿಕೊಂಡಿರುವುದು ಸ್ಪಷ್ಟವಾಗುತ್ತದೆ.

* * * * *

# ಅಧ್ಯಾಯ ೮

# ಸಮಾರೋಪ

ಅನುಬಂಧಗಳು

* ಗ್ರಂಥಋಣ
* ವಕ್ತೃ ವಿವರ
* ಛಾಯಾಚಿತ್ರಗಳು

ನಿರ್ಲಕ್ಷ್ಯಕ್ಕೊಳಗಾಗುತ್ತಿದ್ದಾಳೆ ಎಂಬುದಕ್ಕೆ ಇದೊಂದು ಸಣ್ಣ ನಿದರ್ಶನವಷ್ಟೆ. ಈ ರೀತಿಯ ಹಲವು ಹತ್ತು ಸಾಮಾಜಿಕ ವಾಸ್ತವಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಪ್ರಧಾನವಾಗಿ ಸಂಗ್ರಹಿತ ಮತ್ತು ಕ್ಷೇತ್ರ ಕಾರ್ಯದಿಂದ ಕಂಡುಕೊಂಡ ಮೌಖಿಕ ಆಕರಗಳ ಹಿನ್ನೆಲೆಯಲ್ಲಿ ಕೃಷಿ ಮಹಿಳೆಯ ಬದುಕಿನ ವಿವಿಧ ಆಯಾಮಗಳನ್ನು ಅರ್ಥೈಸುವ ಸಣ್ಣ ಪ್ರಯತ್ನವನ್ನು ಮಾಡಲಾಗಿದೆ.

ನಾವಿಂದು ತುಂಬಾ ಸಂಕೀರ್ಣತೆಯ ನಡುವೆ ಬದುಕುತ್ತಿದ್ದೇವೆ. ಹಾಗಾಗಿ ಯಾವುದೇ ವಿಷಯದ ಬಗೆಗಾಗಲಿ ನಾವು ಒಂದು ತೀರ್ಮಾನಕ್ಕೆ ಬಂದು ಬಿಡುವುದಕ್ಕಾಗುವುದಿಲ್ಲ. ಅದರ ಬದಲಾಗಿ ಆ ವಿಷಯದ ವಿವಿಧ ಆಯಾಮಗಳನ್ನು ಬಿಚ್ಚಿಡುವುದು ಹೆಚ್ಚು ಸೂಕ್ತವೆನಿಸುತ್ತದೆ. ಆಧುನಿಕ ತಂತ್ರಜ್ಞಾನ ಯಾವ ಹಂತದಲ್ಲಿ ಉಪಯುಕ್ತವಾಗಬಲ್ಲದು ಮತ್ತು ಅಪಾಯಕಾರಿಯಾಗಬಲ್ಲದು ಎಂಬುದನ್ನು ಒಂದೇ ರೀತಿಯಲ್ಲಿ ವ್ಯಾಖ್ಯಾನಿಸುವುದಕ್ಕೆ ಆಗದು. ಯಾವುದೇ ವಿಜ್ಞಾನ ತಂತ್ರಜ್ಞಾನ ತನ್ನಲ್ಲಿ ಅಪಾರ ಶಕ್ತಿಯನ್ನು, ಸಾಧ್ಯತೆಗಳನ್ನು ಅಡಗಿಸಿಕೊಂಡಿರುತ್ತದೆ. ಅದರ ಉಪಯೋಗ, ದುರುಪಯೋಗ ಎರಡರ ಸಾಧ್ಯತೆಯೂ ಸಮಾಜದ ಮೇಲೆ ತೀವ್ರ ಪರಿಣಾಮವನ್ನು ಬೀರಬಲ್ಲದು. ಆದರೆ ಲಾಭ-ನಷ್ಟವನ್ನು ನಾವು ಯಾವ ಹಿನ್ನೆಲೆಯಲ್ಲಿ ನೋಡುತ್ತೇವೆ ಎನ್ನುವುದು ಮುಖ್ಯವಾಗುತ್ತದೆ. ಬೀಸುವ ಕಲ್ಲಿನಲ್ಲಿ ಕಾಳು ಬೀಸಿ ಹಿಟ್ಟು ಮಾಡುವ ಶ್ರಮವೇನು ಎಂದು ಅರಿತವರು ಸುಲಭವಾಗಿ ಹಿಟ್ಟು ಮಾಡಿಬಿಡುವ ಹಿಟ್ಟಿನ ಗಿರಣಿಗಳನ್ನಾರು ನಿರಾಕರಿಸಲಾರರು. ಅಂತೆಯೇ ‘ತೀವ್ರವಾಗಿ ಬೆಳೆಯುತ್ತಿರುವ ಕೃಷಿ ವಲಯದಲ್ಲಿ ಆಧುನಿಕ ಯಂತ್ರೋಪಕರಣಗಳ ಬಳಕೆಯಿಂದ ಮಹಿಳೆಯರ ದುಡಿಮೆಯ ಅವಕಾಶಗಳು ಕಡಿತಗೊಳ್ಳುತ್ತಿವೆ’ ಎಂಬ ಆತಂಕದ ಜನಪ್ರಿಯ ಕೂಗು ನಮಗಿಂದು ಕೇಳಿ ಬರುತ್ತದೆ. ಇದು ನಿಜವಾಗಿದ್ದರೂ ಆಧುನಿಕ-ತಂತ್ರಜ್ಞಾನ ಮತ್ತು ಆಧುನಿಕತೆಯ ಹೊಸ ಬೆಳವಣಿಗೆಗಳು ಕೃಷಿಯಲ್ಲಿ ಹಾಸುಹೊಕ್ಕಾಗಿರುವಾಗ ಅವನ್ನು ಎಷ್ಟರಮಟ್ಟಿಗೆ ನಿರಾಕರಿಸಲು ಸಾಧ್ಯ?' ಎನ್ನುವ ಪ್ರಶ್ನೆಯು ನಮಗೆ ಎದುರಾಗುತ್ತದೆ. ಅಲ್ಲದೆ ಎಷ್ಟು ಜನ ಕೃಷಿಕರಿಗೆ ಆಧುನಿಕ ಯಂತ್ರೋಪಕರಣ ಸಮರ್ಪಕ ಬಳಕೆ ಸಾಧ್ಯವಾಗಿದೆ? ಎಂಬ ಅಂಶವನ್ನು ನಾವು ಗಮನಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದಲ್ಲಿ ಆಧುನಿಕತೆಯ ಪರವಾಗಲಿ ವಿರೋಧವಾಗಲಿ ನಿಲುವುಗಳನ್ನು ತಳೆಯದೆ ವಾಸ್ತವದ ವಸ್ತುಸ್ಥಿತಿ ಏನಾಗಿದೆ? ಎಂಬುದನ್ನು ಅಂದರೆ ಕೃಷಿ ಮಹಿಳೆಯ ಬದುಕು ಇಂದು ಏನಾಗಿದೆ? ಆಧುನಿಕ ಕೃಷಿ ವಿಧಾನಗಳು ಮಹಿಳಾ ದುಡಿಮೆಗಾರರ ಮೇಲೆ ಮತ್ತು ಕೃಷಿಯ ಮೇಲೆ ಯಾವ ರೀತಿಯ ಪರಿಣಾಮಗಳನ್ನು ಬೀರುತ್ತಿವೆ ಎಂಬುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಅದೇ ರೀತಿ ಕೃಷಿ ವಲಯದಲ್ಲಿ ಇತ್ತೀಚೆಗೆ ಕಂಡು ಬರುತ್ತಿರುವ ಒಂದು ಸಂಗತಿಯೆಂದರೆ ಕಾರ್ಮಿಕರು ಅಧಿಕ ಕೂಲಿ ದೊರೆಯುವ ಕೃಷಿಯೇತರ ಉದ್ಯೋಗ ಅರಸಿ ಪಟ್ಟಣಗಳಿಗೆ ವಲಸೆ ಹೋಗುವ ಪ್ರವೃತ್ತಿ ಕಂಡು ಬರುತ್ತಿದೆ. ಇದರಿಂದ ಮಹಿಳೆಯರೇ ಕುಟುಂಬದ ಜವಾಬ್ದಾರಿಯೊಂದಿಗೆ ಕೃಷಿ ನಿರ್ವಹಣೆಯ ಜವಾಬ್ದಾರಿಯನ್ನು ಸಹ ನಿಭಾಯಿಸುತ್ತಿದ್ದಾರೆ. ಇದರಿಂದಾಗಿ ಕೃಷಿ ಮಹಿಳೆಯರ ಕೆಲಸದ

ಒತ್ತಡ ಹೆಚ್ಚುತ್ತಿರುವುದು ನಿಜ. ಆದರೆ ಇದನ್ನು ಮತ್ತೆ ಮಹಿಳಾ ಪ್ರಧಾನ ಕೃಷಿ ನಿರ್ಮಾಣಗೊಳ್ಳುತ್ತಿದೆ ಎಂದು ಅರ್ಥೈಸಿಕೊಳ್ಳಬೇಕೆ? ಅಥವಾ ಮಹಿಳೆಯನ್ನು ಮತ್ತಷ್ಟು ಕೆಲಸ ಕಾರ್ಯಗಳಿಗೆ ಹೊಣೆಯಾಗಿಸಿ, ಅವಳ ಸೃಜನಶೀಲತೆಯನ್ನೆಲ್ಲ ಕೌಟುಂಬಿಕ ಹಿತಾಸಕ್ತಿಗಾಗಿಯೇ ವ್ಯಯವಾಗುವಂತಹ ವಾತಾವರಣ ನಿರ್ಮಾಣಗೊಳ್ಳುತ್ತಿದೆ ಎಂದು ಭಾವಿಸಬೇಕೆ? ಅಥವಾ ಕೃಷಿಯು ಇಂದು ನಿರ್ಲಕ್ಷ್ಯಕ್ಕೊಳಗಾಗುತ್ತಿದೆ ಎಂದು ಅರ್ಥೈಸಿಕೊಳ್ಳಬೇಕೆ? ಎನ್ನುವ ಹಲವು ಹತ್ತು ಪ್ರಶ್ನೆಗಳು ನಮ್ಮ ಮುಂದಿವೆ. ಇವೆಲ್ಲಕ್ಕೂ ಈ ಮೊದಲೇ ಹೇಳಿದಂತೆ ತಕ್ಷಣಕ್ಕೆ ಒಂದು ಉತ್ತರವನ್ನು ನೀಡಲಿಕ್ಕಾಗದು. ಇದಕ್ಕೆ ಕಾಲವೇ ಉತ್ತರ ಕೊಡಬೇಕಾಗುತ್ತದೆ. ಅಲ್ಲದೆ ಒಂದೆಡೆಗೆ ಕೃಷಿಯಲ್ಲಿ ಆಧುನಿಕ ಯಂತ್ರೋಪಕರಣಗಳ ಬಳಕೆಯಿಂದ ಮಹಿಳೆ ಕೃಷಿಯಿಂದ ದೂರ ಉಳಿಯಲ್ಪಟ್ಟರೆ ಮತ್ತೊಂದೆಡೆ ಪುರುಷರು ಇತರ ಉದ್ಯೋಗ ಅರಸಿ ವಲಸೆ ಹೋಗುತ್ತಿರುವುದರಿಂದ ಮಹಿಳೆಯರೇ ಕೃಷಿಯನ್ನು ನಿರ್ವಹಿಸಿಕೊಂಡು ಹೋಗುತ್ತಿರುವುದು ಕಂಡು ಬರುತ್ತಿದೆ. ಈ ಸಂಕೀರ್ಣ ಸ್ಥಿತಿಯಲ್ಲಿ ಕೃಷಿ ಮಹಿಳೆಯನ್ನು ಕುರಿತು ಯಾವ ನಿಲುವಿಗೆ ಬರಬೇಕೆಂಬುದು ಕೂಡಾ ಅಷ್ಟು ಸುಲಭದ್ದಲ್ಲ.

ಪ್ರಸ್ತುತ ಅಧ್ಯಯನವು ಎಂಟು ಅಧ್ಯಾಯಗಳ ಹರವುಳ್ಳದ್ದಾಗಿದೆ. ಅಧ್ಯಯನವು ಮೊದಲು ಪ್ರಸ್ತಾವನೆಯಿಂದ ಪ್ರಾರಂಭವಾಗಿದ್ದು, ನಂತರ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಒಳಗೊಂಡಿದೆ. ಅಲ್ಲದೆ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪಗಳನ್ನು ಹಾಗೂ ಅಧ್ಯಯನದ ಪರಿಕಲ್ಪನೆಯನ್ನು ಸ್ಪಷ್ಟಪಡಿಸಿಕೊಳ್ಳಲಾಗಿದೆ. ಆ ನಂತರದಲ್ಲಿ ಅಧ್ಯಯನದ ಅನುಕೂಲಕ್ಕಾಗಿ ಗುರುತಿಸಿಕೊಂಡ ಅಧ್ಯಯನ ಕ್ಷೇತ್ರವಾದ ಹಾವೇರಿ ಜಿಲ್ಲೆಯ ಸಂಕ್ಷಿಪ್ತ ಪರಿಚಯವನ್ನು ಕೊಡಲಾಗಿದೆ. ಇದರಲ್ಲಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ, ಭೌಗೋಳಿಕ ಹಿನ್ನೆಲೆ, ಹವಾಮಾನ ಮತ್ತು ಮಳೆಗೆ ಸಂಬಂಧಿಸಿದ ವಿವರ, ಜಿಲ್ಲೆಯ ಜನಸಂಖ್ಯೆ ಮತ್ತು ಜನಸಾಂದ್ರತೆಯ ಮಾಹಿತಿ, ಜಿಲ್ಲೆಯ ಪ್ರಮುಖ ಬೆಳೆಗಳು, ಜಿಲ್ಲೆಯೊಳಗಿನ ಒಟ್ಟು ಭೂಹಿಡುವಳಿ ಮತ್ತು ಹಿಡುವಳಿದಾರರ ಬಗೆಗೆ, ಜಿಲ್ಲೆಯ ಪ್ರಮುಖ ಬೆಳೆಗಳ ಬಗೆಗೆ, ಜಿಲ್ಲೆಯ ಆದಾಯ ಮೂಲಗಳು, ಜಿಲ್ಲೆಯ ಶೈಕ್ಷಣಿಕ ಮತ್ತು ಇತರೆ ಕೆಲವು ವಿವರಗಳನ್ನು ಅಧ್ಯಯನಕ್ಕೆ ಪೂರಕವಾಗಿ ಕೊಡಲಾಗಿದೆ. ಬಳಿಕ, ಕೃಷಿ ಆವಿಷ್ಕಾರ ಹೇಗಾಯಿತು? ಆವಿಷ್ಕಾರದ ಕೀರ್ತಿ ಯಾರಿಗೆ ಸಲ್ಲುತ್ತದೆ? ಕೃಷಿಗೆ ಮಹಿಳೆಯ ಕೊಡುಗೆ ಏನು? ಕೃಷಿಯ ಆರಂಭಿಕ ಹಂತದಲ್ಲಿ ಮಹಿಳೆಯ ಸ್ಥಾನಮಾನಗಳು ಏನಾಗಿದ್ದವು? ಕೃಷಿಯಲ್ಲಿ ಪುರುಷನ ಪ್ರವೇಶವಾದ ನಂತರದಲ್ಲಿ ಆದ ಬದಲಾವಣೆಗಳೇನು? ಮತ್ತು ಆ ಬದಲಾವಣೆಗಳು ಮಹಿಳೆಯ ಸ್ಥಾನಮಾನಗಳ ಮೇಲೆ ಯಾವ ರೀತಿಯ ಪರಿಣಾಮಗಳನ್ನು ಬೀರಿದವು ಎಂಬ ಇತ್ಯಾದಿ ಮೂಲಭೂತ ವಿವರಗಳನ್ನು ಚರ್ಚಿಸಲಾಗಿದೆ. ಅಲ್ಲದೆ ಈ ಅಧ್ಯಯನದಲ್ಲಿ ಭೂಮಿ ಮತ್ತು ಹೆಣ್ಣಿನ ಸಮೀಕರಣಕ್ಕೆ ಸಂಬಂಧಿಸಿದಂತೆ, ಭೂಮಿ ಮತ್ತು ಹೆಣ್ಣನ್ನು ಹೇಗೆ ಸಮೀಕರಿಸಿಕೊಂಡು ಬರಲಾಗಿದೆ? ಭೂಮಿಯನ್ನು ಹೆಣ್ಣಿನ ರೂಪದಲ್ಲಿ ಪೂಜಿಸುವ, ಆರಾಧಿಸುವ,

ಗೌರವಿಸುವ ಕ್ರಮ ಮತ್ತು ಹೆಣ್ಣಿನ ಗುಣ ಸ್ವಭಾವಗಳಿಗೆ ಭೂಮಿಯ ಹೋಲಿಕೆ ಕೊಡುವ ಇಲ್ಲವೆ ಹೆಣ್ಣನ್ನು ಭೂಮಿಯಷ್ಟೇ ಶ್ರೇಷ್ಠ ಎಂದು ವೈಭವೀಕರಿಸುವುದರ ಹಿಂದಿರುವ ತಾತ್ವಿಕತೆ ಏನು ಎಂಬುದನ್ನು ಚರ್ಚಿಸಲಾಗಿದೆ. ನಂತರದಲ್ಲಿ ಕೃಷಿ ಸಂಬಂಧಿ ನಂಬಿಕೆ-ಆಚರಣೆಗಳು ಮತ್ತು ಮಹಿಳೆ ಎಂಬ ವಿಷಯವನ್ನು ಕುರಿತು ಚರ್ಚಿಸಲಾಗಿದೆ. ಇಲ್ಲಿ ಕೃಷಿಗೆ ಸಂಬಂಧಿಸಿದ ಆಚರಣೆಗಳ ವಿವರ, ಅವು ಆಚರಿಸಲ್ಪಡುವ ರೀತಿ, ಕೃಷಿಯ ಸಾಂಸ್ಕೃತಿಕ ಆಚರಣೆ, ನಂಬಿಕೆಗಳು ಏನು ಹೇಳುತ್ತವೆ? ಅವುಗಳು ರೂಪುಗೊಳ್ಳುವಿಕೆಯ ಹಿಂದಿರುವ ಆಶಯವೇನಾಗಿತ್ತು? ಮತ್ತು ಬಹುಮುಖ್ಯವಾಗಿ ಆ ಆಚರಣೆಗಳಲ್ಲಿ ಮಹಿಳೆಯ ಪಾಲುದಾರಿಕೆ ಯಾವ ರೀತಿಯದು? ಎಂಬುದನ್ನು ಗಮನಿಸುತ್ತಲೇ ಕೃಷಿ ಸಂಸ್ಕೃತಿಯಲ್ಲಿ ಮಹಿಳೆಯನ್ನು ಹೇಗೆ ಕಾಣಲಾಗಿದೆ? ಎಂಬುದನ್ನು, ಕೃಷಿ ಸಮುದಾಯದ ನಂಬಿಕೆ-ಆಚರಣೆಗಳು ಮೂಲಕ ನೋಡುವ ಪ್ರಯತ್ನ ಮಾಡಲಾಗಿದೆ. ಅದೇ ರೀತಿ ಕೃಷಿ ಸಂಬಂಧಿ ಜನಪದ ಸಾಹಿತ್ಯ ಮತ್ತು ಮಹಿಳೆ ಎಂಬ ಅಧ್ಯಾಯದಲ್ಲಿ, ಸಾಹಿತ್ಯ ಎಂದರೇನು? ಸಾಹಿತ್ಯಕ್ಕೂ ಜನಜೀವನಕ್ಕೂ ಯಾವ ಬಗೆಯ ಸಂಬಂಧ? ಕೃಷಿ ಜನಪದ ಸಾಹಿತ್ಯ ಎಂದು ಯಾವುದನ್ನು ಗುರುತಿಸಬೇಕು? ಅದರ ಸ್ವರೂಪ ಯಾವ ಬಗೆಯದು? ಕೃಷಿಯಲ್ಲಿ ಮಹಿಳೆಯ ಪಾಲುದಾರಿಕೆಯನ್ನು ಕುರಿತಂತೆ ಮೌಖಿಕ ಸಾಹಿತ್ಯದಲ್ಲಿ ಏನು ಹೇಳಲಾಗಿದೆ? ಎಂಬುದನ್ನು ಚರ್ಚಿಸುತ್ತಾ ಒಟ್ಟಾರೆ ಕೃಷಿ ಸಂಬಂಧಿ ಜನಪದ ಸಾಹಿತ್ಯದಲ್ಲಿ ಕೃಷಿ ಮಹಿಳೆಯ ಬದುಕು ಹೇಗೆ ಚಿತ್ರಣಗೊಂಡಿದೆ ಎಂಬುದನ್ನು ಕಟ್ಟಿಕೊಡಲಾಗಿದೆ.

ಅಧ್ಯಯನದ ಕೊನೆಯಲ್ಲಿ 'ಕೃಷಿ, ಮಹಿಳೆ ಮತ್ತು ಸಮಕಾಲೀನತೆ' ಕುರಿತು ಚರ್ಚಿಸಲಾಗಿದ್ದು, ಇದರಲ್ಲಿ ಈ ಹೊತ್ತಿನ ದಿನಗಳಲ್ಲಿ ಕೃಷಿ ವಲಯದಲ್ಲಿ ಮಹಿಳೆಯ ಪಾಲುದಾರಿಕೆಯ ಸ್ವರೂಪ ಯಾವ ರೀತಿಯದಾಗಿದೆ? ಕೃಷಿಯ ಯಾವ ಕೆಲಸಗಳಲ್ಲಿ ಅವಳ ಪಾಲುದಾರಿಕೆ ಇದೆ? ಮತ್ತು ಕೃಷಿ ವಲಯದಲ್ಲಿ ಎಲ್ಲಿ ಅವಳ ಪಾಲುದಾರಿಕೆ ಇಲ್ಲ? ಕೃಷಿಯ ಕೌಟುಂಬಿಕ ಹಾಗೂ ಸಾಮಾಜಿಕ ವಲಯದಲ್ಲಿ ಕೃಷಿ ಮಹಿಳೆಯ ಸ್ಥಾನಮಾನ ಯಾವ ರೀತಿಯದು ಎಂಬುದನ್ನು ಕಂಡುಕೊಳ್ಳಲಾಗಿದೆ. ಅಲ್ಲದೆ, ಸಮಕಾಲೀನ ಸಂದರ್ಭದ ಕೃಷಿಯಲ್ಲಿ ಆಧುನಿಕ ಯಂತ್ರೋಪಕರಣಗಳ ಬಳಕೆಯಿಂದ ಯಾವ ರೀತಿಯ ಪರಿಣಾಮ ಬೀರಿದೆ ಎಂಬುದನ್ನು 'ಆಧುನಿಕತೆಯಿಂದ ಕೃಷಿ ಮತ್ತು ಕೃಷಿ ಅವಲಂಬಿತ ಮಹಿಳಾ ದುಡಿಮೆಗಾರರ ಮೇಲಾದ ಪರಿಣಾಮ' ಹಾಗೂ 'ಆಧುನಿಕತೆಯಿಂದ ಪಾರಂಪರಿಕ ಕೃಷಿ ಜ್ಞಾನ ಮತ್ತು ಕೃಷಿಯ ಸಾಂಸ್ಕೃತಿಕ ಪರಿಸರದ ಮೇಲಾದ ಪರಿಣಾಮ' ಎಂಬ ಈ ಎರಡು ನೆಲೆಯಲ್ಲಿ ಚರ್ಚೆಯನ್ನು ಮಾಡಲಾಗಿದೆ. ಪ್ರಬಂಧದ ಕೊನೆಯ ಭಾಗ ಸಮಾರೋಪದಲ್ಲಿ, ಪ್ರಸ್ತುತ ಅಧ್ಯಯನವನ್ನು ಕೈಗೊಂಡಿರುವ ಹಿನ್ನೆಲೆ ಮತ್ತು ಅಧ್ಯಯನದ ಸ್ವರೂಪವನ್ನು ಕುರಿತು ಸಂಕ್ಷಿಪ್ತವಾಗಿ ಹೇಳಲಾಗಿದೆ. ಅಲ್ಲದೆ ಮುಖ್ಯವಾಗಿ ಈ ಅಧ್ಯಾಯದಲ್ಲಿ ಒಟ್ಟು ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಹಾಗೂ ಕೆಲವು ಸಲಹೆಗಳನ್ನು ಕೊಡಲಾಗಿದೆ.

## ಅಧ್ಯಯನದ ಫಲಿತಗಳು

* ಕೃಷಿಯು ಕ್ರಿ.ಪೂ. ೬೦೦೦ದ ಸುತ್ತಲಿನಲ್ಲಿಯೇ ಅಂದರೆ ನವಶಿಲಾಯುಗದ ಕಾಲಕ್ಕೆ ಸ್ತ್ರೀಯರಿಂದ ಆವಿಷ್ಕರಿಸಲ್ಪಟ್ಟಿದ್ದು, ನವಶಿಲಾಯುಗದ ಜನರಿಗೆ ಕೃಷಿಯ ಬಗೆಗೆ ತಿಳುವಳಿಕೆ ಇತ್ತು ಎನ್ನುವುದಕ್ಕೆ ಇತಿಹಾಸದಲ್ಲಿ ಹಲವು ದಾಖಲೆಗಳು ದೊರೆಯುತ್ತವೆ ಮತ್ತು ಈಗಾಗಲೇ ನಡೆದ ಅಧ್ಯಯನಗಳು ಇದರ ಮೇಲೆ ಬೆಳಕು ಚಲ್ಲಿವೆ.

* ಕೃಷಿ ಸ್ತ್ರೀಯರಿಂದಲೇ ಆವಿಷ್ಕರಿಸಲ್ಪಟ್ಟಿತು ಎಂಬುದಕ್ಕೆ ಕೆಲವು ದಂತಕಥೆಗಳು ಸಿಗುತ್ತವೆ. ಜೊತೆಗೆ ಈ ವಿಚಾರವನ್ನು ಒಪ್ಪಿದ ಅನೇಕ ಮಾನವಶಾಸ್ತ್ರಜ್ಞರ ಅಭಿಪ್ರಾಯಗಳು ಕಂಡು ಬರುತ್ತವೆ.

* ಕೃಷಿಯ ಆವಿಷ್ಕಾರವೇ ನಾಗರೀಕತೆಯ ಬುನಾದಿ ಆಗಿದ್ದರಿಂದ, ಕೃಷಿಯ ಆವಿಷ್ಕಾರಕಳು ಮಹಿಳೆಯೇ ಆಗಿದ್ದರಿಂದ ಮನುಷ್ಯ ನಾಗರೀಕ ಹಂತದತ್ತ ಹೆಜ್ಜೆಯಿಡುವುದಕ್ಕೆ ಮುಖ್ಯ ಕಾರಣ ಮಹಿಳೆಯೇ ಆಗಿದ್ದಾಳೆ ಎಂದು ಊಹಿಸಬಹುದು.

* ಕೃಷಿಯ ಆರಂಭಿಕ ಹಂತದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಆಗ ತಾಯಿಯ ಮೂಲಕವೇ ವಂಶವನ್ನು ಗುರುತಿಸಲಾಗುತ್ತಿತ್ತು. ಗಂಡು ಬಂದು ಹೋಗುವ ಅತಿಥಿಯಾಗಿದ್ದರಿಂದ ಹುಟ್ಟುವ ಮಗುವಿನ ಲಾಲನೆ-ಪಾಲನೆ ಜವಾಬ್ದಾರಿ ಕೂಡಾ ಮಹಿಳೆಯದ್ದೇ ಆಗಿತ್ತು. ಅಲ್ಲದೆ ಮಹಿಳೆ ಗರ್ಭಧರಿಸಿ ಮಗುವಿಗೆ ಜನ್ಮ ನೀಡುವ ನಿಸರ್ಗದತ್ತ ಜೈವಿಕ ಕ್ರಿಯೆಯನ್ನು ಸ್ತ್ರೀಯಲ್ಲಿದ್ದ ಅದ್ಭುತ ಶಕ್ತಿಯೆಂದು ಭಾವಿಸಿದ್ದರಿಂದ ಆಕೆಯ ಬಗೆಗೆ ಪುರುಷರಿಗೆ ಭಯ, ಭಕ್ತಿಯ ಭಾವನೆಗಳಿದ್ದವು.

* ಕೃಷಿಯ ಆರಂಭಿಕ ಹಂತದಲ್ಲಿ ಸ್ತ್ರೀಗೆ ಕೃಷಿಯ ಮೇಲೆ ಅಂದರೆ ಉತ್ಪಾದನಾ ಪ್ರಕ್ರಿಯೆಯ ಮೇಲೆ ಹಿಡಿತವಿತ್ತು.

* ಕೃಷಿಯಲ್ಲಿ ಎತ್ತು ಹಾಗೂ ನೇಗಿಲಿನ ಬಳಕೆಯ ನಂತರ ವ್ಯವಸಾಯ ಸ್ತ್ರೀಯರ ಪರಿಮಿತಿಯಿಂದ ದೂರ ಉಳಿಯಿತೆಂದು ತಿಳಿಯಲಾಗಿದೆ. ಆರಂಭದಲ್ಲಿ ವೇದಗಳ ಕಾಲದಲ್ಲಿ ನೇಗಿಲಿನ ಬಳಕೆ ಕಂಡು ಬರುವುದರಿಂದ ವೇದಗಳ ಕಾಲದಿಂದಲೇ ಕೃಷಿ ಪುರುಷನ ಕೈವಶವಾಯಿತೆಂದು ಅಥವಾ ವೇದಪೂರ್ವದ ಕಾಲದಲ್ಲಿ ಕೃಷಿಯಲ್ಲಿ ಮಹಿಳೆ ಪ್ರಧಾನ ಪಾತ್ರ ವಹಿಸಿದ್ದಳೆಂದು ತಿಳಿದು ಬರುತ್ತದೆ.

* ಯಾವಾಗ ವರ್ಗ ಸಮಾಜ ನಿರ್ಮಾಣವಾಗಿ ಖಾಸಗಿ ಆಸ್ತಿಯ ಹಿನ್ನೆಲೆಯಲ್ಲಿ ಕುಟುಂಬಗಳು ಅಸ್ತಿತ್ವಕ್ಕೆ ಬಂದವೋ ಆಗ ಮಹಿಳೆಗಿದ್ದ ಅಧಿಕಾರಿಯುತ ಸ್ಥಾನಮಾನಗಳೆಲ್ಲ ಪುರುಷನ ವಶವಾದವು.

* ಆರಂಭಿಕ ಕೃಷಿ ಸಮುದಾಯದಲ್ಲಿ ಸಾಂಸ್ಕೃತಿಕವಾಗಿ ಮಹಿಳೆಗೆ ಉನ್ನತ ಸ್ಥಾನಮಾನಗಳಿದ್ದವು. ಹೆಣ್ಣು ಮತ್ತು ಭೂಮಿಯ ನಡುವೆ ಹಲವು ಹೋಲಿಕೆಗಳಿವೆ ಹಾಗೂ ಭೂಮಿ ಮತ್ತು ಹೆಣ್ಣು

ಇವೆರಡು ಫಲ ನೀಡುವಂತವುಗಳಾಗಿವೆ. ಆ ಕಾರಣಕ್ಕಾಗಿಯೇ ಭೂಮಿ ಮತ್ತು ಹೆಣ್ಣನ್ನು ಬಹು ಹಿಂದಿನಿಂದಲೂ ಸಮೀಕರಿಸಿಕೊಂಡು ಬರಲಾಗಿದೆ.

* ಆದಿಮ ಮನುಷ್ಯರು ಹೆಣ್ಣಿನಲ್ಲಿರುವ ಜೈವಿಕ ಶಕ್ತಿಯೇ ಪ್ರಕೃತಿಯ ಪ್ರಕ್ರಿಯೆಗಳಿಗೂ ಕಾರಣ ಎಂದು ಭಾವಿಸಿರುವುದರಿಂದ ಹೆಣ್ಣಿನ ಸ್ವರೂಪದಲ್ಲಿ ದೈವವನ್ನು ಆರಾಧಿಸುವ ರೂಢಿ ಬೆಳೆದು ಬಂದಿತು. ಆ ಕಾರಣಕ್ಕಾಗಿಯೇ ಕೃಷಿಕರು ದೈವ ರೂಪದಲ್ಲಿ ಆರಾಧಿಸುವ ಬಹುಪಾಲು ದೈವಗಳು ಹೆಣ್ಣು ದೈವಗಳೇ ಆಗಿವೆ.

* ಮಳೆ ಬೀಳುವ, ಬೆಳೆ ಬೆಳೆಯುವ, ಬಂದ ಬೆಳೆಯನ್ನು ಸಂರಕ್ಷಿಸುವ, ತಮ್ಮ ದನಕರುಗಳನ್ನು ರೋಗ-ರುಜಿನಗಳಿಂದ ಕಾಪಾಡುವ ಶಕ್ತಿಗೂ, ಹೆಣ್ಣಿನ ಸ್ವರೂಪವನ್ನು ಸಾಂಕೇತಿಸಿಕೊಂಡು, ಇಲ್ಲವೆ ಸ್ವತಃ ಹೆಣ್ಣನ್ನು ಆಚರಣೆಯ ಭಾಗವಾಗಿಸಿಕೊಂಡು ಬರಲಾಗಿದೆ.

* ಕೃಷಿ ಸಮುದಾಯದ ಕೆಲವು ನಂಬಿಕೆ-ಆಚರಣೆಗಳನ್ನು ಗಮನಿಸಿದಾಗ, ಕೃಷಿ ಸಮುದಾಯದ ಕೆಲವು ಆಚರಣೆಗಳಲ್ಲಿ ಹೆಣ್ಣಿಗೆ ಹೆಚ್ಚು ಪ್ರಾಮುಖ್ಯತೆ ನೀಡಿದಂತೆ ಕಂಡು ಬರುತ್ತದೆ. ಆದರೆ ಬಹುಪಾಲು ಆಚರಣೆಗಳಲ್ಲಿ ಮುತ್ತೈದೆಯರಿಗೆ ಮಾತ್ರ ಪ್ರಾತಿನಿಧ್ಯವಿರುವುದು ಕಂಡು ಬರುತ್ತದೆ. ಇದರಿಂದ ಕೃಷಿ ಸಮುದಾಯದಲ್ಲಿ ಕೂಡಾ ಬಂಜೆಯನ್ನು ಕನಿಷ್ಠವಾಗಿಯೂ, ಮುತ್ತೈದೆಯನ್ನು ಶ್ರೇಷ್ಠವಾಗಿಯೂ ಕಂಡಿರುವುದು ತಿಳಿದು ಬರುತ್ತದೆ.

* ಆದಿಮ ಸಮಾಜದಲ್ಲಿ ಮೈಥುನ ಮತ್ತು ಅದರಿಂದುಂಟಾಗುವ ಪ್ರಜೋತ್ಪತ್ತಿಗೂ ಹಾಗೂ ಕೃಷಿಯಲ್ಲಿನ ಬೀಜೋತ್ಪತ್ತಿ ಅಥವಾ ಸಸ್ಯಗಳ ಬೆಳವಣಿಗೆಗೂ ಸಾಮ್ಯತೆ ಇದೆ ಎಂದು ಭಾವಿಸಿದ್ದರಿಂದ ಮನುಷ್ಯರ ಲೈಂಗಿಕತೆ ಪರೋಕ್ಷವಾಗಿ ಸಸ್ಯಗಳ ಬೆಳವಣಿಗೆಗೆ ಉತ್ತೇಜಿಸುತ್ತಿದೆ ಎಂಬ ಕಲ್ಪನೆ ಇದ್ದುದರಿಂದ ಆ ಬಗೆಯ ಕೆಲವು ಆಚರಣೆಗಳು ನಡೆದುಕೊಂಡು ಬಂದಿವೆ.

* ಆದಿಮ ಕೃಷಿಕ ಸಮಾಜದಲ್ಲಿ ಪ್ರಕೃತಿಯನ್ನು ಹೆಣ್ಣು ರೂಪದಲ್ಲಿ ಆರಾಧಿಸುತ್ತಿದ್ದ ಮತ್ತು ಹೆಣ್ಣನ್ನು ದೈವವಾಗಿಸಿಕೊಂಡಿದ್ದ ಮನುಜರು ಕ್ರಮೇಣ ವಿವಿಧ ನಮೂನೆಯ ಪುರುಷ ದೈವಗಳನ್ನು ಆರಾಧಿಸಿಕೊಂಡು ಬಂದಿರುವರು.

* 'ಆಣೆಕಲ್ಲಾಡಿದರೆ ಮಳೆ ಬರೋಲ್ಲ' ಎನ್ನುವಂತಹ ಕೆಲವು ನಂಬಿಕೆಗಳು ಸ್ತ್ರೀಯರ ನಡುವಳಿಕೆಯ ಮೇಲೆ ನಿಯಂತ್ರಣವನ್ನು ಹೇರಿದಂತೆ ಕಂಡು ಬರುತ್ತದೆ. ಹೀಗೆ ಒಂದೆಡೆ ಅದ್ಭುತ ಶಕ್ತಿಯಂತೆ, ದೈವದಂತೆ ಕಂಡ ಹೆಣ್ಣನ್ನು ಮತ್ತೊಂದೆಡೆ ನಿಯಂತ್ರಣಕ್ಕೊಳಪಡಿಸಿದಂತೆ ಕಾಣುವ ಈ ವೈರುಧ್ಯಗಳಿಂದ ಕೃಷಿ ಸಂಸ್ಕೃತಿಯಲ್ಲಿ ಹೆಣ್ಣಿನ ಸ್ಥಾನಮಾನಗಳು ಎಲ್ಲಾ ಕಾಲಕ್ಕೂ ಒಂದೇ ಬಗೆಯಾಗಿರಲಿಲ್ಲ ಎಂಬುವುದು ತಿಳಿದು ಬರುತ್ತದೆ.

* ಬಿತ್ತಿ ಬೆಳೆಯುವ ಭೂಮಿಯನ್ನು, ತಾವು ಪೂಜಿಸುವ ಗಿಡ-ಮರಗಳನ್ನು, ಕೆಲವು ಕೃಷಿ ಉಪಕರಣಗಳನ್ನು, ಬೆಳೆದ ಕೆಲವು ಬೆಳೆಗಳನ್ನು ಹೆಣ್ಣು ರೂಪದಲ್ಲಿಯೇ ಕಂಡುಕೊಂಡು ಬಂದಿದ್ದಾರೆ. ಮತ್ತವುಗಳ ಬಗೆಗೆ ಗೌರವದ ಭಾವನೆಯನ್ನು ಹೊಂದಿದ್ದಾರೆ.

* ಕೃಷಿಕರು ತಾವು ಬಿತ್ತಿ ಬೆಳೆಯುವ ಭೂಮಿಯ ಬಗೆಗೆ, ತಮ್ಮ ದುಡಿಮೆಗೆ ನೆರವಾಗುವ ಪ್ರಾಣಿಗಳ ಬಗೆಗೆ, ಬೆಳೆ ಬೆಳೆಯವುದಕ್ಕೆ ಬೇಕಾದ ಮಳೆಯ ಬಗೆಗೆ ಕೃತಜ್ಞತಾ ಭಾವನೆ ಹೊಂದಿದ್ದು, ಅವುಗಳಿಗೆ ಕೃತಜ್ಞತೆಯನ್ನು ಸಲ್ಲಿಸುವುದಕ್ಕಾಗಿಯೇ ಕೆಲವು ಆಚರಣೆಗಳು ರೂಢಿಯಲ್ಲಿವೆ.

* ಕೃಷಿ ಆಚರಣೆಗಳಲ್ಲಿ ಮಹಿಳೆ ಪ್ರತ್ಯಕ್ಷವಾಗಿ ಇಲ್ಲವೆ ಪರೋಕ್ಷವಾಗಿ ತೊಡಗಿಕೊಂಡು ಬಂದಿದ್ದಾಳೆ. ಕೃಷಿಯ ಆರಂಭಿಕ ಹಂತದಲ್ಲಿ ಅಥವಾ ಆದಿಮ ಸಮಾಜದಲ್ಲಿ ಹುಟ್ಟಿಕೊಂಡ ಆಚರಣೆಗಳಲ್ಲಿ ಮಹಿಳೆಗೆ ಹೆಚ್ಚು ಪ್ರಾಧಾನ್ಯತೆ ಇತ್ತು. ಈಗಲೂ ಆಚರಣೆಗಳಲ್ಲಿ ಮಹಿಳೆಯ ಪಾಲುದಾರಿಕೆ ಕಂಡು ಬಂದರೂ ಕೆಲವು ಇತ್ತೀಚಿನ ಕೃಷಿ ಆಚರಣೆಗಳಲ್ಲಿ ಮಹಿಳೆಯ ಪಾಲುದಾರಿಕೆಯಲ್ಲಿ ವಿಶೇಷತೆಗಳೇನು ಕಂಡು ಬರುವುದಿಲ್ಲ.

* ಸಾಮಾನ್ಯವಾಗಿ ಭೂಮಿಗೆ ಸಂಬಂಧಿಸಿದಂತೆ, ಮಳೆಗೆ ಸಂಬಂಧಿಸಿದಂತೆ, ಬೆಳೆಗೆ ಸಂಬಂಧಿಸಿದಂತೆ, ರೈತನ ಕೆಲಸ ಕಾರ್ಯಗಳಿಗೆ ಸಂಬಂಧಿಸಿದಂತೆ ಕೃಷಿಯಲ್ಲಿ ಬಳಕೆಯಾಗುವ ಪ್ರಾಣಿಗಳಿಗೆ ಸಂಬಂಧಿಸಿದಂತೆ, ಕೃಷಿ ಮಹಿಳೆಗೆ ಸಂಬಂಧಿಸಿದಂತೆ, ಕೃಷಿಕರ ದಾಂಪತ್ಯ ಬದುಕನ್ನು ಕುರಿತಂತೆ ಕೃಷಿ ಸಾಹಿತ್ಯವು ರಚನೆಗೊಂಡಿರುವುದು.

* ಮಹಿಳೆ ಪುರುಷನೊಂದಿಗೆ ಹೊಲದ ಕೆಲಸಗಳಲ್ಲಿ ಭಾಗಿಯಾಗಿದ್ದಾಗಲೂ ಕೂಡಾ ಕೌಟುಂಬಿಕವಾಗಿ ಮತ್ತು ಸಾಮಾಜಿಕವಾಗಿ ಅವಳನ್ನು ಎರಡನೇ ದರ್ಜೆಯಾಗಿಯೇ ಕಂಡುಕೊಂಡು ಬಂದಿರುವುದು ಕೃಷಿ ಜನಪದ ಸಾಹಿತ್ಯದಲ್ಲಿ ವ್ಯಕ್ತವಾದ ಕೆಲವು ವಿಚಾರಗಳಿಂದ ತಿಳಿದು ಬರುತ್ತದೆ.

* ಅಕ್ಕಡಿ ಬಿತ್ತುವ, ಹತ್ತಿ ಬಿಡಿಸುವ, ಕೋಳಿ ಆರಿಸುವ, ಹಕ್ಕಿ ಕಾಯುವ, ಗೋಧಿ ಕೀಳುವ, ಮೊಸರು ಕಡೆಯುವ, ಕುಟ್ಟುವ, ಬೀಸುವ, ರೊಟ್ಟಿ ಸುಡುವಂತಹ ಕೆಲಸಗಳು ಮಹಿಳೆಯಿಂದ ಮಾಡಲ್ಪಡುತ್ತವೆ ಎಂಬ ವಿವರಗಳು ಜನಪದ ಸಾಹಿತ್ಯದಲ್ಲಿ ದೊರೆಯುತ್ತವೆ.

* ಸಂಗ್ರಹಿತ ಕೃಷಿ ಜನಪದ ಸಾಹಿತ್ಯವನ್ನು ಗಮನಿಸಿದಾಗ ಹಾಡು ಮತ್ತು ಗಾದೆಯ ರೂಪದಲ್ಲಿ ದೊಡ್ಡ ಪ್ರಮಾಣದ ಸಾಹಿತ್ಯ ದೊರೆಯುವುದು. ಹಾಡಿನ ರೂಪದ ಸಾಹಿತ್ಯದಲ್ಲಿ ಸ್ವತಃ ಮಹಿಳೆಯು ಹೇಳಿಕೊಂಡಿರುವಂತಹ ಸಾಹಿತ್ಯ ವಿಪುಲವಾಗಿ ದೊರೆಯುತ್ತದೆ.

* ಕೃಷಿ ಜನಪದ ಸಾಹಿತ್ಯದಲ್ಲಿ ಮಹಿಳೆಯ ಅಭಿವ್ಯಕ್ತಿಯಂತೆ ಕಂಡುಬರುವ ಸಾಹಿತ್ಯದಲ್ಲಿ ಮಹಿಳೆ ತನಗಿಂತಲೂ ತನ್ನ ಗಂಡ, ಮಗ, ಅಣ್ಣ-ತಮ್ಮಂದಿರ ಮತ್ತು ತವರಿನವರ ಬಗೆಗಿನ ಕಾಳಜಿಯಿಂದ ಅವರಿಗೆ ಒಳಿತನ್ನು ಬಯಸಿ ವ್ಯಕ್ತಪಡಿಸಿದ ವಿಚಾರಗಳೇ ಅಧಿಕವಾಗಿ ಕಂಡು ಬರುತ್ತವೆ.

* ಭೂಮಿ, ಕೃಷಿಯ ಉಪಕರಣಗಳು, ಕೃಷಿಯಲ್ಲಿ ಬಳಕೆಯಾಗುವ ಪ್ರಾಣಿಗಳು ಪುರುಷರ ಹೆಸರಿನಿಂದಲೇ ಗುರುತಿಸುತ್ತಾ ಬಂದಿವೆ ಎನ್ನುವುದಕ್ಕೆ ಮೌಖಿಕ ಆಕರಗಳಲ್ಲಿ ಉಲ್ಲೇಖಗಳಿವೆ. ಅವುಗಳೆಲ್ಲ ಪುರುಷನ ಸೊತ್ತು ಎನ್ನುವ ಮನೋಭಾವ ಹಿಂದಿನಿಂದಲೂ ಬೆಳೆದುಕೊಂಡು ಬಂದಿದೆ ಎನ್ನುವುದು ತಿಳಿದು ಬರುತ್ತದೆ.

* ಕೃಷಿ ಸಮುದಾಯದ ಜನರಿಗೆ ಗಂಡು ಶ್ರೇಷ್ಠ ಎಂಬ ಕಲ್ಪನೆ ಇರುವುದು. ಗಂಡು ಮಗುವಿಗಾಗಿ ಅಪೇಕ್ಷಿಸಿದಂತೆ, ಹಂಬಲಿಸಿದಂತೆ ಹೆಣ್ಣು ಮಗುವಿಗಾಗಿ ಹಂಬಲಿಸಿರುವ ನಿದರ್ಶನಗಳು ಕೃಷಿ ಜನಪದ ಸಾಹಿತ್ಯದಲ್ಲಿ ಕಂಡು ಬರುವುದಿಲ್ಲ.

* ಕೃಷಿ ಸಮುದಾಯವು ಹೆಣ್ಣಿನ ಫಲವಂತಿಕೆ ಮತ್ತು ತಾಯ್ತನಕ್ಕೆ ಹೆಚ್ಚು ಮಾನ್ಯತೆ ನೀಡಿರುವುದನ್ನು ಕಾಣುತ್ತೇವೆ. ಫಲಕೊಡದ ಮಣ್ಣು ಮತ್ತು ಹೆಣ್ಣನ್ನು ಅನುಪಯುಕ್ತ ಎಂದು ಭಾವಿಸಲಾಗಿದೆ.

* ಕೃಷಿ ಜನಪದ ಸಾಹಿತ್ಯದಲ್ಲಿ ಕೃಷಿಯಲ್ಲಿನ ಮಹಿಳಾ ಪಾಲುದಾರಿಕೆಯನ್ನು ಕುರಿತಂತೆ ಪ್ರಸ್ತಾಪಗಳಿದ್ದರೂ, ಸಾಹಿತ್ಯದಲ್ಲಿ ಪುರುಷನಿಗೆ ಕುರಿತಂತೆ ಹೇಳಿರುವ ಪ್ರಮಾಣವೇ ಅಧಿಕವಾಗಿರುವುದು ಕಂಡು ಬರುತ್ತದೆ ಅಥವಾ ಪುರುಷನಿಗೆ ಸಂಬಂಧಿಸಿದ ವಿಷಯಗಳನ್ನು ಒಳಗೊಂಡ ಸಾಹಿತ್ಯವೇ ಅಧಿಕವಾಗಿ ದೊರೆಯುತ್ತದೆ.

* ಒಟ್ಟಿನಲ್ಲಿ ಸಾಹಿತ್ಯದಲ್ಲಿ ಅನಾವರಣಗೊಂಡ ಕೃಷಿ ಮಹಿಳೆಯ ಬದುಕು ಪುರುಷನಿಗೆ ಅಧೀನವಾಗಿರುವಂತಹದ್ದು ಮತ್ತು ವ್ಯವಸ್ಥೆಗೆ ಹೊಂದಿಕೊಂಡು ನಡೆಯುವಂತಹದ್ದಾಗಿದೆ.

* ಕೃಷಿ ಅವಲಂಬಿಸಿ ಜೀವನ ನಡೆಸುವವರಲ್ಲಿ ಭೂರಹಿತ ಕೃಷಿ ಮಹಿಳೆಯರು ಮತ್ತು ಭೂಹಿಡುವಳಿದಾರ (ಭೂ ಒಡೆತನ ಹೊಂದಿದ) ಕುಟುಂಬದ ಮಹಿಳೆಯರು ಕಂಡು ಬರುತ್ತಾರೆ.

* ಭೂಹಿಡುವಳಿ ಹೊಂದಿದ ಕುಟುಂಬದ ಮಹಿಳೆಯರು ಕೃಷಿ ಸಾಗುವಳಿದಾರರೂ ಆಗಿರುತ್ತಾರೆ. ಆದರೆ ದೊಡ್ಡ ಭೂಹಿಡುವಳಿ ಹೊಂದಿದ ಕುಟುಂಬದ ಮಹಿಳೆಯರು ಸಾಮಾನ್ಯವಾಗಿ ಸಾಗುವಳಿಯಲ್ಲಿ ತೊಡಗಿರುವುದಿಲ್ಲ.

* ಭೂಹಿಡುವಳಿ ಹೊಂದಿದ ಕುಟುಂಬದ ಮಹಿಳೆಯರಲ್ಲಿ ಎಲ್ಲರಿಗೂ ಭೂ ಒಡೆತನವಿರುವುದಿಲ್ಲ. ಕೆಲವು ಮಹಿಳೆಯರ ಹೆಸರಿನಲ್ಲಿ ಮಾತ್ರ ಭೂಮಿ ಇರುತ್ತದೆ. ಬಹುಪಾಲು ಕೃಷಿ ಭೂಮಿಯ ಒಡೆತನ ಮನೆಯ ಮುಖ್ಯಸ್ಥನದು ಅಥವಾ ಪುರುಷನದೇ ಆಗಿರುತ್ತದೆ. ಅಂತೆಯೇ ಭೂ ಒಡೆತನ ಹೊಂದಿದವರಲ್ಲಿ ಮಹಿಳೆಯರಿಗಿಂತ ಪುರುಷರ ಸಂಖ್ಯೆಯೇ ಅಧಿಕವಾಗಿರುತ್ತದೆ.

* ಮಹಿಳೆಯರ ಹೆಸರಿನಲ್ಲಿ ಭೂಮಿ ಇದ್ದಾಗಲೂ ಅದು ಪುರುಷ ಹಿತಾಸಕ್ತಿಗನುಗುಣವಾಗಿಯೇ ಬಳಕೆಯಾಗುತ್ತದೆ ಅಥವಾ ಅದರ ಮೇಲಿನ ನಿರ್ಣಾಯಕ ಹಕ್ಕು ಬಹುಪಾಲು ಪುರುಷನದೇ ಆಗಿರುತ್ತದೆ.

* ಕಾನೂನಿನಲ್ಲಿ ಮಹಿಳೆಗೆ ಆಸ್ತಿಯ ಹಕ್ಕನ್ನು ಕೊಡಮಾಡಿದಾಗಲೂ ಅದರ ವಾಸ್ತವ ಸ್ವರೂಪವೇ ಬೇರೆಯಾಗಿದೆ. ಈ ರೀತಿ ಕೊಡಮಾಡಲ್ಪಟ್ಟ ಆಸ್ತಿಯ ಹಕ್ಕಿನಿಂದ ಮಹಿಳೆಯರನ್ನು ಕೆಲವೊಮ್ಮೆ ಮತ್ತಷ್ಟು ಸಂಕಷ್ಟಕ್ಕೆ ಈಡು ಮಾಡಲಾಗುತ್ತಿದೆ.

* ಕೃಷಿ ಮಹಿಳೆ ಮನೆಯಲ್ಲಿ ಏನೆಲ್ಲ ಕೆಲಸ ಮಾಡಿದರೂ ಅದು ಕೆಲಸ ಅಥವಾ ದುಡಿಮೆ ಎಂದು ಪರಿಗಣಿಸಲ್ಪಡದೆ, ಅವು ಆಕೆ ಕುಟುಂಬಕ್ಕೆ ಮಾಡುವ ಸೇವೆ ಅಥವಾ ಕರ್ತವ್ಯಗಳಾಗಿ ಪರಿಗಣಿಸಲ್ಪಡುತ್ತವೆ.

* ಕೃಷಿಯ ಕೌಟುಂಬಿಕ ವಲಯದಲ್ಲಿ ಕೂಡಾ ಲಿಂಗತಾರತಮ್ಯದ ಎಳೆಗಳು ಕಾಣಿಸಿಕೊಳ್ಳುತ್ತವೆ.

* ಊಟದ ವಿಷಯದಲ್ಲಿ ಪುರುಷನಿಗೆ ಹೆಚ್ಚು ಪ್ರಾಶಸ್ತ್ಯ ಕೊಡಲಾಗುತ್ತದೆ. ಈ ವಿಷಯದಲ್ಲಿ ಮಹಿಳೆಯನ್ನು ಕಡೆಗಣಿಸಲಾಗಿದೆ. ಹಾಗಾಗಿ ಬಹುಪಾಲು ಗ್ರಾಮೀಣ ಮಹಿಳಾ ದುಡಿಮೆಗಾರರು ಅಪೌಷ್ಠಿಕ ಆಹಾರ ಸೇವನೆಯಿಂದಾಗಿ ರಕ್ತಹೀನತೆ ಮತ್ತು ಹಿಮೋಗ್ಲೋಬಿನ್ ಕೊರತೆಯಿಂದ ಬಳಲುತ್ತಿರುವರು.

* ಕೃಷಿ ಕ್ಷೇತ್ರದಲ್ಲಿ ಶ್ರಮವಹಿಸಿ ದುಡಿಯುತ್ತಿರುವ ಕೃಷಿ ಕಾರ್ಮಿಕರಲ್ಲಿ ಪುರುಷ ಕಾರ್ಮಿಕರಿಗಿಂತ ಮಹಿಳಾ ಕಾರ್ಮಿಕರ ಸಂಖ್ಯೆಯೇ ಅಧಿಕವಾಗಿರುವುದು.

* ಕೃಷಿ ಕೂಲಿ ಮಹಿಳೆಯರಿಗೆ ಕುಟುಂಬದಲ್ಲಿ ಸ್ವಾಯತ್ತತೆ ಇರುತ್ತದೆ. ಆದರೂ ಇವರು ದುಡಿಯುವ ದುಡಿಮೆಗೆ ಸಿಗುವ ಕೂಲಿ ಪುರುಷರಿಗೆ ಕೊಡುವ ಕೂಲಿಯು ದರಕ್ಕಿಂತ ಕಡಿಮೆಯಾಗಿರುತ್ತದೆ. ಬರುವ ಅಲ್ಪ ಕೂಲಿಯಲ್ಲಿ ಮನೆಯ ನಿರ್ವಹಣೆ ಕಷ್ಟವೆನಿಸುತ್ತದೆ.

* ಮನೆಯಲ್ಲಿ ಮತ್ತು ಹೊಲದಲ್ಲಿ ಎರಡೂ ಕಡೆ ದುಡಿದರೂ ಕೆಲವು ಮಹಿಳೆಯರು ಪುರುಷರಿಂದ ಮಾನಸಿಕ ಮತ್ತು ದೈಹಿಕ ಹಿಂಸೆಗೆ ಒಳಗಾಗುತ್ತಿರುವುದರಿಂದ ಅವರ ಬದುಕಿಗೆ ನೆಮ್ಮದಿಯೆಂಬುದು ಇರುವುದಿಲ್ಲ.

* ಕೆಲವು ಮಹಿಳೆಯರಿಗೆ ತಾವು ಸಂಪಾದಿಸಿದ ಕೂಲಿಯನ್ನು ಖರ್ಚು ಮಾಡುವ ಸ್ವಾಯತ್ತತೆ ಇರುವುದಿಲ್ಲ. ಹಾಗೆ ಸ್ವಾಯತ್ತತೆ ಇರುವ ಮಹಿಳೆಯರು ತಮ್ಮ ಸಂಪಾದನೆಯನ್ನು ಮನೆಯ ನಿರ್ವಹಣೆಗಾಗಿಯೇ ವ್ಯಯ ಮಾಡುವುದು ತಿಳಿದು ಬರುತ್ತದೆ.

* ನೇಗಿಲು ಕಟ್ಟುವಂತಹ, ಹೊಲ ಉಳುಮೆ ಮಾಡುವಂತಹ ಮತ್ತು ಭಾರವಾದ ವಸ್ತುಗಳನ್ನು ಎತ್ತಿ ಇಳಿಸುವಂತಹ ಬೆರಳೆಣಿಕೆಯ ಕೆಲಸಗಳನ್ನು ಹೊರತುಪಡಿಸಿದರೆ ಉಳಿದ ಬಹುಪಾಲು ಕೃಷಿ ದುಡಿಮೆಯಲ್ಲಿ ಮಹಿಳೆ ಸಕ್ರಿಯವಾಗಿ ತೊಡಗಿಕೊಂಡಿದ್ದಾಳೆ (ಕೆಲವಡೆ ನೇಗಿಲು ಕಟ್ಟುವಂತಹ, ಹೊಲ ಉಳುಮೆ ಮಾಡುವಂತಹ ಕೆಲಸಗಳನ್ನು ಸಹ ಮಾಡುತ್ತಿದ್ದಾಳೆ).

* ಕೃಷಿಯಲ್ಲಿ ಪುರುಷನಿಂದ ನಿರ್ವಹಿಸಲ್ಪಡುವ ಕೆಲಸಗಳನ್ನು ಕೂಡಾ ಅನಿವಾರ್ಯವಾದರೆ ಮಹಿಳೆಯೊಬ್ಬಳೇ ನಿಭಾಯಿಸಬಲ್ಲಳು ಎನ್ನುವ ಪ್ರಾಯೋಗಿಕ ಸಾಕ್ಷಿಗಳು ಕೂಡಾ ನಮಗೆ ದೊರೆಯುತ್ತವೆ.

* ಕೃಷಿ ಮಹಿಳೆಯ ಬಹುಪಾಲು ದುಡಿಮೆ ಅಪವೌಲ್ಯಕ್ಕೆ ಒಳಗಾಗುತ್ತಿದೆ ಮತ್ತು ಆಕೆಯ ದುಡಿಮೆಯನ್ನು ಅದೃಶ್ಯಗೊಳಿಸಲಾಗುತ್ತಿದೆ. ಆ ಕಾರಣಕ್ಕಾಗಿಯೇ ಕೃಷಿ ಮಹಿಳೆಗೆ ಸಿಗಬೇಕಾಗಿದ್ದ ಸಾಮಾಜಿಕ ಸ್ಥಾನಮಾನಗಳು ಸಿಗದೆ ಹೋಗಿವೆ.

* ಕೃಷಿಯ ಕೌಟುಂಬಿಕ ಆವರಣದಲ್ಲಿ ಪುರುಷನಿಗೆ ಪ್ರಾಶಸ್ತ್ಯವಿದ್ದಷ್ಟು ಮಹಿಳೆಗೆ ಇದ್ದಂತಿಲ್ಲ. ಅಲ್ಲದೆ ಕೌಟುಂಬಿಕ ವಲಯದಲ್ಲಿ ಮಹಿಳೆಗೆ ಹೆಚ್ಚು ಸ್ವಾಯತ್ತತೆ ಮತ್ತು ಸಮಾನತೆಗಳಿರುವುದಿಲ್ಲ.

* ಕೃಷಿ ದುಡಿಮೆಯಲ್ಲಿ ಮಹಿಳೆಯ ಪಾಲುದಾರಿಕೆ ಅಧಿಕವಾಗಿರುತ್ತದೆ. ಆದರೆ ಕೃಷಿ ಚಟುವಟಿಕೆಗಳಲ್ಲಿ ಕೆಲವು ಮಹತ್ವದ ನಿರ್ಣಯ ತೆಗೆದುಕೊಳ್ಳುವಲ್ಲಿ ಮಹಿಳೆಯ ಪಾತ್ರ ಗೌಣವಾಗುತ್ತದೆ. ಬೆಳೆ ಬೆಳೆಯುವವರೆಗಿನ ಚಟುವಟಿಕೆಯಲ್ಲಿ ಮಹಿಳೆಯು ಕಾಣಿಸಿಕೊಳ್ಳುತ್ತಾಳೆ. ನಂತರ ಬೆಳೆಯನ್ನು ಮಾರಾಟ ಮಾಡುವಲ್ಲಾಗಲಿ, ಉತ್ಪನ್ನದಿಂದ ಬಂದ ಹಣವನ್ನು ವ್ಯಯ ಮಾಡುವಲ್ಲಾಗಲಿ ಅವಳ ಪಾತ್ರ ಕಂಡು ಬರುವುದಿಲ್ಲ.

* ದುಬಾರಿ ಆಧುನಿಕ ಕೃಷಿ ವಿಧಾನದ ದೆಸೆಯಿಂದ ಮತ್ತು ಅಸಮರ್ಪಕ ಮಳೆಯಿಂದಾಗಿ ಬೆಳೆ ಬಾರದೆ, ಕೆಲವೊಮ್ಮೆ ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗದೆ ರೈತರು ಆತ್ಮಹತ್ಯೆಗೀಡಾಗುತ್ತಿದ್ದಾರೆ. ಇದರಿಂದ ಆತ್ಮಹತ್ಯೆ ಮಾಡಿಕೊಂಡ ರೈತನ ಹೆಂಡತಿ ಮಕ್ಕಳು ಅನೇಕ ಸಂಕಷ್ಟಗಳಿಗೆ ಇಡಾಗುತ್ತಿದ್ದಾರೆ. ಸತ್ತ ರೈತ ಮಾಡಿದ ಸಾಲದ ಹೊರೆ ಆತನ ಹೆಂಡತಿ ಮಕ್ಕಳ ಮೇಲೆ ಬೀಳುತ್ತದೆ.

* ಅಭಿವೃದ್ಧಿ ಹೆಸರಿನಲ್ಲಿ ಕೃಷಿಕರನ್ನು ಭೂಹೀನರನ್ನಾಗಿ ಮಾಡುತ್ತಿರುವ ಪ್ರಕ್ರಿಯೆಯಿಂದ ಆ ಭೂಮಿಯನ್ನು ಅವಲಂಬಿಸಿ ದುಡಿಯುತ್ತಿದ್ದ ದುಡಿಮೆಗಾರರ ಮೇಲೆ ಪರಿಣಾಮ ಬೀರುತ್ತಿದೆ. ಅದರಲ್ಲೂ ಕೃಷಿಯಲ್ಲಿ ಮಹಿಳಾ ದುಡಿಮೆಗಾರರು ಅಧಿಕವಾಗಿ ತೊಡಗಿಕೊಂಡಿದ್ದರಿಂದ ಹೆಚ್ಚಾಗಿ ಅವರಿಗೆ ಇದರ ಪರಿಣಾಮ ಉಂಟಾಗುತ್ತದೆ.

* ಆಧುನಿಕ ಕೃಷಿಯಿಂದಾಗಿ ಮಹಿಳೆಯ ಬದುಕಿನಲ್ಲಿ ಪುರುಷರಿಗೆ ಅಧೀನವಾಗಿರಬೇಕಾಗಿದ್ದ ಅನಿವಾರ್ಯತೆಗಳು ಮತ್ತಷ್ಟು ಹೆಚ್ಚಾಗುತ್ತಿದೆ.

* ಆರ್ಥಿಕ ಬದುಕು ಬದಲಾದಂತೆ ಕೃಷಿಕರ ಸಾಂಸ್ಕೃತಿಕ ಅಭಿವ್ಯಕ್ತಿ ಮತ್ತು ಅಭಿರುಚಿಗಳಲ್ಲಿ ಬದಲಾವಣೆಗಳಾಗುತ್ತಿವೆ.

* ಕೃಷಿಯಲ್ಲಿ ಯಂತ್ರೋಪಕರಣಗಳ ಬಳಕೆ ಮೇಲ್ವರ್ಗದವರಿಗೆ ಮತ್ತು ದೊಡ್ಡ ಭೂಹಿಡುವಳಿದಾರರಿಗೆ ಅನುಕೂಲವಾಗಿವೆ. ಆದರೆ ಹತ್ತಾರು ಜನ ಮಾಡುವ ಕೆಲಸವನ್ನು ಯಂತ್ರವೊಂದೇ ಮಾಡಿ ಮುಗಿಸುವುದರಿಂದ ಕೃಷಿ ಅವಲಂಬಿತ ದುಡಿಮೆಗಾರರಿಗೆ ಉದ್ಯೋಗಾವಕಾಶವು ಕಡಿಮೆಯಾಗುತ್ತಿವೆ. ಆದರೂ ಯಂತ್ರೋಪಕರಣಗಳ ಬಳಕೆ ಎಲ್ಲ ಕೃಷಿಕರಿಗೂ ಸಾಧ್ಯವಾಗದೇ ಇರುವುದು ಕಂಡು ಬರುತ್ತದೆ.

* ಆಧುನಿಕ ಯಂತ್ರೋಪಕರಣಗಳ ಬಳಕೆಯಿಂದಾಗಿ ಕೃಷಿ ಅವಲಂಬಿತ ಇತರ ಪಾರಂಪರಿಕ ವೃತ್ತಿಗಳಾದ ಬಡಿಗ, ಕಮ್ಮಾರ, ಚಮ್ಮಾರ ಮುಂತಾದ ವೃತ್ತಿಗಳು ಮೂಲೆಗುಂಪಾಗುತ್ತಿವೆ.

* ಒಟ್ಟಾರೆ ಕೃಷಿ ದುಡಿಮೆಯಲ್ಲಿ ಅಧಿಕ ಸಂಖ್ಯೆಯಲ್ಲಿ ಮಹಿಳೆಯರೇ ತೊಡಗಿಕೊಂಡಿರುವುರಿಂದ ಯಾವುದೇ ಹೊಸ ಬಗೆಯ ಕೃಷಿ ವಿಧಾನದಿಂದ ಉಂಟಾಗುವ ಒಳ್ಳೆಯ ಪರಿಣಾಮವಾಗಲಿ ಅಥವಾ ದುಷ್ಪಾರಿಣಾಮವಾಗಲಿ ಅದು ಬಹುಪಾಲು ಮಹಿಳೆಯರ ಮೇಲೆಯೇ ಉಂಟಾಗುತ್ತದೆ.

* ಕೃಷಿ ಇಂದು ವ್ಯವಹಾರಿಕ ನೆಲೆಯಲ್ಲಿ ನಡೆಯುತ್ತಿರುವುದರಿಂದ ಕೃಷಿಕರಿಗಿದ್ದ ಮೊದಲಿನ ಕೃಷಿಯೊಟ್ಟಿಗಿನ ಭಾವನಾತ್ಮಕತೆ ಮತ್ತು ಊರೊಟ್ಟಿಗಿನ ಕೃಷಿಕರ ಸಾಂಸ್ಕೃತಿಕ ಸಂಬಂಧಗಳು ದೂರವಾಗುತ್ತಿವೆ.

* ಹೊಸ ತಲೆಮಾರಿನ ಮಹಿಳೆಯರಿಗೆ ಕೃಷಿಯತ್ತ ನಿರ್ಲಕ್ಷ್ಯ ಬೆಳೆಯುತ್ತಿದೆ. ಪುರುಷರು ಕೂಡಾ ಕೃಷಿಯ ಬಗೆಗೆ ನಿರಾಸೆ ತಳೆದು ಉದ್ಯೋಗ ಅರಸಿ ಪಟ್ಟಣಗಳಿಗೆ ವಲಸೆ ಹೋಗುತ್ತಿದ್ದಾರೆ. ಇದರಿಂದ ಮಹಿಳೆಯರ ಮೇಲಿನ ಕೆಲಸದ ಒತ್ತಡ ಮತ್ತಷ್ಟು ಹೆಚ್ಚಾಗುತ್ತಿದೆ.

* ಕೃಷಿ ಮಹಿಳೆಯ ಬದುಕು ಎಲ್ಲ ಕಾಲಕ್ಕೂ ಒಂದೇ ಬಗೆಯಾಗಿಲ್ಲ. ಅದು ಕೃಷಿ ಕಂಡುಕೊಂಡ ಆರಂಭದ ಹಂತದಲ್ಲಿ ಒಂದು ಬಗೆಯಲ್ಲಿದ್ದರೆ, ಸಮಕಾಲೀನದಲ್ಲಿ ಇನ್ನೊಂದು ಬಗೆಯದಾಗಿದೆ. ಅಂದರೆ ಕೃಷಿಯ ಆರಂಭಿಕ ಹಂತದಲ್ಲಿದ್ದ ಸ್ತ್ರೀಯ ಪರಮಾಧಿಕಾರ ಕ್ರಮೇಣ ಕುಟುಂಬ ಮತ್ತು ಖಾಸಗಿ ಆಸ್ತಿಯ ಬೆಳವಣಿಗೆಯೊಂದಿಗೆ ಪುರುಷ ಪ್ರಧಾನ ಅಧಿಕಾರವು ಅಸ್ತಿತ್ವಕ್ಕೆ ಬಂದಾಗಿನಿಂದ ಸ್ತ್ರೀ ಕೌಟುಂಬಿಕ ಮತ್ತು ಸಾಮಜಿಕ ವಲಯದಲ್ಲಿ ಎರಡನೆಯ ದರ್ಜೆಯ ಪ್ರಜೆಯಾಗಿಯೇ ಪರಿಗಣಿಸಲ್ಪಡುತ್ತಾ ಬಂದಿದ್ದಾಳೆ.

## ಸಲಹೆಗಳು

* ಕೃಷಿ ಕೂಲಿ ಮಹಿಳೆಯರ ಕೂಲಿಯನ್ನು ಕಾಲಕಾಲಕ್ಕೆ ಮಾರುಕಟ್ಟೆಯ ಬೆಲೆಗಳಿಗೆ ಅನುಗುಣವಾಗಿ ನಿಗದಿಪಡಿಸಬೇಕು.

* ಮನೆಯ ಒಳಗೆ ಮತ್ತು ಹೊಲದಲ್ಲಿ ದುಡಿಯುವ ಮಹಿಳೆಯ ಕೆಲಸಗಳಿಗೆ ಪುರುಷರು ಸಹಾಯ ಮಾಡಬೇಕು. ಮನೆಗೆಲಸ ಮಾಡುವುದೇ ಅಪರಾಧ ಅಥವಾ ಅವಮಾನ ಎಂಬ ಭಾವನೆ ಪುರುಷರಿಂದ ದೂರವಾಗಬೇಕು.

* ಮನೆ-ಗಂಡ-ಮಕ್ಕಳಿಗಾಗಿ ನಿರಂತರವಾಗಿ ಯಂತ್ರದಂತೆ ದುಡಿಯುವ ಮಹಿಳೆಯನ್ನು, ಪುರುಷರು ಅವಳು ತಮ್ಮಂತೆ ಮನುಷ್ಯಳು ಎಂದು ಪರಿಗಣಿಸಬೇಕು.

* ಮನೆಯ ಮತ್ತು ಹೊಲದ ಕೆಲಸಗಳನ್ನೆಲ್ಲ ಅಚ್ಚುಕಟ್ಟಾಗಿ ನಿಭಾಯಿಸಿಕೊಂಡು ಹೋಗುವ ಮಹಿಳೆಯ ಬಗೆಗೆ ಪ್ರೀತಿ, ಗೌರವದ ಭಾವನೆ ಇರಬೇಕು.

* ಗಂಡು ಶ್ರೇಷ್ಠ, ಹೆಣ್ಣು ಕನಿಷ್ಠ ಎನ್ನುವ ಭಾವನೆ ಗ್ರಾಮೀಣ ಪ್ರದೇಶದಲ್ಲಿ ಅದರಲ್ಲೂ ಕೃಷಿ ಅವಲಂಬಿತ ಸಾಂಪ್ರದಾಯಿಕ ಕುಟುಂಬಗಳಲ್ಲಿ ಈ ಮನೋಭಾವನೆ ಅಧಿಕವಾಗಿರುತ್ತದೆ. ಸಮಾಜ ಅಭ್ಯುದಯಕ್ಕೆ ಗಂಡು-ಹೆಣ್ಣು ಇಬ್ಬರ ಪಾತ್ರವೂ ಮಹತ್ವದ್ದಾಗಿದೆ. ಹಾಗಾಗಿ ಗಂಡು-ಹೆಣ್ಣು ಎಂಬ ಭೇದ ಭಾವ ಮಾಡದೆ ಇಬ್ಬರನ್ನು ಸಮಾನ ದೃಷ್ಟಿಯಿಂದ ಕಾಣಬೇಕು. ಮನೆಯಲ್ಲಿ ಬೆಳೆಸುವ ಮಕ್ಕಳನ್ನು ಸಮಾನ ರೀತಿಯಲ್ಲಿಯೇ ಬೆಳೆಸಬೇಕು.

* ಹೊಲ ಮನೆಗಳಲ್ಲಿ ದುಡಿಯುವ ಮಹಿಳೆ ಆರೋಗ್ಯಯುತವಾಗಿರಲು ಪೌಷ್ಟಿಕ ಆಹಾರದ ಅಗತ್ಯತೆ ಇದ್ದು ಅವರಿಗೆ ಪೌಷ್ಟಿಕ ಆಹಾರವು ಒದಗುವಂತೆ ನೋಡಿಕೊಳ್ಳಬೇಕು.

* ದುಡಿಮೆಯಲ್ಲಿ ಪಾಲುದಾರಳಾದ ಮಹಿಳೆ ದುಡಿಮೆಯ ಉತ್ಪಾದನೆಯಿಂದ ಬಂದ ಗಳಿಕೆಯಿಂದ ಸಂಪೂರ್ಣ ದೂರವಿಡಬಾರದು. ಮಹಿಳೆಗೂ ಆರ್ಥಿಕ ಸ್ವಾಯತ್ತತೆ ಇದ್ದರೆ ಅವಳಿಗೂ ಸಮಾಜದಲ್ಲಿ ಒಳ್ಳೆಯ ಸ್ಥಾನಮಾನಗಳು ಲಭ್ಯವಾಗಲು ಸಾಧ್ಯ.

* ಮಹಿಳೆಯ ಬಗೆಗೆ ಈಗಿರುವ ಮನೋಭಾವಗಳು ಬದಲಾಗದ ಹೊರತು ಕೃಷಿ ಮಹಿಳೆಯ ಸ್ಥಾನಮಾನಗಳು ಬದಲಾಯಿಸುವುದಕ್ಕಾಗದು.

* ಕುಟುಂಬದಲ್ಲಿ ಯಾರಿಗೆ ಯಾರೂ ಪ್ರಧಾನರಾಗದೆ ಎಲ್ಲರೂ ಸಮಾನರಾಗಬೇಕು. ಅಂದರೆ ಕುಟುಂಬದಲ್ಲಿ ಎಲ್ಲದಕ್ಕೂ ಪುರುಷ ಪ್ರಭುತ್ವ ಸಾಧಿಸುವುದಾಗಲಿ ಅಥವಾ ಮಹಿಳೆ ಪ್ರಭುತ್ವ ಸಾಧಿಸುವುದಾಗಲಿ ಇರದೆ ಕುಟುಂಬದ ಪ್ರತಿ ಪ್ರಮುಖ ಜವಾಬ್ದಾರಿ ಅಥವಾ ಕೆಲಸಗಳು ಸ್ತ್ರೀ-ಪುರುಷರಿಬ್ಬರ ಸಮ್ಮುಖದಲ್ಲಿ ನಿರ್ಣಯಿಸಲ್ಪಟ್ಟರೆ ಹೆಚ್ಚು ಸೂಕ್ತ.

* ಮಹಿಳೆಗೆ ಇರುವ ಆಸ್ತಿಯ ಹಕ್ಕಿನ ಕಾನೂನು ಕೇವಲ ಪುಸ್ತಕದಲ್ಲಿರದೇ ಎಲ್ಲಾ ಕಡೆಯೂ ಜಾರಿಗೆ ಬರುವುದರ ಜೊತೆಗೆ ಆ ಆಸ್ತಿಯನ್ನು ತಮ್ಮ ಶ್ರೇಯೋಭಿವೃದ್ಧಿಗಾಗಿ ಬಳಸಲು ಅನುಕೂಲವಾಗಬೇಕು.
* ಮಹಿಳೆಯರೂ ಸಹ ತಮಗಿರುವ ಆಸ್ತಿಯ ಹಕ್ಕನ್ನು ಉಪಯೋಗಿಸಿಕೊಳ್ಳುವಲ್ಲಿ ಮುಂದಾಗಬೇಕು. ಜೊತೆಗೆ ತವರು ಮನೆ, ಒಡಹುಟ್ಟಿದ ಅಣ್ಣ-ತಮ್ಮಂದಿರು ಎಂಬ ಅನುಕಂಪದ ಹಿನ್ನೆಲೆಯಲ್ಲಿ ತಮ್ಮ ಹಕ್ಕನ್ನು ಮರೆಯಬಾರದು.
* ಹೆಣ್ಣು ಮತ್ತು ಗಂಡು ಎಂಬ ಬೇಧ-ಭಾವವಿಲ್ಲದ ವೈಚಾರಿಕ ತಳಹದಿಯಲ್ಲಿ ಸಮಾಜವನ್ನು ಬೆಳೆಸಬೇಕು.
* ಹೆಣ್ಣಿನ ಕೆಲಸದ ಬಗೆಗೆ ನಿಕೃಷ್ಟವಾಗಿ ಪರಿಗಣಿಸದೇ ವ್ಯವಸಾಯದಲ್ಲಿ ಅದೊಂದು ಅಮೂಲ್ಯವಾದುದು ಎಂಬ ಮನೋಭಾವವನ್ನು ಬೆಳೆಸಿಕೊಳ್ಳಬೇಕು.

* * * * *

# ಅನುಬಂಧಗಳು

## ಗ್ರಂಥಋಣ

### ಉಲ್ಲೇಖಿತ ಗ್ರಂಥಗಳು

೧. ಅರ್ಜುನ ಗೊಳಸಂಗಿ (ಸಂ.), ೨೦೦೦, 'ದಲಿತರ ಬದುಕು ಮತ್ತು ಸಂಸ್ಕೃತಿ' (ಜಾನಪದೀಯ ಅಧ್ಯಯನ) ವಿಮೋಚನಾ ಪ್ರಕಾಶನ, ಅಥಣಿ

೨. ಈಶ್ವರಪ್ಪ ಎಂ.ಜಿ., ೧೯೯೫, 'ಚಿತ್ರದುರ್ಗ ಜಿಲ್ಲೆಯ ವ್ಯವಸಾಯ ಜಾನಪದ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೩. ಈಶ್ವರಪ್ಪ ಎಂ.ಜಿ., ೧೯೯೯, 'ಜಾನಪದ ಇಬ್ಬನಿಗಳು', ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ, ಬೆಂಗಳೂರು.

೪. ಕುಮುದಿನಿ ಸಿ.ಕೆ., (ಅನು), ೧೯೮೭, 'ಪ್ರಾಚೀನ ಭಾರತದಲ್ಲಿ ಬೇಸಾಯ', ಐ.ಸಿ.ಎ.ಆರ್. ಪ್ರಕಟಣೆ, ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು.

೫. ಗಾಯತ್ರಿ ನಾವಡ, ೧೯೯೭, 'ವಿರಚನೆ', ಎಸ್.ಆರ್.ಎ.ಎಂ.ಎಚ್. ಪ್ರಕಾಶನ, ಕೋಟೇಶ್ವರ, ದಕ್ಷಿಣ ಕನ್ನಡ.

೬. ಜ್ಯೋತ್ಸ್ನಾ ಕಾಮತ್, ೧೯೯೯, 'ಮಹಿಳೆ : ಒಂದು ಅಧ್ಯಯನ', ನವಕರ್ನಾಟಕ ಪ್ರಕಾಶನ, ಬೆಂಗಳೂರು.

೭. ದಾಸೇಗೌಡ ಜೆ.ವಿ., ೧೯೭೩, 'ನಮ್ಮ ಜನಪದ ನಂಬಿಕೆಗಳು', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೮. ದೇವಿಪ್ರಸಾದ ಚಟ್ಟೋಪಾಧ್ಯಾಯ, ೧೯೯೭, 'ಮಾತೆಯರು ಮಾನ್ಯರಾಗಿದ್ದಾಗ', ಅನು: ಕುಮಾರಪ್ಪ ಜಿ., ನವಕರ್ನಾಟಕ ಪ್ರಕಾಶನ, ಬೆಂಗಳೂರು.

೯. ನರೇಂದ್ರ ರೈ ದೇರ್ಲ, ೧೯೯೭, 'ಸಾವಯವ ಕೃಷಿ', ಪುಸ್ತಕ ಪ್ರಕಾಶನ, ಮೈಸೂರು.

೧೦. ನಾಗಭೂಷಣಸ್ವಾಮಿ ಓ.ಎಲ್., ೧೯೯೮, 'ವಿಮರ್ಶೆಯ ಪರಿಭಾಷೆ', ಪ್ರಕಾಶನ ಅಂಕಿತ ಪುಸ್ತಕ, ಬೆಂಗಳೂರು.

೧೧. ನಾವಡ ಎ.ವಿ., ೧೯೯೯, **'ಒಂದು ಸೊಲ್ಲು ನೂರು ಸೊರ'**, ಕರ್ನಾಟಕ ಸಂಘ, ಪುತ್ತೂರು, ದಕ್ಷಿಣ ಕನ್ನಡ.

೧೨. ನಾವಲಗಿ ಸಿ.ಕೆ., ೨೦೦೩, **'ಜಾನಪದ ಸಮಾಲೋಕ'**, ಪ್ರಕಾಶನ ಕನ್ನಡ ಸಾಹಿತ್ಯ ಪ್ರತಿಷ್ಠಾನ (ರಿ) ಬೆಂಗಳೂರು.

೧೩. ನಾವಲಗಿ ಸಿ.ಕೆ., ೨೦೦೬, **'ಉತ್ತರ ಕರ್ನಾಟಕದ ಕೃಷಿ ಜನಪದ ಸಾಹಿತ್ಯ'**, ಭರತ ಪ್ರಕಾಶನ, ಗೋಕಾಕ.

೧೪. ಪುರುಷೋತ್ತಮ ಬಿಳಿಮಲೆ, ೧೯೯೭, **'ಕೂಡುಕಟ್ಟು'**, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ.

೧೫. ಬರಗೂರ ರಾಮಚಂದ್ರಪ್ಪ (ಪ್ರ.ಸಂ.), ೧೯೯೩, **'ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆಯ ಸ್ವರೂಪ'**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೬. ಬಾಲಗೋಪಾಲ್ ಕೆ., ೧೯೯೮, **'ಪ್ರಾಚೀನ ಭಾರತದ ಚರಿತ್ರೆ : ಡಿ.ಡಿ. ಕೋಸಾಂಬಿಯವರ ಚಿಂತನೆಗಳು'**, ಅನು: ಶ್ರೀಮತಿ ಎಚ್.ಎಸ್., ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್, ಬೆಂಗಳೂರು.

೧೭. ಬೋರಲಿಂಗಯ್ಯ ಹಿ.ಚಿ., ೨೦೦೦, **'ಬುಡಕಟ್ಟು ದೈವಾರಾಧನೆ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಮೈತ್ರೇಯಿ ಮುಖ್ಯೋಪಾಧ್ಯಾಯ, ೧೯೮೫, **'ಬೆಳ್ಳಿಯ ಸಂಕೋಲೆಗಳು'**, (ಅನು.) ವೈದೇಹಿ, ಅಕ್ಷರ ಪ್ರಕಾಶನ, ಸಾಗರ

೧೯. ರಹಮತ್ ತರೀಕೆರೆ (ಸಂ.), ೨೦೦೦, **'ಧರ್ಮ'** (ವಿಶ್ವಕೋಶ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಲಿಂಗಯ್ಯ ಡಿ., ೧೯೭೭, **'ಕೊಂತಿಪೂಜೆ'**, ದಿನಕರ ಪ್ರಕಾಶನ, ಬೆಂಗಳೂರು.

೨೧. ವಂದನಾಶಿವ, ೨೦೦೫, **'ಬತ್ತದ ಚಿಲುಮೆ'**, ಅನು: ಮಾಧವ ಐತಾಳ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ವೀರಣ್ಣ ದಂಡೆ, ೨೦೦೧, **'ದೇಸೀ ದೃಷ್ಟಿ'**, ಕವಿಮಾರ್ಗ ಪ್ರಕಾಶನ, ಕಲಬುರ್ಗಿ.

೨೩. ವೆಂಕಟರಾವ್ ಡಿ., ೧೯೮೫, **'ಕೃಷಿ ಬೆಳವಣಿಗೆ'**, ವಿದ್ಯಾನಿಧಿ ಪ್ರಕಾಶನ, ಗದಗ.

೨೪. ಶರ್ಮ ಆರ್.ಎಸ್., ಅನು: ಶಂಕರನಾರಾಯಣರಾವ್ ಎಸ್.ಪಿ. ೧೯೯೭, **'ಪ್ರಾಚೀನ ಭಾರತ'**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೫. ಶ್ರೀಮತಿ ಎಚ್.ಎಸ್., (ಸಂ.) ೨೦೦೬, **'ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಸಂಧ್ಯಾರೆಡ್ಡಿ ಕೆ.ಆರ್., ೧೯೯೫, **'ಜನಪದ ಸಾಹಿತ್ಯದಲ್ಲಿ ಮಹಿಳೆ'**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೭. ಸಿದ್ದಲಿಂಗಯ್ಯ, ೧೯೯೭, **'ಗ್ರಾಮದೇವತೆಗಳು'**, ಪ್ರಕಾಶನ ಅಂಕಿತ ಪುಸ್ತಕ, ಬೆಂಗಳೂರು.

೨೮. ಸೂರ್ಯನಾಥ ಯು.ಕಾಮತ್, ೧೯೮೬, (ಮುಖ್ಯ ಸಂ.) **ಕರ್ನಾಟಕ ರಾಜ್ಯ ಗೆಜೆಟಿಯರ್**, ಕರ್ನಾಟಕ ರಾಜ್ಯ ಸರ್ಕಾರ.

೨೯. ಹರಿಲಾಲ್ ಪವಾರ, ೧೯೯೯, ಲೇ: ಭೂಮಿ, **'ಜನಪದ ಸಾಹಿತ್ಯ ದರ್ಶನ'**, ಭಾಗ-೨೩ (ಜನಪದ ನಂಬಿಕೆಗಳು), ಎಂ.ಬಿ.ನೇಗಿನಹಾಳ (ಪ್ರ.ಸಂ), ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೦. ಹಲಸಂಗಿ ಗೆಳೆಯರು (ಸಂ.), ೨೦೦೦, **'ಹಲಸಂಗಿ ಹಾಡು'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೧. ಹಿರೇಮಠ ಎಸ್.ಎಸ್., ೧೯೯೨, **'ಕರ್ನಾಟಕ ಸಂಸ್ಕೃತಿ ಪರಂಪರೆ'** ಭಾಗ-೧, ಹಬ್ಬಗಳು, ಸಮತಾ ಪ್ರಕಾಶನ, ಹರಪನಹಳ್ಳಿ.

೩೨. ಹಿರಿಯಣ್ಣ ಅಂಬಳಿಕೆ, ೧೯೯೩, **'ಕಟ್ಟಿಗೌಳಿಗರ ಸಂಸ್ಕೃತಿ'**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

## ಉಲ್ಲೇಖಿತ ನಿಯತಕಾಲಿಕೆಗಳು ಮತ್ತು ವರದಿಗಳು

೧. ಕೇಶವನ್ ಪ್ರಸಾದ್, ೨೦೦೫, **'ಆದಿವಾಸಿಗಳ ಮಳೆ ಕರೆಯುವ ಆಚರಣೆ'**, (ಸಂ.) ಚೋರಲಿಂಗಯ್ಯ ಹಿ.ಚಿ., ಪ್ರಭಾಕರ ಎ.ಎಸ್., ಬುಡಕಟ್ಟು ಅಧ್ಯಯನ ಪತ್ರಿಕೆ-೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. **ಮಾನವ ಅಭಿವೃದ್ಧಿ ವರದಿ : ೨೦೦೫**

೩. ಶೆಟ್ಟರ್ ಎಸ್.ಸಿ., ಮತ್ತು ದೊಡ್ಡಮನಿ ವಿ.ಪಿ., ೨೦೦೬, **'ಗ್ರಾಮೀಣ ಮಹಿಳೆಯರ ಸಮಸ್ಯೆಗಳು'**, ಯೋಜನ ಪತ್ರಿಕೆ, ಬೆಂಗಳೂರು

೪. **ಹಾವೇರಿ ಜಿಲ್ಲಾ ಅಂಕಿ-ಅಂಶಗಳ ನೋಟ** : ೨೦೦೪-೦೫, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ

## ಪರಾಮರ್ಶನ ಗ್ರಂಥಗಳು

೧. ಅಂಗಡಿ ಎಸ್.ಎಸ್. (ಸಂ.), **'ಹಂತಿ-ಪಂತ ಪದಗಳು'**, ವಿದ್ಯಾನಿಧಿ ಪ್ರಕಾಶನ, ಗದಗ.

೨. ಅಂಜನಪ್ಪ ಬಿ.ಹೆಚ್., ೨೦೦೬, **'ಮಹಿಳೆ ಮತ್ತು ದುಡಿಮೆ'**, ಸೃಷ್ಟಿ ಪಬ್ಲಿಕೇಷನ್ಸ್ ಬೆಂಗಳೂರು.

೩. ಅರ್ಜುನ ಯ. ಗೊಳಸಂಗಿ (ಸಂ.), ೧೯೯೫, **'ಗೊಳಸಂಗಿ : ಒಂದು ಸಾಂಸ್ಕೃತಿಕ ಅಧ್ಯಯನ'**, ಮಲ್ಲಿಕಾರ್ಜುನ ಪ್ರಕಾಶನ, ಗೊಳಸಂಗಿ.

೪. ಅಕ್ಕಿ ಡಿ.ಎನ್., (ಸಂ.), ೧೯೯೯, **'ಹಡದವ್ವ ಹಾಡ್ಯಾಳ'**, ಕವಿಕುಂಚ ಪ್ರಕಾಶನ.

೫. ಅರವಿಂದ ಮಾಲಗತ್ತಿ (ಸಂ.), '**ಜಾನಪದ ವೈಜ್ಞಾನಿಕ ಅಧ್ಯಯನ ನೆಲೆಗಳು**', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೬. ಅಶೋಕ ಕುಮಾರ ಯು.ಬಿ., ೨೦೦೧, '**ಕೃಷಿ ಕೂಲಿಕಾರರ ಬದುಕು; ಬವಣೆ**', ಪ್ರಕಾಶನ ಚೇತನ ಬುಕ್ ಹೌಸ್, ಮೈಸೂರು.

೭. ಅಶೋಕ ಸಿ., '**ಹರಪನಹಳ್ಳಿ ತಾಲ್ಲೂಕಿನ ಆರ್ಥಿಕತೆಯಲ್ಲಿ ಮಹಿಳಾ ಕೃಷಿಕಾರ್ಮಿಕರ ಸ್ಥಾನ**', ಎಂ.ಫಿಲ್ ಪದವಿಗಾಗಿ ಅಭಿವೃದ್ಧಿ ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಬಂಧ.

೮. ಇಂದಿರಾ ಆರ್., ೨೦೦೨, '**ಮಹಿಳೆ ಸಮಾಜ ಮತ್ತು ಸಂಸ್ಕೃತಿ**', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಈಶ್ವರನ್ ಕೆ. ಹಿರೇಮಲ್ಲೂರ್, ೧೯೭೨, '**ಭಾರತದ ಹಳ್ಳಿಗಳು**', ಮೈಸೂರು.

೧೦. ಎಂಗೆಲ್ಸ್ ಫೆಡರಿಕ್, ೧೯೮೦, '**ಕುಟುಂಬ ಖಾಸಗಿ ಆಸ್ತಿ ಹಾಗೂ ರಾಜ್ಯಗಳ ಉಗಮ**', ಪ್ರಗತಿ ಪ್ರಕಾಶನ, ಮಾಸ್ಕೋ.

೧೧. ಒಡೆಯರ್ ಡಿ. ಹೆಗ್ಗಡೆ, ಅನ್ನಪೂರ್ಣೇಶ್ವರಿ ಎಸ್., ೨೦೦೩, '**ಮಹಿಳಾ ಅಧ್ಯಯನಗಳು-ಆರ್ಥಿಕ ನೆಲೆಗಳು ಮತ್ತು ಆಯಾಮಗಳು**', ಪ್ರಕಾಶಕರು ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು.

೧೨. ಕರೋವ್ಕಿನ್ ಎಫ್., ೧೯೮೭, '**ಪುರಾತನ ಜಗತ್ತಿನ ಇತಿಹಾಸ**', ಅನು. ಗೋಪಾಲಕೃಷ್ಣರಾವ್ ಕೆ.ಎಲ್. ಪ್ರಗತಿ ಪ್ರಕಾಶನ, ಸೋವಿಯತ್ ಒಕ್ಕೂಟ, ಮಾಸ್ಕೋ ಮತ್ತು ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು.

೧೩. ಕದರ ಮಂಡಲಗಿ ಎಸ್.ಜಿ., ೧೯೯೧, '**ಭೂ ಬಳಕೆ ಯೋಜನೆ**', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೪. ಕಲಬುರ್ಗಿ ಎಂ.ಎಂ., ೧೯೯೫, '**ಜಾನಪದ ಮಾರ್ಗ**', ಲಕ್ಷ್ಮಿ ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು.

೧೫. ಕರೀಂಖಾನ್ ಎಸ್.ಕೆ. (ಪ್ರ.ಸಂ), '**ಕರ್ನಾಟಕ ಜಾನಪದ**', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೬. ಕರೀಂಖಾನ್ ಎಸ್.ಕೆ (ಪ್ರ.ಸಂ), '**ಜಾನಪದ ವೈಜ್ಞಾನಿಕ ಅಧ್ಯಯನದ ನೆಲೆಗಳು**', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೭. ಕಾಪಸೆ ರೇವಪ್ಪನವರು (ಸಂ.), ೧೯೯೦, '**ಮಲ್ಲಿಗೆ ದಂಡೆ**', ಸಮಾಜ ಪುಸ್ತಕಾಲಯ, ಧಾರವಾಡ.

೧೮. ಕುಪ್ಪಸ್ವಾಮಿ ಬಿ., ೧೯೮೦, '**ಶ್ರದ್ಧೆ ನಂಬಿಕೆ ಮತ್ತು ವೈಚಾರಿಕತೆ**', ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೯. ಕೃಷ್ಣಮೂರ್ತಿ ಹನೂರು (ಸಂ), ೧೯೮೧, **'ಕತ್ತಲದಾರಿ ದೂರ'**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೦. ಕೃಷ್ಣರಾವ್ ವೈ.ವಿ., ೧೯೯೮, **'ಸ್ವಾತಂತ್ರ್ಯೋತ್ತರ ಕೃಷಿರಂಗ'**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೧. ಗದ್ದಗಿಮಠ ಬಿ.ಎಸ್., ೧೯೮೮, **'ಗದ್ದಗಿಮಠದ ಬರಹಗಳು'**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

೨೨. ಗಣೇಶ ಮೊಗಳ್ಳಿ, ೨೦೦೫, **'ಆದಿಮ'**, ಸಾಗರ ಪ್ರಕಾಶನ, ತಿಪಟೂರು.

೨೩. ಗಾಯತ್ರಿ ಎನ್., ೧೯೯೧, **'ಮಹಿಳೆ ಬಿಡುಗಡೆಯ ಹಾದಿಯಲ್ಲಿ'**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೨೪. ಗಾಯತ್ರಿ ನಾವಡ, ೨೦೦೦, **'ಭಾರತೀಯ ಸ್ತ್ರೀವಾದ ಒಂದು ಸಂಕಥನ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ಗಾಯತ್ರಿ ನಾವಡ, ೨೦೦೩, **'ಮಹಿಳಾ ಸಂಕಥನ'**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೬. ಗುರುಮೂರ್ತಿ ಪೆಂಡಕೂರು (ಸಂ), ೧೯೯೨, **'ಮುತ್ತು ಹವಳ-ಬಳ್ಳಾರಿ ಜಿಲ್ಲೆ ಜನಪದ ಸಾಹಿತ್ಯ ಸಂಪುಟ'**, ಕನ್ನಡ ಸಾಹಿತ್ಯ ಪರಿಷತ್ತು, ಹಗರಿಬೊಮ್ಮನಹಳ್ಳಿ.

೨೭. ಗುರುಮೂರ್ತಿ ಕೆ.ಜಿ., ೨೦೦೩, **'ಜಾನಪದ ಮಾಹಿತಿಯ ಮರು ಅರ್ಥೈಸುವಿಕೆ'**, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೨೮. ಗೋವಿಂದರಾಜು ಟಿ., ೨೦೦೦, **'ಕಣ'**, ಸಂವಹನ ಪ್ರಕಾಶನ, ಮೈಸೂರು.

೨೯. ಗೋವಿಂದರಾಜು ಟಿ., ೨೦೦೦, **'ಜಾನಪದೀಯ'**, ಪುಸ್ತಕ ಜೇನು, ಬೆಂಗಳೂರು ಗ್ರಾಮಾಂತರ.

೩೦. ಗೋಪಾಲಕೃಷ್ಣಯ್ಯ ಕೆ.ಎಲ್., ೨೦೦೨, **'ಇತಿಹಾಸ ರಾಜಕೀಯ'**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೧. ಗೌಡರ್ ಎಸ್.ಆರ್., ೧೯೮೩, **'ಹಂತಿಯ ಪದಗಳು ಸೊಗಸು'**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೩೨. ಚನ್ನಬಸಪ್ಪ ಗೊ.ರು. (ಸಂ), ೧೯೭೯, **'ಗ್ರಾಮಜ್ಯೋತಿ'**, ಪ್ರಕಾಶನ ಕೆ.ಆರ್. ಲಿಂಗಪ್ಪ ಅಭಿನಂದನ ಗ್ರಂಥ ಸಮಿತಿ, ಬೆಂಗಳೂರು.

೩೩. ಚಂದ್ರಶೇಖರ್ ಟಿ.ಆರ್., ೨೦೦೧, **'ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ಚಂದ್ರಶೇಖರ್ ಟಿ.ಆರ್., ೨೦೦೩, 'ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ನೆಲೆಗಳು', ಸಿ.ಎಂ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೩೫. ಚಂದ್ರಶೇಖರ್ ಟಿ.ಆರ್., ಶ್ರೀಧರ್ ಎ., ಸಿದ್ದಗಂಗಮ್ಮ (ಸಂ), ೨೦೦೩, 'ಅಭಿವೃದ್ಧಿ ಅಧ್ಯಯನ ಪತ್ರಿಕೆ', ಸಂಪುಟ-೩, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೬. ಚಿದಾನಂದಮೂರ್ತಿ ಎಂ., ೧೯೭೭, 'ಗ್ರಾಮೀಣ', ಬಾಪ್ಕೊ ಪ್ರಕಾಶನ.

೩೭. ಚಿದಾನಂದಮೂರ್ತಿ ಎಂ., ೨೦೦೨, 'ಜನ-ಜನಪದ-ಜಾನಪದ', ಸ್ವಪ್ನ ಬುಕ್ ಹೌಸ್, ಬೆಂಗಳೂರು.

೩೮. ಚೆನ್ನಣ್ಣ ವಾಲೀಕಾರ, ೧೯೮೯, 'ಗುಲಬರ್ಗಾ ಜಿಲ್ಲೆಯ ತ್ರಿಪದಿಗಳು', ಯುನಿವರ್ಸಲ್ ಪಬ್ಲಿಕೇಷನ್ಸ್, ರಾಯಚೂರು.

೩೯. ಚೆನ್ನಬಸಪ್ಪ ಗೊ.ರು., ಬೈರಮಂಡಲಿ ರಾಮೇಗೌಡ ಮತ್ತು ಚಕ್ಕೆರೆ ಶಿವಶಂಕರ, ೧೯೯೧, 'ಜಾನಪದ ದರ್ಶನ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪೦. ಜವರೇಗೌಡ ದೇ. (ಸಂ), ೧೯೭೮, 'ಜನಪದ ಗೀತಾಂಜಲಿ', ಸಾಹಿತ್ಯ ಅಕಾಡೆಮಿ, ನವದೆಹಲಿ.

೪೧. ಜಯಲಕ್ಷ್ಮಿ ಸೀತಾಪುರ, ೧೯೮೭, 'ಐದು ಜಾನಪದ ಪ್ರಬಂಧಗಳು', ಪ್ರತಿಭಾ ಪ್ರಕಾಶನ, ಮೈಸೂರು.

೪೨. ಜವರೇಗೌಡ ದೇ., ೧೯೯೧, 'ಜಾನಪದ ಅಧ್ಯಯನ', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೩. ಜಯಶ್ರೀ ಗುತ್ತಲ (ಸಂ), ೧೯೯೪, 'ಜನಪದ ಮಂಗಳ ಗೀತೆಗಳು', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪೪. ಜಯಶೀಲ ಮತ್ತು ಇತರರು (ಸಂ.), ೨೦೦೭, 'ಮಹಿಳೆ ಮತ್ತು ಅಭಿವೃದ್ಧಿ', ಕಿಸಾನ್ ಪಬ್ಲಿಕೇಷನ್ಸ್, ಮಂಗಳೂರು.

೪೫. ಜ್ಯೋತಿ ಹೊಸೂರ, 'ಜಾನಪದ ಉಪಾಸನೆ', ಕಾಲಗತಿ ಪ್ರಕಾಶನ, ರಾಯಭಾಗ.

೪೬. ದೇವೇಂದ್ರಕುಮಾರ ಹಕಾರಿ, ೧೯೮೩, 'ಜಾನಪದ ಮೂಲಭೂತ ತತ್ವಗಳು', ಮೂರು ಸಾವಿರಮಠ, ಹುಬ್ಬಳ್ಳಿ.

೪೭. ದೇವೇಂದ್ರಕುಮಾರ ಹಕಾರಿ, ೧೯೯೬, 'ಹಂತಿ ಹಾಡುಗಳು', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೮. ಧವಳಶ್ರೀ, 'ಫೋಕ್‌ಲೋರ್ ಫೋಕ್‌ಲೋರ್', ಉಜ್ವಲ ಪ್ರಾಂಜಲ ಪ್ರಕಾಶನ, ಮಂಡ್ಯ.

೪೯. ನಟರಾಜ್ ಹುಳಿಯಾರ್, ೨೦೦೪, 'ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೦. ನರಸಿಂಹಮೂರ್ತಿ ಎಂ.ಎಲ್., **'ಜಾನಪದ ಪರಾಗ'**, ತಳಗವಾದಿ ಪ್ರಕಾಶನ, ಮೈಸೂರು.

೫೧. ನಾಗೇಗೌಡ ಎಚ್.ಎಲ್. (ಸಂ), ೧೯೭೬, **'ಪದವಿವೆ ನಮ್ಮ ಎದೆಯಲಿ'**, ಪ್ರಸಾರಾಂಗ, ಜ್ಞಾನಭಾರತಿ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೫೨. ನಾಗೇಶ್ ಎಚ್.ವಿ., ೧೯೮೮, **'ಗ್ರಾಮಾಂತರ'**, ಸುಜಾತ ಪ್ರಕಾಶನ, ಧಾರವಾಡ.

೫೩. ನಾವಡ ಎ.ವಿ., ೧೯೯೩, **'ಜಾನಪದ ಸಮಾಲೋಚನ'**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೫೪. ನಾರಾಯಣವಿಶ್ವ ಎಂ., ೧೯೯೬, **'ಗ್ರಾಮೀಣ ಮತ್ತು ನಗರ ಸಮಾಜಶಾಸ್ತ್ರ'**, ಚೇತನ ಬುಕ್ ಹೌಸ್, ಮೈಸೂರು.

೫೫. ನಾರಾಯಣ ಸ್ವಾಮಿ ಕೆ.ವೈ., ೨೦೦೦, **'ನೀರದೀವಿಗೆ'**, ಲೋಹಿಯಾ ಪ್ರಕಾಶನ, ಬಳ್ಳಾರಿ.

೫೬. ನಾಯಕ ಡಿ.ಬಿ., ೨೦೦೨, **'ದೇಸಿ ಸಂಸ್ಕೃತಿ'**, ಬಂಜಾರ ಪ್ರಕಾಶನ.

೫೭. ನಾಯಕ್ ಎಸ್.ಆರ್., **'ಜಾನಪದ ಸಿಂಹಾವಲೋಕನ'**, ಜಾನಪದ ಪ್ರಕಾಶನ, ಉತ್ತರ ಕನ್ನಡ.

೫೮. ನಿಂಗಣ್ಣ ಸಣ್ಣಕ್ಕಿ, ೧೯೮೨, **'ಜಾನಪದ ಜಯಂತಿ'**, ಜಾನಪದ ಮಂಟಪ, ರಾಯಭಾಗ.

೫೯. ಪರಮಶಿವಯ್ಯ ಜೀ.ಶಂ., ೧೯೭೮, **'ಜನಪದ ಸಾಹಿತ್ಯ ಸರಸ'**, ಮೈಸೂರು.

೬೦. ಪರಮಶಿವಯ್ಯ ಜೀ.ಶಂ., (ಸಂ.), ೧೯೭೯, **'ಜಾನಪದ ಸಮಾವೇಶ'**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ.

೬೧. ಪುರುಷೋತ್ತಮ ಬಿಳಿಮಲೆ, ೧೯೯೩, **'ಜಾನಪದ ಕ್ಷೇತ್ರಕಾರ್ಯ ಆಧುನಿಕ ವಿಧಾನಗಳು'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೨. ಪೂರ್ಣಚಂದ್ರತೇಜಸ್ವಿ ಕೆ.ಪಿ., ೧೯೯೨, **'ಸಹಜ ಕೃಷಿ ಒಂದು ಪರಿಚಯ'**, ಪುಸ್ತಕ ಪ್ರಕಾಶನ, ಮೈಸೂರು.

೬೩. ಪ್ರಭಾಕರ್ ಎ.ಎಸ್., ೨೦೦೦, **'ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು'**. ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೪. ಪ್ರಭು ಖಾನಾಪುರೆ, ೨೦೦೩, **'ಫೇಕ್ ಪಟೆ'**. ಸಾಗರ್ ಪ್ರಕಾಶನ, ಬೆಂಗಳೂರು.

೬೫. ಬಸವರಾಜ ನೆಲ್ಲಿಸರ, ೧೯೭೮, **'ಜಾನಪದ ಸಂಕಲನ'**. ಯಕ್ಷ ಪ್ರಕಾಶನ, ಮೈಸೂರು.

೬೬. ಬಸವರಾಜ ನೆಲ್ಲಿಸರ, ೧೯೭೯, **'ಜಾನಪದ ಜಿಜ್ಞಾಸೆ'**, ಯಕ್ಷ ಪ್ರಕಾಶನ, ಮೈಸೂರು.

೬೭. ಬಸವರಾಜ ಪೊಲೀಸ್ ಪಾಟೀಲ, ೧೯೯೦, **'ಜಾನಪದ ಸಿರಿ'**, ವಿದ್ಯಾಸಾಗರ ಪ್ರಕಾಶನ, ಗುಲಬರ್ಗಾ.

೬೮. ಬಸವರಾಜ ನೆಲ್ಲಿಸರ (ಸಂ.), ೧೯೯೬, **'ಜಾನಪದ ಕರ್ನಾಟಕ'**, ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೬೯. ಬಸವರಾಜ ನೆಲ್ಲಿಸರ, **'ಜಾನಪದ ಸುಗಂಧ'**, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು.

೭೦. ಬಸವರಾಜ ನೆಲ್ಲಿಸರ (ಸಂ.), **'ಜಾನಪದ ಮತ್ತು ಪೂರಕ ಕ್ಷೇತ್ರಗಳು'**, ಕನ್ನಡ ಅಧ್ಯಯನ ವಿಭಾಗ, ಕುವೆಂಪು ವಿಶ್ವವಿದ್ಯಾಲಯ.

೭೧. ಬಸವರಾಜ ಪೋಲೀಸ್ ಪಾಟೀಲ, ೨೦೦೧, **'ಜಾನಪದ ಚಿಂತನ'**, ಅಮರ ಪ್ರಕಾಶನ, ಕಲಬುರ್ಗಿ.

೭೨. ಬೈರೇಗೌಡ ಎಂ, ೧೯೯೯, **'ಜಾನಪದ ವೈವಿಧ್ಯ'**, ಶಕ್ತಿ ಮುದ್ರಣ ಮತ್ತು ಪ್ರಕಾಶನ.

೭೩. ಭಟ್ ಜಿ.ಎಸ್., (ಸಂ), **'ಜಾನಪದ : ೧೯೯೧'**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೭೪. ಮಂಗಳಾ ಚಿ.ನಾ., ೧೯೯೪, **'ಮಾತೃಪೂಜೆ'**, ಪ್ರಸಾರಾಂಗ, ಕ.ವಿ.ವಿ. ಹಂಪಿ.

೭೫. ಮಂಜುನಾಥ ಬೇವಿನಕಟ್ಟಿ, ೧೯೯೪, **'ಜನಪದ ಸಂಸ್ಕೃತಿ'**, ತೇಜಸ್ವಿ ಪ್ರಕಾಶನ.

೭೬. ಮಹದೇವ ಸಿ. ಮತ್ತು ಇತರರು (ಸಂ.), ೧೯೯೯, **'ಕರ್ನಾಟಕ ದೇವಾಲಯ ಕೋಶ'** (ಹಾವೇರಿ ಜಿಲ್ಲೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೭. ಮಮತಾ ಜಿ.ಸಾಗರ, ೨೦೦೭, **'ಮಹಿಳಾ ವಿಷಯ (ಮಹಿಳೆ-ಭಾಷೆ-ಸಾಹಿತ್ಯ-ಸಂಸ್ಕೃತಿ ಕುರಿತ ಬಿಡಿಬರಹಗಳು)'** ಇಳಾ ಪ್ರಕಾಶನ, ಬೆಂಗಳೂರು.

೭೮. ಮಾಸ್ತಿ ವೆಂಕಟೇಶ್ ಅಯ್ಯಂಗಾರ್ (ಸಂ.), ೧೯೬೧, **'ಕರ್ನಾಟಕ ಜನಪದ ಸಂಸ್ಕೃತಿ ಮತ್ತು ಜನಪದ ಸಾಹಿತ್ಯ'**, ಜೀವನ ಕಾರ್ಯಾಲಯ ಟ್ರಸ್ಟ್ (ರಿ.), ಬೆಂಗಳೂರು.

೭೯. ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ೨೦೦೪, **'ಕರ್ನಾಟಕ ಜನಪದ ಸಾಹಿತ್ಯ'**, ಜೀವನ ಕಾರ್ಯಾಲಯ ಟ್ರಸ್ಟ್ (ರಿ.), ಬೆಂಗಳೂರು.

೮೦. ಮುಳುಗುಂದ ಚಿ.ವಿ., ನಾಗೇಶ ಎಚ್.ವಿ.(ಸಂ), ೧೯೮೭, **'ಆಧುನಿಕ ಮಹಿಳೆ ಮತ್ತು ಸಮಾಜ'**, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ್.

೮೧. ಮೃತ್ಯುಂಜಯ ಹೊರಕೇರಿ (ಸಂ.), ೧೯೯೮, **'ರೈತ ಜಾನಪದ'**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೮೨. ರಂಗಾರೆಡ್ಡಿ ಕೋಡಿರಾಂಪುರ, ೧೯೯೫, **'ಬಂಡಾಯ ಜಾನಪದ'**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೮೩. ರಾಗೌ ಎಂ.ಸಿ., ವಸಂತಕುಮಾರ, ೧೯೭೨, **'ಜನಪದ ನಂಬಿಕೆಗಳು'**, ಪ್ರಬುದ್ಧ ಪ್ರಕಾಶನ, ಮೈಸೂರು.

೮೪. ರಾಜೇಂದ್ರ ಡಿ.ಕೆ. (ಸಂ.), ೧೯೭೩, **'ನಮ್ಮ ಸುತ್ತಿನ ನಂಬಿಕೆಗಳು'**, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೮೫. ರಾಹುಲ ಸಾಂಕೃತ್ಯಾಯನ, ೧೯೭೮, 'ವೋಲ್ಗಾ-ಗಂಗಾ', ಅನು: ಬಿ.ಎಂ. ಶರ್ಮಾ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೮೬. ರಾಮಣ್ಣ ಕ್ಯಾತನಹಳ್ಳಿ, ೧೯೮೫, 'ಜಾನಪದ ವಿಹಾರ', ದಿನಕರ ಪ್ರಕಾಶನ, ಬೆಂಗಳೂರು.

೮೭. ರಾವ್ ಎಸ್.ಆರ್., ೧೯೯೪, 'ಲೋಥಲ್ ಮತ್ತು ಸಿಂಧೂ ನಾಗರಿಕತೆ', ಅನು: ಗುರುರಾಜ್‌ಚಾರ್ ಎಸ್., ಶ್ರೀಹರಿ ಪ್ರಕಾಶನ, ಧಾರವಾಡ.

೮೮. ರಾಮಚಂದ್ರೇಗೌಡ ಹಿ.ಶಿ., ೧೯೯೮, 'ಜಾನಪದ ಸಾಂಸ್ಕೃತಿಕ ಆಯಾಮಗಳು', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೮೯. ರಾಜಶೇಖರ ಪಿ.ಕೆ., ೨೦೦೩, 'ಜಾನಪದ ಸಂಭ್ರಮ', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೯೦. ರುದ್ರಪ್ಪ ಕೆ., ೧೯೯೪, 'ಬಳ್ಳಾರಿ ಜಿಲ್ಲೆಯ ಜನಪದ ಸಾಹಿತ್ಯ', ಶ್ರೀ ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನಪುರ.

೯೧. ಲಕ್ಕಪ್ಪಗೌಡ ಎಚ್.ಜೆ., (ಸಂ.), ೧೯೮೩, 'ಮಲೆನಾಡ ಜಾನಪದ', ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೯೨. ಲಕ್ಕಪ್ಪಗೌಡ ಎಚ್.ಜೆ., (ಪ್ರ.ಸಂ.), ೧೯೯೭, 'ಜಾನಪದ ಕೈಪಿಡಿ', ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೯೩. ಲಿಂಗಯ್ಯ ಡಿ., ೧೯೮೨, 'ಜನಪದ ಸಾಹಿತ್ಯ ಸಂಪಾದ', ದಿನಕರ ಪ್ರಕಾಶನ, ಬೆಂಗಳೂರು.

೯೪. ವಾಲಿ ಎಂ.ಎನ್., ೧೯೮೬, 'ಹಬ್ಬಗಳ ಜಾನಪದ ಹಾಡುಗಳು', ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೯೫. ವಾಮನ್‌ನಂದಾವರ, ೧೯೯೨, 'ಜನಪದ ಸುತ್ತಮುತ್ತ', ಪ್ರಜಾಬಂಧು ಪ್ರಕಾಶನ, ಮಂಗಳೂರು.

೯೬. ವಿಜಯಾ ದಬ್ಬೆ, ೧೯೮೯, 'ಮಹಿಳೆ ಸಾಹಿತ್ಯ ಸಮಾಜ', ರಚನಾ ಪ್ರಕಾಶನ, ಮೈಸೂರು.

೯೭. ವಿಜಯಶ್ರೀ ಸಬರದ, ೧೯೮೯, 'ಸಾಹಿತ್ಯ ಮತ್ತು ಮಹಿಳೆ', ನವಕರ್ನಾಟಕ ಪ್ರಕಾಶನ, ಬೆಂಗಳೂರು.

೯೮. ವಿರೇಶ್ ಬಡಿಗೇರ್, ೧೯೯೭, 'ಅಡಿಗಲ್ಲು', ಮಯ ಪ್ರಕಾಶನ, ಕಮಲಾಪುರ.

೯೯. ವಿಜಯಶ್ರೀ ಸಬರದ, ೨೦೦೬, 'ಜಾನಪದ ಮತ್ತು ಮಹಿಳೆ', ಪ್ರಕಾಶನ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೦೦. ವೀರಣ್ಣ ದಂಡೆ, ೨೦೦೩, 'ದೇಸಿ ೧ ಮತ್ತು ೨', ಭಾಗ್ಯಶ್ರೀ ಎಂಟರ್‌ಪ್ರೈಸಸ್, ಬೆಂಗಳೂರು.

೧೦೧. ವೆಂಕಟರಾಯಪ್ಪ ಕೆ.ಎನ್., ೧೯೭೧, 'ಸ್ತ್ರೀ ಮತ್ತು ಸಮಾಜ', ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೦೨. ವೆಂಕಟರಾವ್ ಬಿ.ವಿ., (ಲೇ. ಮತ್ತು ಸಂ.), ೨೦೦೨, **'ಕೃಷಿ ಮತ್ತು ಪರಿಸರ ಹೊಸ ಸವಾಲುಗಳು'**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೦೩. ವೃಷಭೇಂದ್ರಸ್ವಾಮಿ ಎಸ್.ಎಂ. (ಪ್ರ.ಸಂ.), ೧೯೮೭, **'ಜಾನಪದ ಸಾಹಿತ್ಯ ದರ್ಶನ'**, ಭಾಗ-೧೦, (ಜಾನಪದ ಹಬ್ಬಗಳು), ಪ್ರಸಾರಾಂಗ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧೦೪. ಶಂಕರನಾರಾಯಣ ತೀ.ನಂ., ೧೯೮೨, **'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು'**, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೧೦೫. ಶಂಕರನಾರಾಯಣ ತೀ.ನಂ. (ಸಂ.), ೧೯೮೫, **'ದ್ರಾವಿಡ ಜಾನಪದ'**, ಪ್ರಸಾರಾಂಗ, ಕನ್ನಡ ವಿಭಾಗ ಸ್ನಾತಕೋತ್ತರ ಕೇಂದ್ರ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೧೦೬. ಶಂಕರನಾರಾಯಣ ತೀ.ನಂ., ೧೯೯೯, **'ಜಾನಪದ ಸಮೀಕ್ಷೆ ವಿಶ್ಲೇಷಣೆ'**, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೧೦೭. ಶಮಂತ, ೨೦೦೧, **'ದುಡಿತ ಮಿಡಿತ'**, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೧೦೮. ಶರ್ಮ ಆರ್.ಎಸ್., ಅನು. ಶ್ರೀನಿವಾಸಮೂರ್ತಿ ಮತ್ತು ಇತರರು, ೨೦೦೪, **'ಪ್ರಾಚೀನ ಭಾರತದಲ್ಲಿ ಶೂದ್ರರು'**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೦೯. ಶಾಂತಿನಾಯಕ, ೧೯೮೩, **'ಜಾನಪದ ಸುಧಾ ಸಂಚಯ'**, ಜಾನಪದ ಪ್ರಕಾಶನ, ಹೊನ್ನಾವರ.

೧೧೦. ಶಾರದಾ ಶಾಮಣ್ಣ, ೧೯೯೩, **'ಜಾನಪದ ನೆಲೆಯಲ್ಲಿ ಮಹಿಳೆ'**, ಕಳಸ ಪ್ರಕಾಶನ, ಬೆಂಗಳೂರು.

೧೧೧. ಶಾರದಾ ಶಾಮಣ್ಣ, ೧೯೯೬, **'ಜಾನಪದ ಜಾಹ್ನವಿ'**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧೨. ಶಾಲಿನಿ ರಘುನಾಥ, ೨೦೦೨, **'ಹಸುಬೆ : ಜಾನಪದ ಅಧ್ಯಯನಗಳು'**, ಅಕ್ಷರ ಪ್ರಕಾಶನ, ಹೆಗ್ಗೋಡು.

೧೧೩. ಶಿವಾನಂದ ಚರಂತಮಠ., ೧೯೮೪, **'ಜಾನಪದ ನಾಲ್ಪಳ'**, ಶ್ರೀ ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳಿ, ಮೂರುಸಾವಿರ ಮಠ, ಹುಬ್ಬಳ್ಳಿ.

೧೧೪. ಶಿವರಾಮ ರೈ ಪಿ., ೧೯೯೫, **'ಕೃಷಿಕರ ಸಂಗಾತಿ'**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೧೫. ಶಿವರಾಮು ವ.ನಂ. (ಸಂ.), ೧೯೯೭, **'ಹಗೇವು ತುಂಬ್ಯಾವೆ ಹವಿನಾರು'**, ಪ್ರಕಾಶನ ಸ್ವಾಗತಿ ಸಮಿತಿ, ಮಂಡ್ಯ, ಜಿಲ್ಲಾ ಜನಪದ ಕಲಾಮೇಳ, ಹನುಮಂತನಗರ.

೧೧೬. ಶಿವರಾಮಶೆಟ್ಟಿ ಬಿ., ೨೦೦೦, **'ಸಸ್ಯ ಜಾನಪದ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧೭. ಶಿವನಂಜಯ್ಯ ಬಾಳೆಕಾಯಿ, ೨೦೦೨, **'ಪುಕುವೊಕನ್ ಹಾದಿಯಲ್ಲಿ'**, ನಮ್ಮ ಪ್ರಕಾಶನ, ತುಮಕೂರು.

೧೧೮. ಶ್ರೀಪಾದ ಅಮೃತ ಡಾಂಗೆ, ೧೯೮೩, **'ಭಾರತ ಸಂಘಜೀವನದಿಂದ ಗುಲಾಮಗಿರಿಗೆ'**, ಅನು: ಅನಂತಕೃಷ್ಣ ಹೆಬ್ಬಾರ್ ಎಂ. ರಾಮಚಂದ್ರ ಉಡುಪ ಎನ್., ಅಭಿವ್ಯಕ್ತಿ ಪ್ರಕಾಶನ, ಮಂಗಳೂರು.

೧೧೯. ಶ್ರೀಮತಿ ಎಚ್.ಎಸ್. ೨೦೦೨, **'ಗರ್ಭಾಶಯ-ಮಹಿಳೆಯ ಶಕ್ತಿಕೇಂದ್ರ'**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೦. ಶ್ರೀಮತಿ ಎಚ್.ಎಸ್., ೨೦೦೪, **'ಹೆಣ್ಣು-ಹೆಂಗಸು'**, ಬ್ಯಾಲದಕೆರೆ ಪ್ರಕಾಶನ, ಮಂಡ್ಯಜಿಲ್ಲೆ.

೧೨೧. ಶ್ರೀಮತಿ ಎಚ್.ಎಸ್., ಶಿವಾನಂದ ಎಸ್. ವಿರಕ್ತಮಠ., ಕೃಷ್ಣ ಜೆ. (ಸಂ.), ೨೦೦೩, **'ಮಹಿಳೆ ದುಡಿಮೆ ಮತ್ತು ಬಿಡುವು'**, ಪ್ರಸಾರಾಂಗ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೨. ಶೋಭ ಅಂದನೂರ, ಶ್ರೀಲಕ್ಷ್ಮಿ ಜಿ.ಜಿ. (ಸಂ.), ೧೯೮೮, **'ಮಹಿಳೆ ಮುನ್ನಡೆ'**, ಮಾನಿನಿ ಪ್ರಕಾಶನ.

೧೨೩. ಸಂಗಮೇಶ್ ಹಂಡಿಗಿ, ೧೯೮೨, **'ಜನಪದ ಸಾಹಿತ್ಯ ಮತ್ತು ದೈವಿಶ್ರದ್ಧೆ'**, ಜಗದ್ಗುರು ಗಂಗಾಧರ ಧರ್ಮ ಪ್ರಚಾರಕ ಮಂಡಳ, ಮೂರುಸಾವಿರ ಮಠ, ಹುಬ್ಬಳ್ಳಿ.

೧೨೪. ಸಂಧ್ಯಾರೆಡ್ಡಿ ಕೆ.ಆರ್. (ಸಂ.), ೨೦೦೩, **'ಮಹಿಳಾ ಜಾನಪದ'**, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೧೨೫. ಸಿದ್ಧರಾಮಯ್ಯ ಬಿ.ಎಸ್., ಉಷಾಕಿರಣ, ೨೦೦೬, **'ಸುಸ್ಥಿರ ಕೃಷಿ ಒಂದು ಚಿಂತನೆ'**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೨೬. ಸುಜಾತಾ ಅಕ್ಕಿ, ೧೯೯೮, **'ಸುರಗಿ ಸುಪ್ವಾಲೆ'**, ರಚನಾ ಪ್ರಕಾಶನ, ಹಗರಿಬೊಮ್ಮನಹಳ್ಳಿ.

೧೨೭. ಸೋಮಶೇಖರ ಇಮ್ರಾಪುರ, ೧೯೭೯, **'ನಮ್ಮ ಜಾನಪದ ಸಮೀಕ್ಷೆ'**, ಚೇತನ್ ಪ್ರಕಾಶನ, ಧಾರವಾಡ.

೧೨೮. ಹಂಪಿ, ಕನ್ನಡ ವಿಶ್ವವಿದ್ಯಾಲಯ ಹಾಗೂ ಹಾಸನ ಜಿಲ್ಲಾಡಳಿತ ಕೇಂದ್ರದ ವತಿಯಿಂದ ನಡೆಸಿದ **'ಕೃಷಿ ಪಾರಂಪಾರಿಕ ಜ್ಞಾನ'** ಎಂಬ ವಿಚಾರಸಂಕಿರಣವಲ್ಲಿ ಮಂಡಿಸಿದ ಲೇಖನಗಳು.

೧೨೯. ಹಲಸಂಗಿಯ ಚೆನ್ನಮಲ್ಲಪ್ಪ ಮತ್ತು ಗೆಳೆಯರು (ಸಂ.), ೧೯೯೦, **'ಗರತಿಯ ಹಾಡು'** (ತ್ರಿಪದಿ ಸಂಗ್ರಹ), ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೩೦. ಹನುಮಂತಪ್ಪ ಚಳ್ಳೇಕೆರೆ, ೧೯೯೪, **'ರಾಜ್ಯವನುಳಿಸೀತು ರಾಗೀಯ ಕಲ್ಲು'**, ಕಮಲ ಪ್ರಕಾಶನ.

೧೩೧. ಹಿರಿಯಣ್ಣ ಅಂಬಳಿಕೆ, ೧೯೯೪, **'ಜಾನಪದ ಲೋಚನ'**, ಪ್ರಜ್ವಲ ಪ್ರಕಾಶನ.

೧೩೨. ಹಿರೇಮಠ ಎಸ್.ಎಸ್., ೧೯೯೩, **'ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ'** ಭಾಗ-೨, ಜಾತ್ರೆಗಳು, ಸಮತಾ ಪ್ರಕಾಶನ, ಹೊಸಪೇಟೆ.

೧೩೩. ಹೇಮಲತಾ ಎಚ್.ಎಮ್., ೨೦೦೪, 'ಮಹಿಳಾ ಅಧ್ಯಯನ-೨', ರಾಜಕೀಯ ಪ್ರಕ್ರಿಯೆಗಳಲ್ಲಿ ಮಹಿಳೆಯರು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು, 'ಕೃಷಿ ಮಹಿಳೆಯರ ದುಡಿಮೆ'ಯ ವಿಶ್ಲೇಷಣೆ, ಡಿ.ವಿ.ಕೆ. ಮೂರ್ತಿ ಪ್ರಕಾಶನ, ಮೈಸೂರು.

೧೩೪. ಹೇಮಾ ಪಟ್ಟಣಶೆಟ್ಟಿ, ೨೦೦೫, 'ಕನ್ನಡ ನಾಟಕಗಳಲ್ಲಿ ಸ್ತ್ರೀಲೋಕ', ಅನನ್ಯ ಪ್ರಕಾಶನ, ಧಾರವಾಡ.

೧೩೫. ಹೇಮಲತಾ ಎಚ್.ಎಂ., ೨೦೦೬, 'ಮಹಿಳಾ ಅಧ್ಯಯನ-೩', ಮಹಿಳೆ ಮತ್ತು ದುಡಿಮೆ, ಮಹಿಳಾ ಅಭಿವೃದ್ಧಿ ಕಾರ್ಯನೀತಿ ಯೋಜನೆಗಳು, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು.

೧೩೬. ಹೊಸಮನಿ ಎಂ.ಎಂ., ಚಂದ್ರಯ್ಯ ಎಸ್.ಪಿ., ೧೯೯೩, 'ಕೃಷಿ ಉಪಕರಣಗಳು', ಕನ್ನಡ ಅಧ್ಯಯನ ವಿಭಾಗ, ಕೃಷಿವಿಶ್ವವಿದ್ಯಾಲಯ, ಬೆಂಗಳೂರು.

**ನಿಯತಕಾಲಿಕೆಗಳು**

೧. ಉಷಾ ಎಂ. (ಸಂ.), ಜನವರಿ-ಡಿಸೆಂಬರ್ ೨೦೦೩, 'ಮಹಿಳಾ ಅಧ್ಯಯನ', ಸಂಪುಟ ೫, ಸಂಚಿಕೆ ೧-೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. 'ಮಹಿಳಾ ವಿಮೋಚನೆ', ೧೯೯೯, ಮಹಿಳಾ ಜಾಗೃತಿಯ ಪ್ರಕಟಣೆ, ಬೆಂಗಳೂರು.

೩. ಯೋಜನಾ ಪತ್ರಿಕೆ, ೧೯೯೯ (ಅಕ್ಟೋಬರ್ ಮತ್ತು ಡಿಸೆಂಬರ್)

೪. ಯೋಜನಾ ಪತ್ರಿಕೆ, ೨೦೦೧ (ಜನವರಿ ಮತ್ತು ಫೆಬ್ರವರಿ)

೫. ಯೋಜನಾ ಪತ್ರಿಕೆ, ೨೦೦೬ (ಸೆಪ್ಟೆಂಬರ್)

೬. ರಮೇಶ ಸ.ಚಿ. (ಸಂ.), ೨೦೦೪, 'ಜಾನಪದ ಕರ್ನಾಟಕ', ಸಂಪುಟ ೩, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಶ್ರೀಮತಿ ಎಚ್.ಎಸ್. (ಸಂ.), ಜುಲೈ ೯೯, 'ಮಹಿಳಾ ಅಧ್ಯಯನ' (ದಕ್ಷಿಣಾಯನ ಸಂಚಿಕೆ) ಸಂಪುಟ ೧, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಶ್ರೀಮತಿ ಎಚ್.ಎಸ್. (ಸಂ.), ಜನವರಿ ೨೦೦೦, 'ಮಹಿಳಾ ಅಧ್ಯಯನ' (ಉತ್ತರಾಯಣ ಸಂಚಿಕೆ) ಸಂಪುಟ ೨, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಶ್ರೀಮತಿ ಎಚ್.ಎಸ್. (ಸಂ.), ಜುಲೈ ೨೦೦೨, 'ಮಹಿಳೆ ಅಧ್ಯಯನ' (ದಕ್ಷಿಣಾಯನ ಸಂಚಿಕೆ) ಸಂಪುಟ ೪, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ಶ್ರೀಮತಿ ಎಚ್.ಎಸ್. (ಸಂ.), ೨೦೦೩, 'ಮಹಿಳಾ ಅಧ್ಯಯನ', ಸಂಪುಟ ೪, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಶ್ರೀಧರ ಎ., ಸಿದ್ದಗಂಗಮ್ಮ (ಸಂ.), ೨೦೦೫, 'ಅಭಿವೃದ್ಧಿ ಅಧ್ಯಯನ', ಸಂ.೪, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

* * * * *

## ವಕ್ತೃಗಳ ವಿವರ

| ಕ್ರ.ಸಂ | ಹೆಸರು | ವಯಸ್ಸು | ವೃತ್ತಿ | ಜಾತಿ | ಸ್ಥಳ |
|---|---|---|---|---|---|
| ೧ | ಅಂಬಕ್ಕ | ೨೯ | ಕೃಷಿ ಕೂಲಿ | ಗಂಗಮತಸ್ಥರು | ಶಿರಬಡಗಿ |
| ೨ | ಅನ್ನಪೂರ್ಣ | ೩೦ | ಸಾಗುವಳಿದಾರರು | ಲಿಂಗಾಯತರು | ಬನ್ನೂರು |
| ೩ | ಅಕ್ಕಮ್ಮ | ೩೬ | ಕೃಷಿ ಕೂಲಿ | ಉಪ್ಪಾರರು | ಮುಗುಳಿ |
| ೪ | ಅಮರಮ್ಮ | ೩೮ | ಕೃಷಿ ಕೂಲಿ | ಹರಿಜನರು | ತಡಸ |
| ೫ | ಈರಕ್ಕ | ೩೦ | ಸಾಗುವಳಿದಾರರು | ಕುರುಬರು | ಕ್ಯಾಲಕೊಂಡ |
| ೬ | ಕಸ್ತೂರಿ | ೩೩ | ಕೃಷಿ ಕೂಲಿ | ಕುರುಬರು | ಅಗಡಿ |
| ೭ | ಕಾಶಮ್ಮ | ೩೪ | ಸಾಗುವಳಿದಾರರು | ಕುರುಬರು | ಮಂತ್ರೋಡಿ |
| ೮ | ಗಿರಿಜಾ | ೨೦ | ಕೃಷಿಕೂಲಿ | ಕುರುಬರು | ಬ್ಯಾಡಗಿ |
| ೯ | ಗೌರವ್ವ | ೪೧ | ಸಾಗುವಳಿದಾರರು | ಲಿಂಗಾಯತರು | ಬ್ಯಾಡಗಿ |
| ೧೦ | ಚನ್ನಮ್ಮ | ೩೪ | ಕೃಷಿ ಕೂಲಿ | ಹರಿಜನರು | ಕಾಮನಳ್ಳಿ |
| ೧೧ | ಚನ್ನಬಸವ್ವ | ೩೬ | ಕೃಷಿ ಕೂಲಿ | ಹರಿಜನರು | ಬಸನಕೊಪ್ಪ |
| ೧೨ | ಜಯಕ್ಕ | ೨೭ | ಕೃಷಿ ಕೂಲಿ | ಕುರುಬರು | ಸವಣೂರು |
| ೧೩ | ದ್ರಾಕ್ಷಾಯಿಣಿ | ೩೩ | ಕೃಷಿ ಕೂಲಿ | ಲಿಂಗಾಯತರು | ಮುಗುಳಿ |
| ೧೪ | ದ್ಯಾಮವ್ವ | ೩೬ | ಕೃಷಿ ಕೂಲಿ | ಕುರುಬರು | ಶಿಗ್ಗಾಂವ |
| ೧೫ | ನಾಗರತ್ನ | ೩೪ | ಕೃಷಿ ಕೂಲಿ | ಉಪ್ಪಾರರು | ಹುಲಗೂರ |
| ೧೬ | ನೀಲಕ್ಕ | ೩೬ | ಕೃಷಿ ಕೂಲಿ | ಹರಿಜನರು | ನೀರಲಗಿ |
| ೧೭ | ಪದ್ಮಾವತಿ | ೨೪ | ಕೃಷಿ ಕೂಲಿ | ಕುಂಬಾರರು | ಶಿಶುವಿನಹಾಳ |
| ೧೮ | ಪಾರವ್ವ | ೬೦ | ಸಾಗುವಳಿದಾರರು | ಲಿಂಗಾಯತರು | ದೇವಿಹೊಸೂರು |
| ೧೯ | ಪುಟ್ಟಮ್ಮ | ೫೬ | ಕೃಷಿ ಕೂಲಿ | ಕುರುಬರು | ಸವಣೂರು |
| ೨೦ | ಪ್ರೇಮಾ | ೩೭ | ಕೃಷಿ ಕೂಲಿ | ಕಬ್ಬೇರರು | ತಡಸ |
| ೨೧ | ಬಸಕ್ಕ | ೩೪ | ಸಾಗುವಳಿದಾರರು | ಲಿಂಗಾಯತರು | ಕರಜಗಿ |
| ೨೨ | ಮಂಗಳಕ್ಕ | ೩೦ | ಕೃಷಿ ಕೂಲಿ | ಸಾದರು | ಹೊಸೂರು |
| ೨೩ | ಮಂಜಕ್ಕ | ೩೮ | ಸಾಗುವಳಿದಾರರು | ಬಣಜಿಗಶೆಟ್ಟರು | ಹೊಸೂರು |
| ೨೪ | ಮಲ್ಲಮ್ಮ | ೪೦ | ಸಾಗುವಳಿದಾರರು | ಲಿಂಗಾಯತರು | ಮೊಟಳ್ಳಿ |

| | | | | | |
|---|---|---|---|---|---|
| ೨೫ | ಮಾದೇವಿ | ೨೯ | ಕೃಷಿ ಕೂಲಿ | ಚಲುವಾದಿ | ಹೊಸೂರು |
| ೨೬ | ಮಾರಮ್ಮ | ೪೨ | ಕೃಷಿ ಕೂಲಿ | ಹರಿಜನ | ಶಿಗ್ಗಾಂವ |
| ೨೭ | ಮೀನಾಕ್ಷಿ | ೪೪ | ಕೃಷಿ ಕೂಲಿ | ತಳವಾರ | ಕಾರಡಗಿ |
| ೨೮ | ಯಲ್ಲಮ್ಮ | ೩೮ | ಕೃಷಿ ಕೂಲಿ | ಹರಿಜನ | ಶಿರಬಡಗಿ |
| ೨೯ | ರಾಧಮ್ಮ | ೨೮ | ಕೃಷಿ ಕೂಲಿ | ಆರ್‍ಯಾರು(ಮರಾಠರು) | ಕಾಮನಳ್ಳಿ |
| ೩೦ | ರಾಜಮ್ಮ | ೨೯ | ಕೃಷಿ ಕೂಲಿ | ಗಂಗಮತಸ್ಥರು | ಮಣ್ಣೂರು |
| ೩೧ | ರುಕ್ಮಿಣಿ | ೩೮ | ಕೃಷಿ ಕೂಲಿ | ಕುರುಬರು | ಗಂಜಿಗಟ್ಟಿ |
| ೩೨ | ರೇಣುಕಾ ರೇಣವ್ವ | ೫೨ | ಸಾಗುವಳಿದಾರರು | ಲಿಂಗಾಯತರು | ಕಾಮನಹಳ್ಳಿ |
| ೩೩ | ಲಕ್ಷ್ಮಿ | ೨೮ | ಕೃಷಿ ಕೂಲಿ | ಕುರುಬರು | ಬನ್ನಿಕೊಪ್ಪ |
| ೩೪ | ಲಲಿತಾ | ೪೨ | ಕೃಷಿ ಕೂಲಿ | ಗಾಣಿಗರು | ಬ್ಯಾಡಗಿ |
| ೩೫ | ಶಂಕ್ರವ್ವ | ೩೦ | ಕೃಷಿ ಕೂಲಿ | ಹರಿಜನ | ಕಾರಡಗಿ |
| ೩೬ | ಶಾಂತವ್ವ | ೫೦ | ಸಾಗುವಳಿದಾರರು | ಬಣಜಿಗಶೆಟ್ರು | ಸವಣೂರು |
| ೩೭ | ಶಾರದಾ | ೩೮ | ಕೃಷಿ ಕೂಲಿ | ಉಪ್ಪಾರರು | ಯತ್ನಳ್ಳಿ |
| ೩೮ | ಶಿವಲೀಲಾ | ೨೮ | ಕೃಷಿ ಕೂಲಿ | ಲಿಂಗಾಯತರು | ಮೂಟೆಬೆನ್ನೂರು |
| ೩೯ | ಶಿವಗಂಗಮ್ಮ | ೫೨ | ಸಾಗುವಳಿದಾರರು | ಬಣಜಿಗರು | ಅಂದಲಗಿ |
| ೪೦ | ಶಕುಂತಲಾ | ೨೫ | ಕೃಷಿ ಕೂಲಿ | ಲಿಂಗಾಯತರು | ಗುತ್ತಲ |
| ೪೧ | ಶೇಕವ್ವ | ೨೯ | ಕೃಷಿ ಕೂಲಿ | ಬಣಜಿಗರು | ಅಂದಲಗಿ |
| ೪೨ | ಸರ್ವಮಂಗಳ | ೨೮ | ಸಾಗುವಳಿದಾರರು | ಬಣಜಿಗರು | ಬಸರಿಕಟ್ಟಿ |
| ೪೩ | ಸರಸ್ವತಿ | ೩೫ | ಕೃಷಿ ಕೂಲಿ | ಕುರುಬರು | ಹಳಿಯಾಳ |
| ೪೪ | ಸರೋಜಕ್ಕ | ೩೦ | ಸಾಗುವಳಿದಾರರು | ಕಂಬಾರ | ದೇವಿಹೊಸೂರು |
| ೪೫ | ಸಾವಿತ್ರಿ | ೪೦ | ಸಾಗುವಳಿದಾರರು | ಲಿಂಗಾಯತರು | ಶಿಗ್ಗಾಂವ |
| ೪೬ | ಸಿದ್ಧಗಂಗಮ್ಮ | ೩೨ | ಕೃಷಿ ಕೂಲಿ | ಚಲುವಾದಿಗಳು | ಬನ್ನೂರು |
| ೪೭ | ಸುವರ್ಣ | ೩೫ | ಸಾಗುವಳಿದಾರರು | ಲಿಂಗಾಯತರು | ಅತ್ತಿಗೇರಿ |
| ೪೮ | ಸುಶೀಲಕ್ಕ | ೪೪ | ಕೃಷಿ ಕೂಲಿ | ಕುರುಬರು | ಅತ್ತಿಗೇರಿ |
| ೪೯ | ಸೋಮಕ್ಕ | ೩೭ | ಕೃಷಿ ಕೂಲಿ | ಹರಿಜನರು | ಬಂಕಾಪುರ |
| ೫೦ | ಸೋನಮ್ಮ | ೫೫ | ಕೃಷಿ ಕೂಲಿ | ಆರ್‍ಯಾರು(ಮರಾಠರು) | ಶಿಗ್ಗಾಂವ |

| ೨೫ | ಮಾದೇವಿ | ೨೯ | ಕೃಷಿ ಕೂಲಿ | ಚಲುವಾದಿ | ಹೊಸೂರು |
|---|---|---|---|---|---|
| ೨೬ | ಮಾರಮ್ಮ | ೪೨ | ಕೃಷಿ ಕೂಲಿ | ಹರಿಜನ | ಶಿಗ್ಗಾಂವ |
| ೨೭ | ಮೀನಾಕ್ಷಿ | ೪೪ | ಕೃಷಿ ಕೂಲಿ | ತಳವಾರ | ಕಾರಡಗಿ |
| ೨೮ | ಯಲ್ಲಮ್ಮ | ೩೮ | ಕೃಷಿ ಕೂಲಿ | ಹರಿಜನ | ಶಿರಬಡಗಿ |
| ೨೯ | ರಾಧಮ್ಮ | ೨೮ | ಕೃಷಿ ಕೂಲಿ | ಆರ್ಯಾರು(ಮರಾಠರು) | ಕಾಮನಳ್ಳಿ |
| ೩೦ | ರಾಜಮ್ಮ | ೨೯ | ಕೃಷಿ ಕೂಲಿ | ಗಂಗಮತಸ್ಥರು | ಮಣ್ಣೂರು |
| ೩೧ | ರುಕ್ಮಿಣಿ | ೩೮ | ಕೃಷಿ ಕೂಲಿ | ಕುರುಬರು | ಗಂಜಿಗಟ್ಟಿ |
| ೩೨ | ರೇಣುಕಾ ರೇಣವ್ವ | ೫೨ | ಸಾಗುವಳಿದಾರರು | ಲಿಂಗಾಯತರು | ಕಾಮನಹಳ್ಳಿ |
| ೩೩ | ಲಕ್ಷ್ಮಿ | ೨೮ | ಕೃಷಿ ಕೂಲಿ | ಕುರುಬರು | ಬನ್ನಿಕೊಪ್ಪ |
| ೩೪ | ಲಲಿತಾ | ೪೨ | ಕೃಷಿ ಕೂಲಿ | ಗಾಣಿಗರು | ಬ್ಯಾಡಗಿ |
| ೩೫ | ಶಂಕ್ರವ್ವ | ೩೦ | ಕೃಷಿ ಕೂಲಿ | ಹರಿಜನ | ಕಾರಡಗಿ |
| ೩೬ | ಶಾಂತವ್ವ | ೫೦ | ಸಾಗುವಳಿದಾರರು | ಬಣಜಿಗಶೆಟ್ರು | ಸವಣೂರು |
| ೩೭ | ಶಾರದಾ | ೩೮ | ಕೃಷಿ ಕೂಲಿ | ಉಪ್ಪಾರರು | ಮುತ್ತಳ್ಳಿ |
| ೩೮ | ಶಿವಲೀಲಾ | ೨೮ | ಕೃಷಿ ಕೂಲಿ | ಲಿಂಗಾಯತರು | ಮೋಟೆಬೆನ್ನೂರು |
| ೩೯ | ಶಿವಗಂಗಮ್ಮ | ೫೨ | ಸಾಗುವಳಿದಾರರು | ಬಣಜಿಗರು | ಅಂದಲಗಿ |
| ೪೦ | ಶಕುಂತಲಾ | ೨೫ | ಕೃಷಿ ಕೂಲಿ | ಲಿಂಗಾಯತರು | ಗುತ್ತಲ |
| ೪೧ | ಶೇಕವ್ವ | ೨೯ | ಕೃಷಿ ಕೂಲಿ | ಬಣಜಿಗರು | ಅಂದಲಗಿ |
| ೪೨ | ಸರ್ವಮಂಗಳ | ೨೮ | ಸಾಗುವಳಿದಾರರು | ಬಣಜಿಗರು | ಬಸುಕಟ್ಟಿ |
| ೪೩ | ಸರಸ್ವತಿ | ೩೫ | ಕೃಷಿ ಕೂಲಿ | ಕುರುಬರು | ಹಳಿಯಾಳ |
| ೪೪ | ಸರೋಜಕ್ಕ | ೩೦ | ಸಾಗುವಳಿದಾರರು | ಕಂಬಾರ | ದೇವಿಹೊಸೂರು |
| ೪೫ | ಸಾವಿತ್ರಿ | ೪೦ | ಸಾಗುವಳಿದಾರರು | ಲಿಂಗಾಯತರು | ಶಿಗ್ಗಾಂವ |
| ೪೬ | ಸಿದ್ದಗಂಗಮ್ಮ | ೩೨ | ಕೃಷಿ ಕೂಲಿ | ಚಲುವಾದಿಗಳು | ಬನ್ನೂರು |
| ೪೭ | ಸುವರ್ಣ | ೩೫ | ಸಾಗುವಳಿದಾರರು | ಲಿಂಗಾಯತರು | ಅತ್ತಿಗೇರಿ |
| ೪೮ | ಸುಶೀಲಕ್ಕ | ೪೪ | ಕೃಷಿ ಕೂಲಿ | ಕುರುಬರು | ಅತ್ತಿಗೇರಿ |
| ೪೯ | ಸೋಮಕ್ಕ | ೩೬ | ಕೃಷಿ ಕೂಲಿ | ಹರಿಜನರು | ಬಂಕಾಪುರ |
| ೫೦ | ಸೋನಮ್ಮ | ೫೫ | ಕೃಷಿ ಕೂಲಿ | ಆರ್ಯಾರು(ಮರಾಠರು) | ಶಿಗ್ಗಾಂವ |

ಹೊಲ ಹೊಡೆಯುತ್ತಿರುವ ಮಹಿಳೆ




(ಕೃಪೆ: ತರಂಗ ಪತ್ರಿಕೆ, 15 ಸೆಪ್ಟೆಂಬರ್ ೨೦05)



ಬಂಡಿ ಹೊಡೆಯುತ್ತಿರುವ ಹುಡುಗಿ

(ಕೃಪೆ: ತರಂಗ ಪತ್ರಿಕೆ, 15 ಸೆಪ್ಟೆಂಬರ್ ೨೦05)



ಭತ್ತ ತೂರುತ್ತಿರುವ ಮಹಿಳೆ.

( ಕೃಪೆ: ಸಂಯುಕ್ತ ಕರ್ನಾಟಕ ಪತ್ರಿಕೆ )

